# ನಿಮಗೆ ಗೊತ್ತೆ?

## ಎಚ್.ಐ.ವಿ ಸೋಂಕಿತ ತಾಯಿ ಕೂಡ ಸೋಂಕುರಹಿತ ಮಗುವಿಗೆ ಜನ್ಮನೀಡಬಹುದು



ಇಂದೇ ವೈದ್ಯರನ್ನು ಭೇಟಿ ಮಾಡಿ,
ಸರಿಯಾದ ಮಾಹಿತಿ
ಮತ್ತು ಸೂಕ್ತ ಚಿಕಿತ್ಸೆ ಪಡೆಯಿರಿ





## ಎಚ್ ಐ ವಿ ಸೋಂಕು ಕೇವಲ 4 ವಿಧಾನಗಳಲ್ಲಿ ಮಾತ್ರ ಹರಡುತ್ತದೆ

ಎಚ್‌ಐವಿ ಹೊಂದಿರುವ ವ್ಯಕ್ತಿಯೊಂದಿಗೆ ಅಸುರಕ್ಷಿತ (ಕಾಂಡೋಮ್ ರಹಿತವಾಗಿ) ಲೈಂಗಿಕ ಸಂಬಂಧ ಮಾಡಿಕೊಳ್ಳುವುದರಿಂದ.









ಎಚ್‌ಐವಿ ಸೋಂಕಿತ ತಾಯಿಯಿಂದ ಮಗುವಿಗೆ ಗರ್ಭಾವಸ್ಥೆಯಲ್ಲಿ, ಹೆರಿಗೆ ಸಮಯದಲ್ಲಿ ಅಥವಾ ಎದೆ ಹಾಲಿನ ಮೂಲಕ

ಎಚ್‌ಐವಿ ಸೋಂಕಿತ ರಕ್ತವನ್ನು ಪರೀಕ್ಷೆ ಮಾಡದೇ ಪಡೆಯುವುದರಿಂದ

ಎಚ್‌ಐವಿ ಸೋಂಕಿತ ಸೂಜಿ, ಸಿರಂಜು, ಹರಿತವಾದ ಸಲಕರಣೆಗಳನ್ನು ಸಂಸ್ಕರಿಸದೇ ಬಳಸುವುದರಿಂದ

ಎಚ್‌ಐವಿ ಮಾಹಿತಿ ಮತ್ತು ಸಲಹೆಗಾಗಿ ಕರೆಮಾಡಿ ಉಚಿತ ಸಹಾಯವಾಣಿ

**ಸಂಪರ್ಕಿಸಿ 1800-425-8500**

(ಸೋಮವಾರದಿಂದ ಶನಿವಾರ, ಬೆಳಿಗ್ಗೆ 8 ರಿಂದ ಸಂಜೆ 8 ರವರೆಗೆ)

ಪ್ರಕಟಣೆ : ಕರ್ನಾಟಕ ರಾಜ್ಯ ಏಡ್ಸ್ ಪ್ರಿವೆನ್‌ಷನ್ ಸೊಸೈಟಿ

ನಂ. 4–13/1, ಕ್ರೆಸೆಂಟ್ ರಸ್ತೆ, ಹೈ ಗ್ರೌಂಡ್ಸ್, ಬೆಂಗಳೂರು – 560 001. ದೂರವಾಣಿ : 080–2220 1465 , ಫ್ಯಾಕ್ಸ್ : 080–22201435

ಹೊಸತು
ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...



**ಚಿತ್ರಗಳು :** ರವಿ ಹೆಗ್ಗಡಿ, ಸುವರ್ಣ, ಕಮಲಂ ಅರಸು, ಶ್ರೀಹರಿ,
ವಿ. ಗೋಪಾಲ್, ವಿ. ಆರ್. ಸಿ. ಶೇಖರ್
**ಮುಖಪುಟ :** ಭಾಂವ್ರಿದೇವಿ **ವಿನ್ಯಾಸ :** ನವಕರ್ನಾಟಕ ವಿನ್ಯಾಸ
**ಮುಖಪುಟದ ಛಾಯಾಚಿತ್ರ :** ನೇಮಿಚಂದ್ರ
**ಕಚೇರಿ ಸಹಕಾರ :** ಜಿ. ವಿ. ತೇಜೋವತಿ

## ಈ ತಿಂಗಳು

ನಮ್ಮ ಕರ್ನಾಟಕ ರಾಜ್ಯದಲ್ಲಿ ಹತ್ತಾರು ವಿಶ್ವವಿದ್ಯಾನಿಲಯಗಳಿವೆ. ಒಂದು ಕಾಲದಲ್ಲಿ ಹೆಸರುವಾಸಿಯಾಗಿದ್ದ ವಿಶ್ವವಿದ್ಯಾನಿಲಯಗಳು ಈಗ ಗೊಂದಲದ ಗೂಡಾಗಿವೆ. ಜಾತಿ, ರಾಜಕೀಯ, ಭ್ರಷ್ಟಾಚಾರ, ಸ್ವಜನಪಕ್ಷಪಾತ ಇಂಥ ಅನಿಷ್ಟಗಳೆಲ್ಲ ತುಂಬಿಕೊಂಡು ಅವ್ಯವಸ್ಥೆಯ ಆಗರವಾಗಿವೆ. ಈಗ ಅಧಿಕಾರದಲ್ಲಿರುವ ಭಾಜಪ ಸರಕಾರ ಇನ್ನಷ್ಟು ವಿಶ್ವವಿದ್ಯಾನಿಲಯಗಳ ಸ್ಥಾಪನೆಗೆ ಹೊರಟಿದೆ. ಈಚೆಗೆ ಖಾಸಗಿ ವಿಶ್ವವಿದ್ಯಾನಿಲಯಗಳ ಸ್ಥಾಪನೆಯ ಮಸೂದೆಗೆ ಅವಾಂತರದಲ್ಲಿ ಅಂಗೀಕಾರ ಪಡೆದುಕೊಂಡಿದ್ದು ಎಲ್ಲರಿಗೂ ತಿಳಿದಿದೆ. ಇದರಲ್ಲಿ 'ಆಧ್ಯಾತ್ಮಿಕ' ವಿಶ್ವವಿದ್ಯಾನಿಲಯವೂ ಒಂದು ಸೇರಿಕೊಂಡಿದೆ. ಇದರಲ್ಲಿ ಯಾವ ಯಾವ ವಿಭಾಗ ಸೇರಿಕೊಳ್ಳುತ್ತವೆ, ರೂಪುರೇಷೆ ಏನು ಎಂಬ ವಿವರಗಳನ್ನು ಕಾದು ನೋಡಬೇಕಾಗಿದೆ. ಪ್ರಗತಿಪರ ಸಂಘಟನೆಗಳಿಂದ ಈಗಾಗಲೇ ಪ್ರತಿರೋಧ ವ್ಯಕ್ತವಾಗಿದೆ. ಸಂಸ್ಕೃತ ವಿಶ್ವವಿದ್ಯಾನಿಲಯ ಸ್ಥಾಪನೆಗೆ ಬಂದ ವಿರೋಧವನ್ನು ನೆನಪಿಸಿಕೊಳ್ಳಬಹುದು. ಈ ವಿಶ್ವವಿದ್ಯಾನಿಲಯ ಏನು ಕಡಿದು ಕಟ್ಟೆ ಹಾಕಿದೆಯೋ ತಿಳಿಯದು. ಅಧ್ಯಾತ್ಮ ಪೀಠಗಳಿಗೆ ನಮ್ಮ ದೇಶದಲ್ಲಿ ಕೊರತೆ ಏನಿಲ್ಲ. ಭಾಜಪ ಅಧಿಕಾರಕ್ಕೆ ಬಂದಮೇಲೆ ತೆರಿಗೆದಾರರ ಹಣ ನುಂಗಿ ತೇಗುತ್ತಿರುವ ಮಠಮಾನ್ಯಗಳು ಸಾಕಷ್ಟು ಮೌಢ್ಯವನ್ನೂ, ಪುರೋಹಿತಶಾಹಿಯನ್ನೂ ಪೋಷಿಸುತ್ತಿವೆ. ಈಗ ಅಧ್ಯಾತ್ಮ ವಿಶ್ವವಿದ್ಯಾನಿಲಯ ಪೌರೋಹಿತ್ಯ, ಆಗಮಶಾಸ್ತ್ರ, ಯಜ್ಞಯಾಗಾದಿ ಕರ್ಮಗಳ ಅನುಷ್ಠಾನ, ಜ್ಯೋತಿಶ್ಶಾಸ್ತ್ರ, ಮಾಟಮಂತ್ರ, ತಾಯಿತಗಳ ವಿತರಣೆ ಇತ್ಯಾದಿ ವಿಷಯಗಳನ್ನು ಬೋಧಿಸುವುದು ಖಚಿತವಾಗಿದೆ. ಇದೇನಾದರೂ ಅಸ್ತಿತ್ವಕ್ಕೆ ಬಂದರೆ ಬುರುಡೇ ದಾಸಯ್ಯಗಳಿಗೆ ಸುಗ್ಗಿಯೋ ಸುಗ್ಗಿ. ಈಗಾಗಲೇ ಉಪಕುಲಪತಿಯಾಗಲು ಇವರು ಸರಕಾರದ ಕದ ತಟ್ಟುತ್ತಿದ್ದಾರೇನೋ.

ಅಂದಹಾಗೆ ನಮ್ಮ ಪ್ರತಿಷ್ಠಿತ ವಿಶ್ವವಿದ್ಯಾನಿಲಯಗಳು ಅವ್ಯವಸ್ಥೆಯ ಆಗರವಾಗಿವೆ ಎಂದು ಮೊದಲೇ ಹೇಳಿದ್ದೇವೆ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ರಿಜಿಸ್ಟ್ರಾರ್ ಮತ್ತು ಉಪಕುಲಪತಿ ನಡುವೆ ನಡೆದ ಕಚ್ಚಾಟ ನೆನಪಿದೆ ತಾನೆ. ಅಲ್ಲೇ ಕಲುಷಿತ ವ್ಯವಸ್ಥೆಯಿಂದ ಬೇಸತ್ತ ಸಮಾಜ ವಿಜ್ಞಾನ ವಿಭಾಗದ ಪ್ರಾಧ್ಯಾಪಕರು ಆತ್ಮಹತ್ಯೆ ಮಾಡಿಕೊಂಡರು. ಈವರೆಗೆ ಈ ಪ್ರಕರಣದ ತನಿಖೆ ನಡೆದಿಲ್ಲ. ಉಪಕುಲಪತಿ ಸ್ಥಾನದ ನೇಮಕದ ವಿಷಯದಲ್ಲಂತೂ ಯಾವತ್ತೂ ಗೊಂದಲ, ಭ್ರಷ್ಟಾಚಾರ, ಕೋಟಿಗಟ್ಟಲೆ ಅವ್ಯವಹಾರ. ಇದರಲ್ಲಿ ಕುಲಪತಿಗಳ ಕೈವಾಡವೂ ಇದೆ ಎಂದು ತಿಳಿದುಬಂದಿದೆ. ಈ ಬಗ್ಗೆ ಬೆಂಗಳೂರು ವಿಶ್ವವಿದ್ಯಾನಿಲಯದ ಮಾಜಿ ಉಪಕುಲಪತಿಯೊಬ್ಬರು ಈ ವಿಚಾರದಲ್ಲಿ ನೇರವಾಗಿ ಆಪಾದನೆ ಮಾಡಿದ್ದಾರೆ. ಉನ್ನತ ಶಿಕ್ಷಣ ಒದಗಿಸುವ ಈ ವಿಶ್ವವಿದ್ಯಾನಿಲಯಗಳ ದುಸ್ಥಿತಿ ನೋಡಿದರೆ ಮುಂದೇನು ಕಾದಿದೆಯೋ.

* * *

ಟಿವಿ ಮಾಧ್ಯಮದಲ್ಲಿ ಸಮಕಾಲೀನ ವಿಷಯಗಳ ಕುರಿತು ನಡೆಯುವ ಚರ್ಚೆಗಳೆಲ್ಲ ಒಣ ಚರ್ಚೆ. ಯಾವ ಪುರುಷಾರ್ಥವನ್ನೂ ಸಾಧಿಸುವುದಿಲ್ಲ ಅವು. ಇಂಥ ಚರ್ಚೆಗಳಲ್ಲಿ ಭಾಗವಹಿಸುವವರು ತಾವು ಪ್ರಾಜ್ಞರೆಂದು ತಿಳಿದುಕೊಂಡುಬಿಟ್ಟಿರುತ್ತಾರೆ. ಬೋರು ಹೊಡೆಯುವ ಧಾರಾವಾಹಿಗಳಂತೆಯೇ ಈ ಒಣ ಚರ್ಚೆಯೂ ಮಹಾಬೋರು. ಈಚೆಗೆ ಕನ್ನಡದ ಚಾನೆಲ್ ಒಂದು ಸತತವಾಗಿ ಮೂರು ನಾಲ್ಕು ದಿನ ಪತ್ರಿಕೋದ್ಯಮದಲ್ಲಿ ಭ್ರಷ್ಟಾಚಾರ ಕುರಿತು ಚರ್ಚೆ ಏರ್ಪಡಿಸಿತ್ತು. ಕುತೂಹಲದಿಂದ ಸ್ವಲ್ಪ ಹೊತ್ತು ಈ ಚಾನೆಲ್‌ನ ಚರ್ಚೆಯನ್ನು ಆಲಿಸಿದ್ದಾಯಿತು. ಭಾಗವಹಿಸಿದ್ದವರೆಲ್ಲ ಪ್ರಜಾಪ್ರಭುತ್ವದ ನಾಲ್ಕನೇ ಆಯಾಮ, ಜನಪದದ ಮುಖವಾಣಿ ಎಂದೆಲ್ಲ ಪ್ರತಿಬಿಂಬಿತವಾಗಿರುವ ಈ ಕ್ಷೇತ್ರವನ್ನು ಭ್ರಷ್ಟಾಚಾರ ಆವರಿಸಿರುವುದರ ಬಗ್ಗೆ ಖೇದ ವ್ಯಕ್ತಗೊಳಿಸಿದರು. ಇದರಲ್ಲಿ ವಿಶೇಷವೇನಿಲ್ಲ. ಪತ್ರಿಕೋದ್ಯಮ ಜಾಗತೀಕರಣ, ಉದಾರೀಕರಣಗಳ ಈ ದಿನಗಳಲ್ಲಿ ಎಂದೋ ಒಂದು ದೊಡ್ಡ ವಾಣಿಜ್ಯೋದ್ಯಮವಾಗಿ ಬೆಳೆದಿದೆ. ಕೋಟಿಗಟ್ಟಲೆ ಬಂಡವಾಳ ಅಗತ್ಯವಿರುವ ಈ ಉದ್ಯಮದ ಸೂತ್ರ ಭಾರಿ ಉದ್ಯಮಿಗಳ, ಬಂಡವಾಳಗಾರರ ಕೈವಶವಾಗಿ ಎಷ್ಟೋ ಕಾಲವಾಯಿತು. ಸ್ವಾತಂತ್ರ್ಯಾನಂತರದ ಕಾಲದಲ್ಲಿ ಪತ್ರಿಕೋದ್ಯಮ, ಪತ್ರಕರ್ತರ ಸ್ಥಿತಿಗತಿ ಕುರಿತು ಅಧ್ಯಯನ ನಡೆಸಲು

(೭ನೇ ಪುಟಕ್ಕೆ)




ಸಂಪುಟ-೧೪ ಸಂಚಿಕೆ-೯ ಏಪ್ರಿಲ್ ೨೦೧೩



**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೯೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
e-mail : navakarnataka@gmail.com
hosathu@gmail.com
hosathu.nkp@gmail.com
URL : www.navakarnataka.com
http : //navakarnataka.blogspot.in
http : //hosathumonthly.blogspot.in




# ಆಯ್ಕೆಯೇ ಇಲ್ಲದ ಮತದಾರ

ಕರ್ನಾಟಕ ವಿಧಾನಸಭೆಗೆ ಚುನಾವಣೆ ಘೋಷಣೆಯಾಗಿದೆ. ಪದೇ ಪದೇ ತಿರಸ್ಕರಿಸಿದ ಪಕ್ಷಗಳಲ್ಲೇ ಮತ್ತೆ ಹುಡುಕಾಟ ನಡೆಸುವ ಅನಿವಾರ್ಯತೆಗೆ ರಾಜ್ಯದ ಮತದಾರರು ಒಳಗಾಗಿದ್ದಾರೆ. ರಾಜ್ಯ ಕಂಡರಿಯದಂಥ ಭಯಾನಕ, ಭ್ರಷ್ಟ ಸರಕಾರವನ್ನು ನಮ್ಮ ಪ್ರಜೆಗಳು ಈ ಬಾರಿ ಕಂಡಿದ್ದಾರೆ. ಅದೇ ಸಂದರ್ಭದಲ್ಲಿ ಜನಪರವಾಗಿ ಧ್ವನಿಯೆತ್ತದ, ರಾಜ್ಯದ ಹಿತಾಸಕ್ತಿಗಾಗಿ ಹೋರಾಡದ ವಿರೋಧ ಪಕ್ಷಗಳನ್ನೂ ನೋಡಿದ್ದಾರೆ. ಆಳುವ ಪಕ್ಷದ ದುರ್ನಡತೆಗಳನ್ನು ನಿಯಂತ್ರಿಸುವ, ಬಯಲಿಗೆಳೆಯುವ ಎಲ್ಲ ಅವಕಾಶಗಳು ಕಣ್ಣ ಮುಂದಿದ್ದರೂ ಸಮರ್ಥವಾಗಿ ನಿಭಾಯಿಸದ ವಿರೋಧ ಪಕ್ಷಗಳು ಈಗ ಅಧಿಕಾರಕ್ಕೇರಲು ಹವಣಿಸುತ್ತಿರುವುದು ಈ ರಾಜ್ಯದ ರಾಜಕೀಯ ವ್ಯವಸ್ಥೆಯ ದುರಂತ. ಆಳುವ ಪಕ್ಷದ ಜನವಿರೋಧಿ ನೀತಿಗಳನ್ನು ಎದುರಿಸಲು ಜನಪರವಾದ ನೀತಿಗಳನ್ನು ವಿರೋಧ ಪಕ್ಷಗಳು ಮೈಗೂಡಿಸಿಕೊಳ್ಳಬೇಕಾಗುತ್ತದೆ. ಆಳುವ ಪಕ್ಷ ಕೇವಲ ತನ್ನ ನೀತಿಗಳಿಂದಾಗಿಯೇ ಕುಸಿದು ಜನತೆಯಿಂದ ತಿರಸ್ಕೃತವಾದಾಗ, ಅನಿವಾರ್ಯವಾಗಿ ಅಧಿಕಾರಕ್ಕೆ ಬರುವ ಪಕ್ಷಕ್ಕೆ ನೈತಿಕತೆ ಇರುವುದಿಲ್ಲ. ಅದು ಬೇರೆ ಆಯ್ಕೆಗಳಿಲ್ಲದೇ ಜನತೆ ಕೊಟ್ಟ ಅಸಹಾಯಕ ತೀರ್ಪಾಗಿರುತ್ತದೆ. ಇಂಥ ಸೂಚನೆಯನ್ನು ಈಗಾಗಲೇ ಮಾರ್ಚ್ ತಿಂಗಳಲ್ಲಿ ನಡೆದ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಮತದಾರ ಕೊಟ್ಟಾಗಿದೆ.

ವಿಧಾನಸಭೆ ಚುನಾವಣೆ ಘೋಷಣೆಯಾಗುವುದಕ್ಕೆ ಕೆಲವೇ ದಿನಗಳ ಮುಂಚೆ ಬಂದ ನಗರ ಸ್ಥಳೀಯ ಸಂಸ್ಥೆಗಳ ಚುನಾವಣೆಗಳ ಫಲಿತಾಂಶ ಮತದಾರರ ಚಿಂತನೆಯನ್ನು ತೋರಿಸುತ್ತದೆ. ಇದ್ದುದರಲ್ಲಿಯೇ ಕಾಂಗ್ರೆಸ್ ಪಕ್ಷ ಸ್ವಲ್ಪ ಮುನ್ನಡೆಯನ್ನು ಪಡೆದಿದ್ದು ಬಿಟ್ಟರೆ, ಕಾಂಗ್ರೆಸ್ ಆದಿಯಾಗಿ ಎಲ್ಲ ರಾಜಕೀಯ ಪಕ್ಷಗಳಿಗೂ ನೀವು ನಮ್ಮ ಆಡಳಿತದ ಆಯ್ಕೆಯಲ್ಲ ಎಂದು ಮತದಾರ ಹೇಳಿದ್ದಾನೆ. ಬಹುತೇಕ ರಾಜಕೀಯ ಪಕ್ಷಗಳು ಈ ಸ್ಥಳೀಯ ಸಂಸ್ಥೆ ಚುನಾವಣೆ ವಿಧಾನಸಭೆ ಚುನಾವಣೆಯ ದಿಕ್ಸೂಚಿ ಅಲ್ಲ ಎಂದು ಹೇಳುವುದರ ಮೂಲಕ ಮತದಾರರಿಗೆ ಅವಮಾನ ಮಾಡಿದ್ದಾರೆ. ವಿಧಾನಸಭಾ ಚುನಾವಣೆಗೆ ಇವರೂ ಮತದಾರರು ಎಂಬ ಅಂಶವನ್ನೇ ಮರೆತಿದ್ದಾರೆ. ನಗರಗಳು ಮಾತ್ರವಲ್ಲ ಪಟ್ಟಣ ಪಂಚಾಯತಿಯ ಪ್ರಜೆಗಳು ಕೂಡ ಇಲ್ಲಿ ಮತ ಚಲಾಯಿಸಿದ್ದನ್ನು ಗಮನಿಸಬೇಕು. ಈ ಫಲಿತಾಂಶವನ್ನು ಗಮನಿಸಿದರೆ ಮತದಾರ ಪ್ರಜ್ಞಾಪೂರ್ವಕವಾಗಿಯೇ ಈ ರಾಜ್ಯದ ರಾಜಕೀಯ ನಡೆಯನ್ನು ಗಮನಿಸುತ್ತಿದ್ದಾನೆ ಎಂಬುದು ಅರ್ಥವಾಗುತ್ತದೆ. ಬಿ.ಜೆ.ಪಿ. ಸಂಘಪರಿವಾರದ ಉತ್ಸಾಹದ ಆಟದ ಮೈದಾನವೆಂದೇ ಬಿಂಬಿಸಲಾಗಿದ್ದ ಮಂಗಳೂರು, ಉಡುಪಿ ಪ್ರದೇಶದಲ್ಲಿ ಬಿ.ಜೆ.ಪಿ.ಯನ್ನು ಮತದಾರ ತಿರಸ್ಕರಿಸಿದ್ದಾನೆ. ಅದೇ ರೀತಿ ಗಣಿಗಳ್ಳರ ಪ್ರಶ್ನಾತೀತ ಸಾಮ್ರಾಜ್ಯವೆಂದೇ ಬಿಂಬಿಸಲಾಗಿದ್ದ ಬಳ್ಳಾರಿ ಜಿಲ್ಲೆಯಲ್ಲಿ ಬಿ.ಜೆ.ಪಿ.ಯ ಒಂದು ಕವಲು ಶ್ರೀರಾಮುಲುವಿನ ಬಿ.ಎಸ್.ಆರ್. ಕಾಂಗ್ರೆಸ್‌ಅನ್ನು ಜನ ತಿರಸ್ಕರಿಸ್ಸಿದಾರೆ. ಅದೇ ರೀತಿ ಪ್ರಾದೇಶಿಕ ಪಕ್ಷ ಕಟ್ಟಿ ರಾಜ್ಯ ಉದ್ಧಾರ ಮಾಡಲು ಹೊರಟ ಕೆ.ಜೆ.ಪಿ.ಯನ್ನೂ ಬೆಂಬಲಿಸಿಲ್ಲ. ಇನ್ನುಳಿದ ಹಾಗೆ ಇಡೀ ರಾಜ್ಯದಲ್ಲಿ ಆಳುವ ಪಕ್ಷವಾದ ಬಿ.ಜೆ.ಪಿ.ಗೆ ಪಾಠ ಕಲಿಸಿದ್ದಾರೆ. ೪೯೫೨ ವಾರ್ಡ್‌ಗಳಿಗೆ ನಡೆದ ಚುನಾವಣೆಯಲ್ಲಿ ೩೯೫೪ ಸ್ಥಾನಗಳಿಗೆ ಸ್ಪರ್ಧಿಸಿ ಬಿ.ಜೆ.ಪಿ.ಗೆದ್ದದ್ದು ಕೇವಲ ೯೦೫ ಸ್ಥಾನಗಳನ್ನು. ಹಿಂದಿನ ಚುನಾವಣೆಯಲ್ಲಿ ಬಿ.ಜೆ.ಪಿ. ೧೧೮೦ ಸ್ಥಾನಗಳನ್ನು ಪಡೆದಿತ್ತು. ಬಿ.ಜೆ.ಪಿ.ಯನ್ನು ತಿರಸ್ಕರಿಸಿದ ಮತದಾರ ಕಾಂಗ್ರೆಸ್ ಪಕ್ಷವನ್ನೇನೂ ಅಪ್ಪಿ ಮುದ್ದಾಡಿಲ್ಲ. ಭ್ರಷ್ಟ ಬಿ.ಜೆ.ಪಿ. ಸರಕಾರದ ವಿರುದ್ಧ ನಿರ್ಣಾಯಕ ಹೋರಾಟ ನಡೆಸದೇ, ಬಿ.ಜೆ.ಪಿ. ತನ್ನಷ್ಟಕ್ಕೆ ತಾನು ಉದುರಿಹೋಗುತ್ತದೆ. ಆಗ ಸಹಜವಾಗಿ ತಾನೇ ಉತ್ತರಾಧಿಕಾರಿ ಎಂದು ನಂಬಿದ್ದ ಕಾಂಗ್ರೆಸ್ ನಗರ ಸ್ಥಳೀಯ ಸಂಸ್ಥೆಗಳ ಚುನಾವಣೆಗಳಲ್ಲಿ ೪೪೯೨ ಸ್ಥಾನಗಳಿಗೆ ಸ್ಪರ್ಧಿಸಿ ಅರ್ಧಕ್ಕಿಂತ ಕಡಿಮೆ ೧೯೬೦ ಸ್ಥಾನ ಪಡೆದಿದೆ. ಅದೇ ರೀತಿ ಹಿಂದೆ ಈ ರಾಜ್ಯದಲ್ಲಿ ಆಳುವ ಪಕ್ಷವಾಗಿದ್ದ ಜೆ.ಡಿ.ಎಸ್. ೩೬೫೧ ಸ್ಥಾನಗಳಿಗೆ ಸ್ಪರ್ಧಿಸಿ ೯೦೫ ವಾರ್ಡ್‌ಗಳಲ್ಲಿ ಮಾತ್ರ ಗೆಲವು ಪಡೆದಿದೆ. ಕರ್ನಾಟಕದ ಆಳುವ, ವಿರೋಧ ಪಕ್ಷಗಳಿಗೆ ಸ್ಥಳೀಯ ನಗರ ಸಂಸ್ಥೆಗಳಲ್ಲಿ ಜನತೆ ಕಲಿಸಿದ ಪಾಠ ಹೇಗಿದೆಯೆಂದರೆ ೭ ಮಹಾನಗರ ಪಾಲಿಕೆಗಳಲ್ಲಿ ೪ ಕಡೆ ಅತಂತ್ರವಾಗಿದೆ. ೪೩ ನಗರ ಸಭೆಗಳಲ್ಲಿ ೨೫ ಅತಂತ್ರ. ೯೩ ಪುರಸಭೆಗಳಲ್ಲಿ ೩೪ ಅತಂತ್ರ. ೬೫ ಪಟ್ಟಣ ಪಂಚಾಯಿತಿಗಳಲ್ಲಿ ೩೩ ಅತಂತ್ರ. ಇದಲ್ಲದೆ ೭೭೮ ಜನ ಪಕ್ಷೇತರರು ಈ ರಾಜಕೀಯ ಪಕ್ಷಗಳ ವಿರುದ್ಧ ಸ್ಪರ್ಧಿಸಿ ಗೆದ್ದಿದ್ದಾರೆ. ಮಹಾನಗರ ಪಾಲಿಕೆಗಳಿಂದ ಪಟ್ಟಣ ಪಂಚಾಯತಿಯ ವ್ಯಾಪ್ತಿಯವರೆಗೆ ವಾಸಿಸಿರುವ ಜನತೆ ಕೊಟ್ಟ ಈ ತೀರ್ಪು ಮುಂದಿನ ವಿಧಾನಸಭೆಗೆ ದಿಕ್ಸೂಚಿ ಅಲ್ಲ ಎಂದರೆ ಅದು ರಾಜಕೀಯ ಪಕ್ಷಗಳ ಮೌಢ್ಯ, ಮೂರ್ಖತನ ಇಲ್ಲವೆ ಉದ್ದೇಶಪೂರ್ವಕವಾಗಿ ವಾಸ್ತವಕ್ಕೆ ಬೆನ್ನು ತೋರಿಸುವ ಧೂರ್ತತನ.

ನಗರ ಸ್ಥಳೀಯ ಸಂಸ್ಥೆಗಳ ಚುನಾವಣೆಗಳ ಫಲಿತಾಂಶ ಸ್ವಲ್ಪ ಹೆಚ್ಚು ಕಡಿಮೆ ಸಾರ್ವತ್ರಿಕ ಚುನಾವಣೆಯ ಫಲಿತಾಂಶವೂ ಆಗಿರುತ್ತದೆ. ಅಂದರೆ ಬರುವ ಕರ್ನಾಟಕ ವಿಧಾನಸಭಾ ಚುನಾವಣೆಯಲ್ಲಿ ಯಾವ ಪಕ್ಷವೂ ಬಹುಮತ ಪಡೆಯುವ ಸೂಚನೆಗಳಿಲ್ಲ. ಇದರರ್ಥ ಜನತೆ ಉತ್ಸಾಹದಿಂದ ಬೆಂಬಲಿಸಿ ಅಧಿಕಾರಕ್ಕೆ ತರಬಹುದಾದ ಒಂದೇ ಒಂದು ಪಕ್ಷ ಈ ರಾಜ್ಯದಲ್ಲಿಲ್ಲ ಅಥವಾ ಜನರ ಪ್ರೀತಿ ಗಳಿಸಲು ಒಂದೇ ಒಂದು ರಾಜಕೀಯ ಪಕ್ಷಕ್ಕೆ ಸಾಧ್ಯವಾಗಿಲ್ಲ. ಇಂಥ ಸಂದರ್ಭದಲ್ಲಿ ಸದಾ ರೈತರ, ಕಾರ್ಮಿಕರ, ದಲಿತರ, ಅನ್ಯಾಯಕ್ಕೊಳಗಾದವರನ್ನು ಸಂಘಟಿಸಿ ಅವರ ಸಮಸ್ಯೆಗೆ ಪರಿಹಾರ ಒದಗಿಸುವ ಕಾರ್ಮಿಕ, ರೈತ, ದಲಿತ ಚಳುವಳಿಗಳು ರಾಜಕೀಯ ಶಕ್ತಿಯಾಗಿ ಹೊರಹೊಮ್ಮದಿರುವುದು ಈ ರಾಜ್ಯದ ರಾಜಕೀಯ ಕ್ಷೇತ್ರಕ್ಕಾದ ಹಿನ್ನಡೆ. ಈ ರಾಜ್ಯದ ಜನಪರ ಚಳುವಳಿಗಾರರು ಪರಸ್ಪರ ಸಹಕರಿಸಿ ಕನಿಷ್ಠ ಸಂಖ್ಯೆಯಲ್ಲಾದರೂ ಈ ಬಾರಿಯ

ವಿಧಾನಸಭೆಯನ್ನು ಪ್ರವೇಶಿಸಿ ಜನರ ಧ್ವನಿಯಾಗಲಿ ಎಂಬುದೇ ರಾಜ್ಯದ ಪ್ರಜ್ಞಾವಂತ ಜನರ ಆಶಯ. ಕಳೆದ ವಿಧಾನಸಭೆಯ ಐದುವರ್ಷದ ಅವಧಿಯನ್ನು ಗಮನಿಸಿದರೆ, ರಾಜಕೀಯ ಧುರೀಣರ, ಪ್ರಜಾಪ್ರತಿನಿಧಿಗಳ ವೇದಿಕೆ ಕಳ್ಳಕೊರಮರ ಆಂತರಿಕ ಸಂಘರ್ಷದ ವೇದಿಕೆಯಾಗಿತ್ತು. ದೇಶವೇ ಹೆಮ್ಮೆ ಪಡುವಂಥ ಪ್ರಜಾಪ್ರತಿನಿಧಿಗಳಿದ್ದ ನಮ್ಮ ವಿಧಾನಸಭೆ ಕೋಮುವಾದಿಗಳು, ಜಾತಿವಾದಿಗಳು, ಗಣಿಗಳ್ಳರು, ಭೂಗಳ್ಳರು, ಕಾಮುಕರು, ರೌಡಿಗಳು ತುಂಬಿದ ಅಡ್ಡೆಯಾಗುತ್ತಿರುವುದನ್ನು ನೋಡಿ ಸಂಕಟವಾಗುತ್ತದೆ. ಈ ಬಾರಿಯಾದರೂ ಅಲ್ಲಿ ನಡೆಯುತ್ತಿರುವುದು ತಪ್ಪು ಎಂದು ಅಲ್ಲಿಯೇ ನಿಂತು ಹೇಳುವಂತಹ ಕೆಲವರಾದರೂ ಆಯ್ಕೆಯಾಗಲಿ.

ಸಿದ್ದನಗೌಡ ಪಾಟೀಲ

## ದಕ್ಷಿಣ ಅಮೆರಿಕದ ಧ್ರುವತಾರೆ ಚಾವೆಜ್

ಜಾಗತಿಕ ರಾಜಕಾರಣದಲ್ಲಿ ಇಪ್ಪತ್ತೊಂದನೇ ಶತಮಾನದಲ್ಲಿ ಜನಪರ ನೀತಿಗಳನ್ನು ಅನುಷ್ಠಾನಕ್ಕೆ ತಂದು, ಇಡೀ ದಕ್ಷಿಣ ಅಮೆರಿಕದ ದೇಶಗಳನ್ನು ಬಡಿದೆಬ್ಬಿಸಿ, ಪ್ರಪಂಚವನ್ನೇ ತಲ್ಲಣಗೊಳಿಸಿದ್ದ ಅಪ್ರತಿಮ ನಾಯಕ ವೆನಿಜುವೇಲಾದ ಅಧ್ಯಕ್ಷ ಹ್ಯೂಗೋ ರಾಫಲ್ ಚಾವೆಜ್ ಫ್ರಿಯಾಸ್ ಇನ್ನಿಲ್ಲ. ಕೇವಲ ಹದಿನಾಲ್ಕು ವರ್ಷ ಆಡಳಿತ ನಡೆಸಿದ ಚಾವೆಜ್ ತನ್ನ ನಾಡಿನ ಲಕ್ಷಾಂತರ ಬಡಜನರ ಜೀವನವನ್ನು ಮಾರ್ಪಡಿಸಿ ಉತ್ತಮಗೊಳಿಸಿದ್ದಷ್ಟೇ ಅಲ್ಲದೆ, ಲ್ಯಾಟಿನ್ ಅಮೆರಿಕದ ದೇಶಗಳಲ್ಲಿ ಹೊಸ ಚೈತನ್ಯ ಮೂಡಿಸಿ ಸೌಹಾರ್ದತೆ ಬೆಳೆಸಿ, ಪೋಷಿಸಿದ. ೨೦೧೩ರ ಮಾರ್ಚ್ ೫ರಂದು ಕ್ಯಾನ್ಸರ್ ರೋಗಕ್ಕೆ ಬಲಿಯಾಗಿ ೫೮ನೇ ವಯಸ್ಸಿನಲ್ಲೇ ಅಸುನೀಗಿದ ಈ ಮಹಾನ್ ನಾಯಕ ಚಾವೆಜ್‌ಗೆ 'ಹೊಸತು' ನಮನ ಸಲ್ಲಿಸುತ್ತದೆ. ಆತ ತುಳಿದ ಹಾದಿಯಲ್ಲೇ ಮುಂದುವರಿಯಲು ಪಣ ತೊಡುವುದೇ ಈ ಜನ ನಾಯಕನಿಗೆ ನಾವು ಸಲ್ಲಿಸುವ ಗೌರವ.

೧೯೯೮ರಲ್ಲಿ ದಕ್ಷಿಣ ಅಮೆರಿಕದ ಕೆರಿಬಿಯನ್ ಸಮುದ್ರ ತೀರದಲ್ಲಿರುವ ವೆನಿಜುವೇಲಾದ ಅಧ್ಯಕ್ಷರಾಗಿ ಆಯ್ಕೆಯಾದ ಚಾವೆಜ್ ೨೦೦೨ರಲ್ಲಿ ಅಮೆರಿಕ ಬೆಂಬಲಿತ ಬಲಪಂಥೀಯರ ಬಂಡಾಯವನ್ನು ಎದುರಿಸಿ ವಿಜೇತರಾಗಿ ಮತ್ತೆ ಮತ್ತೆ ಜನಬೆಂಬಲಗಳಿಸಿ ಪುನರಾಯ್ಕೆಯಾದರು. ಹದಿನಾಲ್ಕು ವರ್ಷಗಳ ತಮ್ಮ ಆಡಳಿತ ಕಾಲದಲ್ಲಿ ವೆನಿಜುವೇಲಾದ ಜನಸಾಮಾನ್ಯರ ಜೀವನವನ್ನು ಉದ್ಧರಿಸಿದರಷ್ಟೇ ಅಲ್ಲದೆ ದಕ್ಷಿಣ ಅಮೆರಿಕದ ದೇಶಗಳಿಗೆ ಒಂದು ಹೊಸ ಅಸ್ಮಿತೆಯನ್ನೂ ತಂದುಕೊಟ್ಟರು. ಅಮೆರಿಕದ ಬಹುರಾಷ್ಟ್ರೀಯ ಸಂಸ್ಥೆಗಳ, ಅಮೆರಿಕದ ಆಡಳಿತದ ಬಿಗಿಹಿಡಿತದಿಂದ ಹೊರತಂದು ಪರ್ಯಾಯ ಮಾರ್ಗವೊಂದಿದೆ ಎಂದು ತೋರಿಸಿಕೊಟ್ಟವರು ಚಾವೆಜ್. ೧೯೫೪ರಲ್ಲಿ ಶಾಲಾ ಮಾಸ್ತರ ಮಗನಾಗಿ ಜನಿಸಿದ ಅವರು ಕಲಿತದ್ದು ಮಿಲಿಟರಿ ಕಲೆ ಮತ್ತು ವಿಜ್ಞಾನವನ್ನು. ರಾಷ್ಟ್ರೀಯ ಮಿಲಿಟರಿ ಅಕಾಡೆಮಿಯಲ್ಲಿ ಅಧ್ಯಯನ ಮಾಡಿ ಸೇನೆಯ ಪ್ಯಾರಾಟ್ರೂಪರ್ಸ್ ವಿಭಾಗದ ಅಧಿಕಾರಿಯಾಗಿ ಕೆಲಸ ಮಾಡಿದರು. ಅವರ ರಾಜಕೀಯ ಜೀವನ ಪ್ರಾರಂಭವಾದ್ದು ೧೯೮೦ರಲ್ಲಿ. ಅವರ ಆದರ್ಶ ಲ್ಯಾಟಿನ್ ಅಮೆರಿಕದ ಸ್ವಾತಂತ್ರ್ಯಕ್ಕಾಗಿ ಸರ್ವಸ್ವವನ್ನೂ ತ್ಯಾಗಮಾಡಿದ ಹೋರಾಟಗಾರ ಸಿಮೋನ್ ಬೊಲಿವರ್. 'ಕ್ರಾಂತಿಕಾರಿ ಬೊಲಿವೇರಿಯನ್ ಚಳವಳಿ' ಎಂಬ ರಹಸ್ಯ ಸಂಘಟನೆಯನ್ನು ಸ್ಥಾಪಿಸಿದ ಚಾವೆಜ್ ೧೯೯೨ರಲ್ಲಿ ಆಗ ವೆನೆಜುವೇಲಾದ ಸರಕಾರವನ್ನು ಉರುಳಿಸಲು ಪ್ರಯತ್ನಿಸಿದರೆಂಬ ಆಪಾದನೆಯ ಮೇಲೆ ಎರಡು ವರ್ಷ ಕಾರಾಗೃಹವಾಸ ಅನುಭವಿಸಿದರು. ಬಿಡುಗಡೆಯಾದ ಮೇಲೆ ಅವರು ತಮ್ಮ ಸಂಘಟನೆಯನ್ನು ಪುನರ್ರೂಪಿಸಿ, ಅನಂತರ ಇತರ ತಂಡಗಳನ್ನು ಒಗ್ಗೂಡಿಸಿ 'ಯುನೈಟೆಡ್ ಸೋಷಿಯಲಿಸ್ಟ್ ಪಾರ್ಟಿ ಆಫ್ ವೆನಿಜುವೇಲ' ಎಂಬ ರಾಜಕೀಯ ಪಕ್ಷ ಸ್ಥಾಪಿಸಿ ೧೯೯೮ರಲ್ಲಿ ಅಧ್ಯಕ್ಷೀಯ ಚುನಾವಣೆಯಲ್ಲಿ ಸ್ಪರ್ಧಿಸಿ ವಿಜೇತರಾದರು. ಅವರ ಗುರಿ ಸಮಾಜವಾದಿ ಸಮಾಜದ ಸ್ಥಾಪನೆಯಾಗಿತ್ತು.

ಅಧಿಕಾರ ವಹಿಸಿಕೊಂಡು ಅವರು ಮಾಡಿದ ಮೊದಲ ಕೆಲಸ ಎಂದರೆ ದೇಶದ ತೈಲೋದ್ಯಮದ ರಾಷ್ಟ್ರೀಕರಣ. ಅಮೆರಿಕ ಸರಕಾರದ ಅಂದಾಜಿನಂತೆ ಪ್ರಪಂಚದಲ್ಲಿ ಅತ್ಯಂತ ಹೆಚ್ಚು ತೈಲ ನಿಕ್ಷೇಪಗಳನ್ನು (ಸುಮಾರು ೧.೩೬ ಟ್ರಿಲಿಯನ್ ಬ್ಯಾರೆಲ್) ಹೊಂದಿದ್ದರೂ ಲಾಭವೆಲ್ಲ ಶ್ರೀಮಂತರ ಮತ್ತು ತೈಲ ಕಾರ್ಪೊರೇಷನ್‌ಗಳ ಜೇಬು ತುಂಬುತ್ತಿದ್ದುವು. ಅದನ್ನು ಕಿತ್ತುಹಾಕಿ, ಬಂದ ಹಣವನ್ನು ಜನಪರ ಸಾಮಾಜಿಕ ಕಾರ್ಯಗಳಿಗೆ ಉಪಯೋಗಿಸತೊಡಗಿದರು. ೨೦೦೦ದಿಂದ ೨೦೧೦ರ ಅವಧಿಯಲ್ಲಿ ಸಾಮಾಜಿಕ ಅಭಿವೃದ್ಧಿಗಾಗಿ ವಿನಿಯೋಗಿಸಿದ ಮೊತ್ತ ವರಮಾನದ ಶೇ. ೬೧ರಷ್ಟಾಗಿತ್ತು. ಅಂದರೆ ಸುಮಾರು ೬೭೨ ಬಿಲಿಯ ಡಾಲರುಗಳಾಗಿತ್ತು. ದೇಶದಲ್ಲಿ ಬಡತನವು ೧೯೯೬ರಲ್ಲಿ ಜನಸಂಖ್ಯೆಯಲ್ಲಿ ಶೇ. ೭೧ ಇದ್ದುದು ೨೦೧೩ರಲ್ಲಿ ಶೇ. ೨೧ಕ್ಕೆ ಇಳಿಯಿತು. ಇದೇ ಅವಧಿಯಲ್ಲಿ ಕಡುಬಡವರ ಪ್ರಮಾಣ ಶೇ. ೪೦ರಿಂದ ೭.೩ಕ್ಕೆ ಇಳಿಯಿತು. ಸಾಮಾಜಿಕ ಕಾರ್ಯಕ್ರಮಗಳ ಫಲಾನುಭವಿಗಳ ಸಂಖ್ಯೆ ೨೦ ಮಿಲಿಯ. ೨.೧ ಮಿಲಿಯ ಹಿರಿಯ ನಾಗರಿಕರು ಪಿಂಚಣಿ ಪಡೆಯುತ್ತಿದ್ದಾರೆ. ಸರಕಾರ ಕೈಗೊಂಡ ಕ್ರಮಗಳ ಪರಿಣಾಮವಾಗಿ ದೇಶದ ಆಹಾರಧಾನ್ಯಗಳ ಆಮದು ಶೇ. ೯೦ರಿಂದ ಶೇ. ೩೦ಕ್ಕೆ ಇಳಿಯಿತು. ಆರೋಗ್ಯ ಸೇವಾ ಕ್ಷೇತ್ರದಲ್ಲಿ ಅಧಿಕ ವಿನಿಯೋಗಗಳ ಪರಿಣಾಮವಾಗಿ ಪೋಷಣೆ ಇಲ್ಲದ ಮಕ್ಕಳ ಪ್ರಮಾಣ ಶೇ. ೭.೭ರಿಂದ ೫ಕ್ಕೆ ಇಳಿಯಿತು. ಮಕ್ಕಳ ಮರಣದ ಸಂಖ್ಯೆ ೧೦೦೦ಕ್ಕೆ ೨೫ರಿಂದ ೧೩ಕ್ಕೆ ಇಳಿದಿದೆ. ೧೯೯೬ರಲ್ಲಿ ಪ್ರತಿ ೧೦,೦೦೦ ಜನಸಂಖ್ಯೆಗೆ ೧೮ ಮಂದಿ ಡಾಕ್ಟರುಗಳಿದ್ದರು, ಈಗ ಪ್ರತಿ ೧೦,೦೦೦ಕ್ಕೆ ೫೮ ಜನ ಡಾಕ್ಟರುಗಳಿದ್ದಾರೆ. ಇದನ್ನು ಸಾಧಿಸಿದ್ದು ನೆರೆಯ ಕ್ಯೂಬಾದ ಸಹಾಯದಿಂದ. ತೈಲ ಸರಬರಾಜಿಗೆ ಪ್ರತಿಯಾಗಿ ಚಾವೆಜ್ ಕ್ಯೂಬಾದಿಂದ ಡಾಕ್ಟರುಗಳನ್ನು ಕರೆಸಿಕೊಂಡು ತರಬೇತಿಗೆ ವ್ಯವಸ್ಥೆ ಮಾಡಿದ್ದರು. ಅಮೆರಿಕದ ಆರ್ಥಿಕ ದಿಗ್ಬಂಧನಕ್ಕೊಳಗಾಗಿದ್ದ ಕ್ಯೂಬಾದೊಂದಿಗೆ ಸಂಬಂಧಗಳನ್ನು ಸ್ಥಾಪಿಸಿದ್ದು, ಸಮಾಜವಾದಿ ನಾಯಕ ಫೀಡೆಲ್ ಕ್ಯಾಸ್ಟ್ರೋ ಜೊತೆ ವೈಯಕ್ತಿಕ ಸಂಬಂಧಗಳನ್ನು ಬೆಳೆಸಿದ್ದು ಚಾವೆಜ್. ಅವರು ಚಿಕಿತ್ಸೆ ಪಡೆದದ್ದು ಕೂಡ ಕ್ಯೂಬಾದಲ್ಲೆ. ೨.೯ ಕೋಟಿ ಜನಸಂಖ್ಯೆ ಹೊಂದಿರುವ ವೆನಿಜುವೇಲಾದ


ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
☎ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
☎ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು - ೫೭೫ ೦೦೧
☎ : ೦೮೨೪-೨೪೨೫೫೬೧

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
☎ : ೦೮೨೧-೨೪೨೪೯೨೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
☎ : ೦೮೪೭೨-೨೨೪೩೦೨

ಶೇ. ೯೬ರಷ್ಟು ಜನ ಇಂದು ಶುದ್ಧ ನೀರನ್ನು ಪಡೆಯುತ್ತಿದ್ದಾರೆ. ಶೇ. ೮೫ರಷ್ಟು ಮಕ್ಕಳು ಶಾಲೆಗಳಿಗೆ ಹೋಗುತ್ತಿದ್ದಾರೆ. ದೇಶದಲ್ಲಿ ವಿಶ್ವವಿದ್ಯಾನಿಲಯದ ಉನ್ನತ ಶಿಕ್ಷಣವನ್ನು ಒಳಗೊಂಡಂತೆ ಎಲ್ಲರಿಗೂ ಶಿಕ್ಷಣ ಉಚಿತ ಹಾಗೆಯೇ ವೈದ್ಯಕೀಯ ಸೇವೆಯೂ ಕೂಡ.

ಕೇವಲ ೧೪ ವರ್ಷಗಳ ಆಡಳಿತಾವಧಿಯಲ್ಲಿ ಇಷ್ಟೆಲ್ಲ ಸಾಧನೆಗಳನ್ನು ಮಾಡಲು ಸಾಧ್ಯವಾದದ್ದು ದೇಶದ ಸಂಪನ್ಮೂಲದ ಗಳಿಕೆಯನ್ನು ಜನಪರ ಕಾರ್ಯಗಳಿಗಾಗಿ ವಿನಿಯೋಗಿಸಿದ್ದು ಮತ್ತು ಶುದ್ಧ ಆಡಳಿತ ನೀಡಿದ್ದು. ಅಧಿಕಾರವಹಿಸಿಕೊಂಡ ತರುಣದಲ್ಲೇ ಭ್ರಷ್ಟ ಮಿಲಿಟರಿ ಅಧಿಕಾರಿಗಳನ್ನು ಕಿತ್ತೊಗೆದು, ಆಡಳಿತದಲ್ಲಿ ಸುಧಾರಣೆ ತಂದ ಕೀರ್ತಿ ಅವರದ್ದು. ತೈಲ ಕಂಪೆನಿಗಳು ಸರಕಾರಕ್ಕೆ ಕೊಡುತ್ತಿದ್ದ ರಾಯಲ್ಟಿಯನ್ನು ಶೇ. ೧ರಿಂದ ಶೇ. ೧೬.೬ಕ್ಕೆ ಏರಿಸಿದ್ದಲ್ಲದೆ ಅವರು ತೈಲ ಬೆಲೆಯನ್ನು ನಿಗದಿ ಮಾಡಿದರು. ಚಾವೆಜ್ ಕೈಗೊಂಡ ಕ್ರಮಗಳಿಂದ ಶ್ರೀಮಂತರು ಆಕ್ರೋಶಗೊಂಡರು ಮತ್ತು ಅವಕ್ಕೆ ವರ್ಣಭೇದದ ಲೇಪ ನೀಡಿದರು. ಅಮೆರಿಕದ ಸರಕಾರ ಮತ್ತು ಪತ್ರಿಕೆಗಳು ಚಾವೆಜ್ ವಿರುದ್ಧವಾಗಿ ಸಮರವನ್ನೇ ಸಾರಿದವು. ೨೦೦೨ರಲ್ಲಿ ಚಾವೆಜ್ ವಿರುದ್ಧವಾಗಿ ನಡೆದ ಕುತಂತ್ರ ವಿಫಲಗೊಂಡ ನಂತರ ಅಮೆರಿಕದ ಅಂದಿನ ರಾಷ್ಟ್ರೀಯ ಭದ್ರತಾ ಸಲಹೆಗಾರ ಕಾಂಡೆಲಿಸಾ ರೈಸ್ ಚಾವೆಜ್‌ಗೆ ಸಂವಿಧಾನವನ್ನು ಗೌರವಿಸಬೇಕೆಂದು ಹಿತವಚನ ನೀಡುವ ಉದ್ಧಟತನ ತೋರಿದ್ದರು. ಇದಾವುದನ್ನೂ ಲೆಕ್ಕಿಸದ ವೆನಿಜುವೇಲಾದ ಜನತೆ ಚಾವೆಜ್‌ಗೆ ಬೆಂಬಲವಾಗಿ ನಿಂತರು. ಅಮೆರಿಕಕ್ಕೆ ಬೇಸರ ತಂದಿದ್ದು ವೆನಿಜುವೇಲ ಸರಕಾರ ತೈಲ ಕಂಪೆನಿಗಳನ್ನು ರಾಷ್ಟ್ರೀಕರಣ ಮಾಡಿದ್ದೊಂದರಿಂದಲೇ ಅಲ್ಲ, ಇಡೀ ಲ್ಯಾಟಿನ್ ಅಮೆರಿಕ ದೇಶಗಳನ್ನು ಒಂದುಗೂಡಿಸಿ, ಪರ್ಯಾಯ ವ್ಯವಸ್ಥೆಯ ಮಾರ್ಗವೂ ಒಂದಿದೆ ಎಂಬುದನ್ನು ಮನವರಿಕೆ ಮಾಡಿಕೊಟ್ಟದ್ದು. ಅಮೆರಿಕ ಪ್ರೇರಿತ ಜಾಗತೀಕರಣ, ಉದಾರೀಕರಣ, ಮುಕ್ತಮಾರುಕಟ್ಟೆ ಆರ್ಥಿಕನೀತಿಗಳನ್ನು ವಿರೋಧಿಸುವಂತೆ ಮಾಡಿ, ಸಮಾನತೆಯ ಆಧಾರದ ಮೇಲೆ ಲ್ಯಾಟಿನ್ ಅಮೆರಿಕದ ದೇಶಗಳ ಮಧ್ಯೆ ಪರಸ್ಪರ ಸಹಕಾರ ಪ್ರೋತ್ಸಾಹನೆ ನೀಡಿದ್ದು, ಚಾವೆಜ್ ಈ ಕಾರ್ಯವನ್ನು ನೆರವೇರಿಸಿದ್ದು ಕೂಡ ಕಾರ್ಯ ರೂಪದಲ್ಲಿ, ತೈಲೋದ್ಯಮದಿಂದ ಬಂದ ವರಮಾನದಲ್ಲಿ ಒಂದು ಭಾಗವನ್ನು ಜನಪರ ಸಾಮಾಜಿಕ ಕಾರ್ಯಗಳಿಗೆ ವಿನಿಯೋಗಿಸಿದ್ದು ಒಂದು ಕಡೆಯಾದರೆ, ಸೌದಿ ಅರೇಬಿಯ ಮತ್ತು ಇತರ ಮಧ್ಯಪ್ರಾಚ್ಯ ದೇಶಗಳು ಮಾಡುತ್ತಿರುವಂತೆ ಉಳಿದ ಹಣವನ್ನು ಅಮೆರಿಕದ ಬಾಂಡುಗಳಲ್ಲಿ ವಿನಿಯೋಗಿಸುವ ಬದಲು ಹಣವನ್ನು ಲ್ಯಾಟಿನ್ ಅಮೆರಿಕದಲ್ಲೇ ವಿನಿಯೋಗಿಸಿದ್ದು. ಇದರಿಂದ ಅಮೆರಿಕಕ್ಕೆ ಭಾರಿ ಹೊಡೆತ ಬಿತ್ತು, ಅದಲ್ಲದೆ ವೆನಿಜುವೇಲ ಸರಕಾರ ಅಮೆರಿಕದ ಫೆಡರಲ್ ರಿಜರ್ವ್‌ನಲ್ಲಿ ಠೇವಣಿ ಇರಿಸಿದ ೨೦ ಬಿಲಿಯ ಡಾಲರುಗಳನ್ನು ಹಿಂದಕ್ಕೆ ಪಡೆದುಕೊಂಡಿತು. ಅದೂ ಕೂಡ ಅಮೆರಿಕ ಆರ್ಥಿಕ ಸಂಕಷ್ಟದಲ್ಲಿ ಸಿಲುಕಿಕೊಂಡಿದ್ದಾಗ. ಈ ಹಣವನ್ನು ಚಾವೆಜ್ ಲ್ಯಾಟಿನ್ ಅಮೆರಿಕದ ದೇಶಗಳಿಗೆ ಸಾಲವಾಗಿ ನೀಡಿ, ಅಂತರರಾಷ್ಟ್ರೀಯ ವಿತ್ತೀಯ ನಿಧಿ (ಐಎಂಎಫ್) ಮತ್ತು ವರ್ಲ್ಡ್ ಬ್ಯಾಂಕ್‌ನ ಮೇಲೆ ಅವುಗಳ ಅವಲಂಬನೆಯನ್ನು ಇಳಿಸಿತು, ಇದು ಅಮೆರಿಕ ಸರಕಾರವನ್ನು ಇನ್ನಷ್ಟು ರೊಚ್ಚಿಗೆಬ್ಬಿಸಿತು. ಈ ಕ್ರಮದ ಮೂಲಕ ಸಂಕಷ್ಟದಲ್ಲಿರುವ ದೇಶಗಳು ಪರಸ್ಪರ ಸಹಕಾರದಿಂದ ಹೇಗೆ ಸಮಸ್ಯೆಯನ್ನು ಬಗೆಹರಿಸಿಕೊಳ್ಳಬಹುದು ಎಂಬುದನ್ನು ಚಾವೆಜ್ ತೋರಿಸಿಕೊಟ್ಟರು. ವೆನಿಜುವೇಲಾ ಇನ್ನೆಂದಿಗೂ ತೈಲ ವಸಾಹತು ಅಲ್ಲ, ಅದು ತನ್ನ ತೈಲ ಸಾರ್ವಭೌಮತ್ವವನ್ನು ಮರಳಿ ಪಡೆದುಕೊಂಡಿದೆ ಎಂದು ಹೇಳುತ್ತಿದ್ದ ಚಾವೆಜ್ ಸಹಕಾರದ ಆಧಾರದ ಮೇಲೆ ಐಎಂಎಫ್‌ಗೆ ಬದಲಾಗಿ ಅಂತರರಾಷ್ಟ್ರೀಯ ಮಾನವೀಯ ಬ್ಯಾಂಕು ಒಂದನ್ನು ಸ್ಥಾಪಿಸುವ ಕನಸುಗಾರರಾಗಿದ್ದರು. ಲ್ಯಾಟಿನ್ ಅಮೆರಿಕದ ದೇಶಗಳಿಗೆ ತೈಲ ಸರಬರಾಜು ಮಾಡಿ ತಮಗೆ ಬೇಕಾದ ಸರಕುಗಳನ್ನು ಅಲ್ಲಿಂದ ಪಡೆದುಕೊಳ್ಳುವ ಕ್ರಮ ಜಾರಿಗೆ ತಂದರು ಅವರು. ೨೦೧೧ರಲ್ಲಿ ಲ್ಯಾಟಿನ್ ಅಮೆರಿಕ ಮತ್ತು ಕೆರಿಬಿಯನ್ ದೇಶಗಳ ಸಮುದಾಯ ಎಂಬ ಸಂಸ್ಥೆಯನ್ನು ಪ್ರಾರಂಭಿಸಿದರು. ಲ್ಯಾಟಿನ್ ಅಮೆರಿಕದ ದೇಶಗಳ ಸಾರ್ವಭೌಮತ್ವ ಎತ್ತಿಹಿಡಿಯುವುದರಲ್ಲಿ ಅವರು ಮುಂಚೂಣಿಯಲ್ಲಿದ್ದರು. ವೆನಿಜುವೇಲಾದ ಮಾದರಿಯನ್ನೇ ಅನುಸರಿಸಿ ಲ್ಯಾಟಿನ್ ಅಮೆರಿಕದ ಹಲವು ದೇಶಗಳ ಜನತೆ ಎಡಪಂಥೀಯ ಪಕ್ಷಗಳನ್ನು ಅಧಿಕಾರಕ್ಕೆ ತಂದಿದ್ದಾರೆ. ಚಾವೆಜ್ ಹಾಕಿಕೊಟ್ಟ ಮಾರ್ಗದಲ್ಲಿ ಮುನ್ನಡೆಯಲು ಅವುಗಳೇ ಶ್ರೀರಕ್ಷೆ. ಲ್ಯಾಟಿನ್ ಅಮೆರಿಕದಲ್ಲಿ ಚಾವೆಜ್ ತೋರಿದ ಮಾರ್ಗ ಏಶಿಯ, ಆಫ್ರಿಕದ ಎಲ್ಲ ಸ್ವತಂತ್ರ ರಾಷ್ಟ್ರಗಳಿಗೂ ಮಾದರಿಯಾಗಿದೆ.

೨೦೧೨ರಲ್ಲಿ ನಡೆದ ಚುನಾವಣೆಗಳಲ್ಲಿ ಪುನರಾಯ್ಕೆಗೊಂಡ ಚಾವೆಜ್ ಅಧಿಕಾರ ವಹಿಸಿಕೊಳ್ಳಲಾಗಲೇ ಇಲ್ಲ. ಚಿಕಿತ್ಸೆಗಾಗಿ ಹೋಗುವ ಮುನ್ನ ಉಪಾಧ್ಯಕ್ಷ ನಿಕೊಲಾಸ್ ಮಾಡುರೋ ಅವರನ್ನು ಉತ್ತರಾಧಿಕಾರಿಯಾಗಿ ನೇಮಿಸಿದ್ದರು. ಚಾವೆಜ್‌ರ ಅಕಾಲ ನಿಧನದಿಂದ ನಾಗರಿಕ ಜಗತ್ತಿಗೆ ಭಾರೀ ನಷ್ಟವಾಗಿದೆ. ಜಗತ್ತಿನ ಎಲ್ಲ ದೇಶಗಳೂ ಅವರ ನಿಧನಕ್ಕೆ ಸಂತಾಪ ಸೂಚಿಸಿವೆ. ಸಂತಾಪ ಸೂಚನೆಯಲ್ಲೂ ಅಮೆರಿಕ ತನ್ನ ವ್ಯಂಗ್ಯವನ್ನೂ, ಉದ್ಧಟತನವನ್ನೂ ತೋರ್ಪಡಿಸಿಕೊಂಡಿದೆ. ಹೊಸ ಅಧ್ಯಾಯವನ್ನು ಪ್ರಾರಂಭಿಸುತ್ತಿರುವ ವೆನಿಜುವೇಲಾ ಜನತೆಗೆ ಬೆಂಬಲ ವ್ಯಕ್ತಗೊಳಿಸಿರುವ ಅಧ್ಯಕ್ಷ ಬರಾಕ್ ಒಬಾಮ ಪ್ರಜಾಪ್ರಭುತ್ವ ಸೂತ್ರಗಳು, ಕಾನೂನು ಪಾಲನೆ ಮತ್ತು ಮಾನವ ಹಕ್ಕುಗಳ ಪ್ರಸ್ತಾಪ ಮಾಡಿರುವುದು ಅವರ ಸಣ್ಣತನವನ್ನು ತೋರಿಸುತ್ತದೆ. ಅಮೆರಿಕ ಈಗ ಏನೇ ಆಮಿಷ ಒಡ್ಡಿದರೂ ವೆನಿಜುವೇಲಾದ ಜನತೆ ಚಾವೆಜ್ ಹಾಕಿಕೊಟ್ಟಿರುವ ಮಾರ್ಗದಿಂದ ಹಿಂದೆ ಸರಿಯಲಾರದು. ಅವರು ಕೈಗೊಂಡ ಕ್ರಮಗಳಿಂದ ಮಿಲಿಯಗಟ್ಟಲೆ ಜನಸಾಮಾನ್ಯರ ಜೀವನ ಸ್ಥಿತಿ ಉತ್ತಮಗೊಂಡಿರುವುದೇ ಭವಿಷ್ಯಕ್ಕೆ ಭರವಸೆ. ಚಾವೆಜ್ ಲ್ಯಾಟಿನ್ ಅಮೆರಿಕದಲ್ಲಿ ಪ್ರಾರಂಭಿಸಿರುವ ಸ್ವಾಭಿಮಾನಿ, ಸಹಕಾರ ಚಳುವಳಿ ಯಶಸ್ವಿಯಾಗಲಿ. ಅದೇ ಅವರಿಗೆ ಸಲ್ಲುವ ಹೃತ್ಪೂರ್ವಕ ನಮನ.

## ಚಾವೆಜ್‌ಗೆ ನಮನ



ದಕ್ಷಿಣ ಅಮೆರಿಕಾದ ಪುಟ್ಟ ದೇಶ ವೆನಿಜುವೇಲಾದ ಅಧ್ಯಕ್ಷ ಹ್ಯೂಗೋ ಚಾವೆಜ್ ಸಮಾಜವಾದದ ಹೊಸ ಮಾದರಿಯನ್ನು ಕೊಟ್ಟ ಧೀಮಂತ ಹೋರಾಟಗಾರ. ಸುಲಿಗೆಕೋರ, ಸಾಮ್ರಾಜ್ಯಶಾಹಿ ಅಮೆರಿಕಾದ ನಿದ್ದೆಗೆಡಿಸಿದ್ದ ಚಾವೆಜ್ ವಿಶ್ವದ ಬಡದೇಶಗಳಿಗೆ ಹೋರಾಟದ ಹೊಸ ಮಾರ್ಗ ತೋರಿಸಿದ್ದರು. ಅಮೆರಿಕಾದ ಎಲ್ಲ ಪಿತೂರಿಗಳನ್ನೆದುರಿಸಿ ಚುನಾವಣೆಗಳನ್ನು ಗೆದ್ದ ಚಾವೆಜ್ ಜನತೆಯ ನಿಜವಾದ ನಾಯಕರಾಗಿದ್ದರು. ೫ನೇ ಮಾರ್ಚ್, ೨೦೧೩ರಂದು ನಿಧನರಾದ ಸಂಗಾತಿ ಹ್ಯೂಗೋ ಚಾವೆಜ್‌ರನ್ನು 'ಹೊಸತು' ಪ್ರೀತಿಯಿಂದ ಸ್ಮರಿಸುತ್ತದೆ.

**ಈ ತಿಂಗಳು (೩ನೇ ಪುಟದಿಂದ)**

ನ್ಯಾಯಮೂರ್ತಿ ರಾಜಾಧ್ಯಕ್ಷ ಇವರ ನೇತೃತ್ವದಲ್ಲಿ ಸ್ಥಾಪಿಸಲಾಗಿದ್ದ ಸಮಿತಿ ವರದಿಯು ಆಗಲೇ ಪತ್ರಿಕೆಗಳು ಉದ್ಯಮಪತಿಗಳ ಕೈವಶವಾಗುವ ಬಗ್ಗೆ ಎಚ್ಚರಿಸಿತ್ತು. ಇದರಿಂದ ಪತ್ರಕರ್ತರ ಸ್ವಾತಂತ್ರ್ಯಹರಣವಾಗುವುದಲ್ಲದೆ ಭ್ರಷ್ಟಾಚಾರಕ್ಕೆ ಬಲಿಯಾಗುವುದೆಂದು ಮುನ್ಸೂಚನೆ ನೀಡಿದ್ದರು. ಆಗಿನ ಕಾಲದಲ್ಲೆ, ಅಂದರೆ ಐವತ್ತು-ಅರವತ್ತರ ದಶಕದಲ್ಲಿ 'ಜೂಟ್ ಪ್ರೆಸ್' ಎಂಬ ನುಡಿಕಟ್ಟು ಚಾಲ್ತಿಯಲ್ಲಿತ್ತು. ಐವತ್ತು ವರ್ಷಗಳಿಗೂ ಹಿಂದೆ ಅಂದು ಅಖಿಲ ಭಾರತ ಟ್ರೇಡ್ ಯೂನಿಯನ್ ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದ ಕಮ್ಯುನಿಸ್ಟ್ ನಾಯಕ ಎಸ್. ಎ. ಡಾಂಗೆ ಪತ್ರಕರ್ತರ ಸಂಘದಲ್ಲಿ ಸದಸ್ಯರನ್ನುದ್ದೇಶಿಸಿ ಮಾತನಾಡುತ್ತ ಪತ್ರಿಕೋದ್ಯಮ ಗುತ್ತೇದಾರಿ ಬಂಡವಾಳಗಾರರ ಕೈಗೆ ಪೂರ್ಣವಾಗಿ ಬಿದ್ದಾಗ ಪತ್ರಕರ್ತರ ಸ್ವಾತಂತ್ರ್ಯಹರಣವಾಗುವುದಷ್ಟೇ ಅಲ್ಲದೆ ಭ್ರಷ್ಟಾಚಾರ ತಾಂಡವವಾಡುತ್ತದೆ ಎಂದು ಮುನ್ಸೂಚನೆ ನೀಡಿದ್ದರು. ಇಂದು ಅವೆಲ್ಲವೂ ನಿಜವಾಗಿದೆ. ಮಾಧ್ಯಮ ಇಪ್ಪತ್ತೊಂದನೇ ಶತಮಾನದಲ್ಲಿ ಜಾಹೀರಾತುಗಳ, ಬಂಡವಾಳಗಾರರ ಗುಲಾಮನಾಗಿದೆ. ಉತ್ಪ್ರೇಕ್ಷೆಗೆ, ಮಾಲಿಕರ ಹಿತಾಸಕ್ತಿ ಪಾಲನೆಗೆ ಮುಡಿಪಾಗಿರುವ ಮಾಧ್ಯಮಗಳು ಜನಪರ ನಿಲುವು ತಳೆಯುವುದು ಅಪರೂಪವಾಗಿದೆ. ಹಿಂದೆಂದೂ ಕೇಳದಿದ್ದ 'ಕಾಸಿಗೆ ಸುದ್ದಿ', ಇಂಗ್ಲಿಷಿನಲ್ಲಿ 'ಪೇಯ್ಡ್ ನ್ಯೂಸ್' ರೂಢಿಗೆ ಬಂದುಬಿಟ್ಟಿದೆ. ಪತ್ರಕರ್ತರ ಮಧ್ಯೆ ಭ್ರಷ್ಟಾಚಾರ ಹರಡಿದೆ. ಪ್ರೆಸ್ ಕೌನ್ಸಿಲ್ ಅಧ್ಯಕ್ಷ ನ್ಯಾಯಮೂರ್ತಿ ಕಟ್ಜು ಅವರು ಪತ್ರಿಕೋದ್ಯಮದಲ್ಲಿ ಭ್ರಷ್ಟಾಚಾರದ ಕುರಿತು ಹಲವು ಬಾರಿ ಆತಂಕ ವ್ಯಕ್ತಪಡಿಸಿದ್ದಾರೆ. ಸಮಾಜದ ಇತರೆಲ್ಲ ವ್ಯವಸ್ಥೆಗಳಂತೆ ಇಲ್ಲಿಯೂ ನೈತಿಕತೆ ಕುಸಿದಿದೆ. ಇವೆಲ್ಲ ಹೋಗುವುದು, ಸುಧಾರಿಸುವುದು ಯಾವಾಗ? ಇದು ಮಿಲಿಯನ್ ಡಾಲರ್ ಪ್ರಶ್ನೆ.

* * *

ಹಿರಿಯ ಹೋರಾಟಗಾರ, ಕಮ್ಯುನಿಸ್ಟ್ ಸಿದ್ಧಾಂತದ ಸಕ್ರಿಯ ಪ್ರತಿಪಾದಕ, ಕೃಷಿತಜ್ಞ ಮತ್ತು ಜನಬಂಧು ಶ್ರೀ. ಅಡ್ಡೂರು ಶಿವಶಂಕರ ರಾವ್ ಅವರು ಇತ್ತೀಚೆಗೆ ಮಂಗಳೂರಿನಲ್ಲಿ ನಿಧನರಾದರು. ಧನವಿದ್ದರೆ ತಾನೆ ನಿಧನರಾಗುವುದು! ಅವರಲ್ಲಿ ಪ್ರೀತಿಯ ಅಪಾರ ಧನವಿದ್ದಿತು. ಅದನ್ನು ನಾವು ಕಳೆದುಕೊಂಡಿದ್ದೇವೆ. ಮಂಗಳೂರಿಗೆ ಹೋದಾಗ ಅವರನ್ನು ಭೇಟಿಯಾಗದೆ ಹಿಂದಿರುಗಿದ್ದು ಕಡಿಮೆ. ''ಕಕ್ಕಿಲ್ಲಾಯರ ಮನೆಗೆ ಬಂದುಬಿಡಿ, ಅಲ್ಲೇ ಭೇಟಿಯಾಗೋಣ'' ಎನ್ನುವರು, ಇಲ್ಲವೆ ಅವರ ಊರಿಗೆ ಆಹ್ವಾನಿಸಿ ಮನೆ, ತೋಟ, ಪುಸ್ತಕಗಳು, ಹೊಸ ಕೃಷಿ ತಂತ್ರ, ಹೀಗೆ ಸರ್ವಸ್ವವನ್ನೂ ಪರಿಚಯಿಸಿಕೊಡುತ್ತಿದ್ದರು. ನಮ್ಮ ಪೀಳಿಗೆಯವರು, ಅಂದರೆ ೬೦-೭೦ರ ವಯಸ್ಸಿನವರು, ಹೆಚ್ಚು ಕೆಲಸ ಮಾಡುವುದಿಲ್ಲವಲ್ಲಾ, ಏಕೆ, ಎಂಬುದನ್ನು ಕುರಿತಂತೆ ಅವರದೇ ಒಂದು ವ್ಯಾಖ್ಯಾನವನ್ನು ರೂಪಿಸಿದ್ದರು. ಇನ್ನೂ ಕಡಿಮೆ ವಯಸ್ಸಿನವರಿಗೆ ಸಾಕಷ್ಟು ಕುತೂಹಲಗಳಿಲ್ಲವೆಂದು ಅವರಿಗೆ ವ್ಯಸನ. ತೊಂಭತ್ತರ ವಯಸ್ಸನ್ನು ಮೀರಿದ್ದ ಇವರು ಇನ್ನೂ ೫೦ ವರ್ಷ ಹರ್ಷದಿಂದ, ಬಿಡುವಿಲ್ಲದೆ ದುಡಿಯುತ್ತಾ ಜೀವಿಸುವವರಂತೆ ಕಂಡುಬರುತ್ತಿದ್ದರು. ಅಪೂರ್ವ ವ್ಯಕ್ತಿ. ಬಸವರಾಜ ಕಟ್ಟೀಮನಿ ಅವರ 'ಜ್ವಾಲಾಮುಖಿಯ ಮೇಲೆ' ಎಂಬ ಕಾದಂಬರಿಯ ಮುಖ್ಯ ಪಾತ್ರ ಶಿವಶಂಕರರಾಯರ ಚಿತ್ರಣವೇ. ಅಂತಹ ಆತ್ಮೀಯ ಹಿರಿಯ ಚೇತನದ ಅಗಲಿಕೆ ಅನೇಕ ನೆನಪುಗಳನ್ನು ತರುತ್ತದೆ. ಕರ್ತವ್ಯಪ್ರಜ್ಞೆ ಮೂಡಿಸುತ್ತದೆ. ಅವರಿಗೆ ನಮ್ರವಾಗಿ ಗೌರವ ಸೂಚಿಸುತ್ತೇವೆ.

ಈಚೆಗೆ ಒಬ್ಬ ನಿವೃತ್ತ ಅಧ್ಯಾಪಕಿ, ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಕಾರ್ಯಕರ್ತೆ, ಶ್ರೀಮತಿ ಬಿ. ಜಿ. ಕುಸುಮ ಅವರು ಇಂದು ಸಂಭವಿಸುತ್ತಿರುವ ಬೌದ್ಧಿಕ ಪಲ್ಲಟಗಳನ್ನು ಕುರಿತಂತೆ 'ನಮ್ಮ ಕರ್ತವ್ಯವೇನು?' ಎಂಬ ಪ್ರಶ್ನೆಯನ್ನೆತ್ತುತ್ತಿದ್ದಾರೆ. ಅವರ ಮನಸ್ಸಿಗೆ ಆಘಾತ ಉಂಟುಮಾಡಿದ ಪ್ರಸಂಗ ಎಲ್ಲೆಡೆ ಜರುಗುತ್ತಿರುವಂಥದು. ಹೊಸ ರಾಷ್ಟ್ರೀಯ ಚಿಂತನೆಯ ಹೆಸರಿನಲ್ಲಿ ಇತಿಹಾಸವನ್ನು ತಿರುಗುಮುರುಗು ಮಾಡಿ, ಮೌಲ್ಯಗಳನ್ನು ಹೀಯಾಳಿಸಿ, ಗಾಂಧೀಜಿಯಂಥವರನ್ನು ನಿರಂತರವಾಗಿ ದೂಷಿಸಿ, ಕೀಳುಮತೀಯಪ್ರಜ್ಞೆಯನ್ನು ರೂಪಿಸುವ ಕಾರ್ಯಕ್ರಮ ಅದು. 'ಮಹಿಳಾ ಸಮಾಜ'ಗಳು, ವಿದ್ಯಾರ್ಥಿ ಕೇಂದ್ರಗಳು, ಸಾಂಸ್ಕೃತಿಕ ಸಂಸ್ಥೆಗಳು, ಎಲ್ಲವನ್ನೂ ಆಕ್ರಮಿಸಿ ಮತಿಭ್ರಷ್ಟತೆಯನ್ನು ಹರಡುವುದು ಉದ್ದೇಶ. ''ಇಂಥವನ್ನೆಲ್ಲಾ ವಿವೇಚನೆಯೇ ಇಲ್ಲದೆ ಸ್ವೀಕರಿಸಿ ಬಿಡುತ್ತಿದ್ದಾರಲ್ಲ ನಮ್ಮ ಜನ, ನಮಗೇನಾಗಿದೆ?'' ಎನ್ನುವುದು ಆತಂಕ. ಶಿವಶಂಕರ ರಾಯರ ಆತಂಕ ಹಲವು ಕ್ಷೇತ್ರಗಳಿಗೆ ಸಂಬಂಧಿಸಿದ್ದು. ವೆನಿಜುವೇಲಾದ ಅಧ್ಯಕ್ಷ ಹ್ಯೂಗೋ ಚಾವೇಜ್ ಮರಣದ ನಂತರ ಕನ್ನಡ ದಿನಪತ್ರಿಕೆಯೊಂದು ''ನೀನು ಸತ್ತಿದ್ದಕ್ಕೆ ನಾನೇಕೆ ದುಃಖಿಸುವುದಿಲ್ಲ'' ಎಂಬ ಶೀರ್ಷಿಕೆಯ ಲೇಖನ ಪ್ರಕಟಿಸಿತ್ತು. ಅದನ್ನು ಅಮೆರಿಕಾದ ಬೇಹುಗಾರಿ ಸಂಸ್ಥೆಯ ಅಧಿಕಾರಿಯೇ ಬರೆದಿದ್ದರೂ ಅಷ್ಟು ವಿಷಪೂರಿತವಾಗಿ, ನಿರಾಧಾರ ಆಕ್ಷೇಪಗಳನ್ನೆತ್ತಿ ಬರೆಯಲು ಸಾಧ್ಯವಾಗುತ್ತಿರಲಿಲ್ಲ. ಮನಸ್ಸುಗಳನ್ನು ಸ್ವೀಕೃತ ಉದಾತ್ತ ಮೌಲ್ಯಗಳಿಗೆ ವಿಮುಖವಾಗಿಸುವುದು ಈ ಪ್ರಯತ್ನದ ಮುಖ್ಯ ಪ್ರೇರಣೆ. ಹಿಟ್ಲರನನ್ನು ನಾಚಿಸುವಷ್ಟು ಪ್ರಖರವಾಗಿ ನಮ್ಮಲ್ಲಿ ಪ್ರಚಾರ ಸಾಗುತ್ತಿದೆ. ಪುರಸಭೆ ಚುನಾವಣೆಗಳಲ್ಲಿ ಗೆದ್ದದ್ದನ್ನು ಸಂಭ್ರಮದಿಂದ ಆಚರಿಸಿಕೊಳ್ಳುವ ಕಾಂಗ್ರೆಸ್ ಪಕ್ಷಕ್ಕೆ ಈ ಬೆಳವಣಿಗೆಗಳು ಯಾವುವೂ ಕಾಣುವುದಿಲ್ಲ. ಗಾಂಧಿಯನ್ನಾದರೂ ತೆಗಳಿ, ದೇಶವನ್ನಾದರೂ ಮಾರಿ, ಆ ಪಕ್ಷಕ್ಕೆ ಯಾವ ಆತಂಕವೂ ಇಲ್ಲ. ನುಂಗಣ್ಣಗಳಾಗಲು ಒಂದು ಅವಕಾಶ ದೊರೆತರೆ ಸಾಕು! ಇಂತಹ ಕ್ಷುದ್ರ ರಾಜಕೀಯವನ್ನು ಸೈದ್ಧಾಂತಿಕವಾಗಿ ವಿರೋಧಿಸಿ ಮೌಲ್ಯಯುತ ಜೀವನ ನಡೆಸಿದವರು ಮಾನ್ಯ ಶಿವಶಂಕರರಾಯರು.

* * *

ಟಾಟಾ ಕಂಪನಿಯ ಶ್ರೇಯಸ್ಸು, ನೀತಿಬದ್ಧ ನಡತೆ, ಕಾನೂನುರೀತ್ಯಾ ನಡೆಸುವ ವ್ಯವಹಾರ, ಇವನ್ನು ಕುರಿತಂತೆ ಆಗಾಗ್ಗೆ ಮಧುರ ಮಾತು ಹೇಳುವುದು ನಮ್ಮ ಮಾಧ್ಯಮಗಳಿಗೆ ರುಚಿಸುತ್ತದೆ. ಅಂಥವೇ ಮಾತುಗಳನ್ನು ನಾರಾಯಣ ಮೂರ್ತಿ ಮೊದಲಾದ ಎಲ್ಲಾ ಕಾರ್ಪೊರೇಟ್ ವೀರರ ಬಗೆಗೂ ಹೇಳುತ್ತಿರುವುದು ರೂಢಿ. ಸ್ವಾರಸ್ಯವೆಂದರೆ ಈ ಮಾಧ್ಯಮಗಳಲ್ಲೇ ಕಾರ್ಪೊರೇಟ್ ಸಂಸ್ಥೆಗಳ ದುಷ್ಟತನಕ್ಕೆ ಪುರಾವೆಯೊದಗಿಸುವ ವರದಿಗಳು ಬರುತ್ತವೆ. ಆದರೆ ಅವನ್ನು ಮಾಧ್ಯಮಗಳ ಉನ್ನತ ಸಂಪಾದಕರು ಗಮನಿಸುವುದಿಲ್ಲ, ಚರ್ಚಿಸುವುದಿಲ್ಲ, ವಿಶ್ಲೇಷಿಸುವುದಿಲ್ಲ. ಹೋಗಲಿ, ಕಾರ್ಪೊರೇಟ್ ಎಂಜಲಿನಿಂದ ಬಾಳುವ ನಡೆಸಬೇಕಾಗಿಲ್ಲದ ಮಾಧ್ಯಮಗಳಾದರೂ ಅವನ್ನು ಪ್ರಮುಖವಾಗಿ ಬಿಂಬಿಸುತ್ತವೆಯೇ ಎಂದರೆ ಅಲ್ಲೂ ನಿರಾಶೆಯೇ. ಅಂಬಾನಿಯ ಅನಿಲದ ಹಗರಣ, ವೊಡಾಫೋನ್‌ನ ೧೩,೦೦೦ ಕೋಟಿ ರೂಪಾಯಿಗಳ ತೆರಿಗೆ ಗುಳುಂ ಆಗುವುದು ಮತ್ತು ಅದಕ್ಕೆ ಚಿದಂಬರಂ ಹುನ್ನಾರ ಹಾಗೂ ಮನಮೋಹನ ಸಿಂಗ್ ಪ್ರೋತ್ಸಾಹ, ಇಂಥವನ್ನು ನವಿರಾಗಿ ಮುಚ್ಚಿಹಾಕದಿದ್ದರೆ ಮಾಧ್ಯಮಗಳ ಕೀಳುತನ ಕಾಣೆಯಾಗಿಬಿಡುತ್ತದಲ್ಲಾ ಎಂಬ ವ್ಯಥೆ ಇರಬೇಕು! ಚಿಕ್ಕದಾಗಿ ವರದಿಯಾದ ಘೋರ ಮೋಸದ ಸಮಾಚಾರ ಇದು: ಟಾಟಾ ಕಂಪನಿಯ 'ಟಿಸಿಎಸ್' ಎಂಬ ವಿಭಾಗ ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ''ಸೇವೆ'' ಸಲ್ಲಿಸುತ್ತದೆ (ಅದು ನಿಜವಾದ ಸೇವೆಯೇ, ಏಕೆಂದರೆ ಅದು ಅಮೆರಿಕಾದ ಸೇವೆ!). ಈ ಕಂಪನಿಯ ನೂರಾರು ಗಿರಾಕಿಗಳು ಅಮೆರಿಕಾದಲ್ಲಿ ಇರುವುದರಿಂದ ನೂರಾರು ಕಂಪನಿಯ ನೌಕರರನ್ನು ಅಮೆರಿಕಾಕ್ಕೆ ಕಳುಹಿಸಲಾಗುತ್ತದೆ. ಸಂಬಳ ಕೊಡುವುದು ಟಾಟಾ ಕಂಪನಿ, ಆದರೆ ಅಮೆರಿಕಾದಲ್ಲಿ ನೌಕರಿಯಾದ್ದರಿಂದ ಸಂಬಳ ಪಡೆದವರು ಅಮೆರಿಕಾ ಸರ್ಕಾರಕ್ಕೆ ತೆರಿಗೆ ಪಾವತಿಸಬೇಕು. ತೆರಿಗೆಯನ್ನು ಹಿಡಿದುಕೊಂಡು ಸಂಬಳ ಕೊಡುತ್ತಾರೆ. ಆದರೆ ಅಮೆರಿಕಾ ಸರ್ಕಾರವು ಹಾಗೆ ಪಾವತಿಸಿದ ತೆರಿಗೆಯನ್ನು ಒಟ್ಟಾಗಿ ಚೆಕ್‌ಗಳ ಮೂಲಕ ಕಂಪನಿಗೆ ಹಿಂತಿರುಗಿಸುತ್ತದೆ. ಅಂದರೆ, ಅದು ನೌಕರರಿಗೆ ಮುಟ್ಟಿಸಬೇಕಾದ ಹಣ. ಟಿಸಿಎಸ್ ಚಾಣಾಕ್ಷ ಕಂಪನಿ ಏನು ಮಾಡಿತ್ತೆಂದರೆ ಅಷ್ಟು ಚೆಕ್‌ಗಳನ್ನೂ ತನ್ನದೆಂದು ಇಟ್ಟುಕೊಂಡಿತು. ಹಣ ತುಂಬಿಸಿಕೊಂಡಿತು. ನೌಕರರಿಗೆ ಒಂದು ಪುಡಿಗಾಸನ್ನೂ ಹಿಂದಿರುಗಿಸಲಿಲ್ಲ. ಇದು ಅನೀತಿಯಷ್ಟೇ ಅಲ್ಲ, ಹಣಕಾಸು ಅವ್ಯವಹಾರ ಮತ್ತು ಅಪರಾಧ ಕೂಡ. ನೌಕರರು ತಮ್ಮ ಹಣಕ್ಕಾಗಿ ಒತ್ತಾಯಿಸಿದರು. ಅದೂ ಅಮೆರಿಕಾದಲ್ಲಿ. ಟಾಟಾ ಕಂಪನಿ ಜಗ್ಗಲಿಲ್ಲ. ಬೇರೆ ಹಾದಿ ಇಲ್ಲದೆ ನೌಕರರು ಕ್ಯಾಲಿಫೋರ್ನಿಯಾದ ನ್ಯಾಯಾಲಯಕ್ಕೆ ಹೋದರು. ತಮ್ಮ ಹಣ ನುಂಗಿರುವ ಕಂಪನಿ ವಿರುದ್ಧ ಕಾನೂನು ಕ್ರಮಕ್ಕೆ ಆಗ್ರಹಿಸಿದರು. ನೇಣು ಕುತ್ತಿಗೆಗೆ ಬಂದಾಗ ಕಂಪನಿಯು ಕೋರ್ಟಿನ ಹೊರಗೆ ನೌಕರರೊಡನೆ ಒಪ್ಪಂದಕ್ಕೆ ಬರುವುದಾಗಿ ಕೋರ್ಟಿಗೆ ಆಶ್ವಾಸನೆ ನೀಡಿ ಪಾರಾಯಿತು. ಹಾಗೆ ಒಪ್ಪಂದ ಆದಾಗ ಕಂಪನಿ ಕೊಟ್ಟ ಹಣ ೧೬೩ ಕೋಟಿ ಡಾಲರುಗಳು. ನೌಕರರು ಏಳು ವರ್ಷ ನ್ಯಾಯಾಲಯದಲ್ಲಿ ಮೊಕದ್ದಮೆ ನಡೆಸಿದ್ದರು. ಇದು ನಮ್ಮ ಐ.ಟಿ. ಕಂಪನಿಗಳ ಶ್ರೇಯಸ್ಸು. ಟಾಟಾ ಕಂಪನಿ ಬಹಳ ಗೌರವಾನ್ವಿತ ಕಂಪನಿ ಅಲ್ಲವೇ! ಅದರ ಘನತೆ ಹೀಗಿರುವಾಗ ಇನ್ನು ಬೇರೆಯವರ ಮಾತೇಕೆ!

*(೧೦ನೇ ಪುಟಕ್ಕೆ)*




## ಮಾರ್ಚ್ ತಿಂಗಳ ಸಂಚಿಕೆ

ವಿ. ಚಂದ್ರಶೇಖರ ನಂಗಲಿ ಅವರ 'ಡಿಜಿಟಲ್ ಯುಗದಲ್ಲಿ ಕನ್ನಡ ಜಗತ್ತು: ಹೊಸ ಸವಾಲುಗಳು' (ಮಾರ್ಚ್ ೨೦೧೩ ಹೊಸತು) ಉಪಯುಕ್ತವಾದ ಕನ್ನಡ ಸಬಲೀಕರಣದ ಚಿಂತನಶೀಲ ಬರಹವಾಗಿದೆ. ಡಬ್ಬಿಂಗ್ ತಂತ್ರಜ್ಞಾನ ಇಂದಿನ ಡಿಜಿಟಲ್ ಯುಗದಲ್ಲಿ ಕನ್ನಡಕ್ಕೆ ದಕ್ಕಲಿ.

ಬೆಂಗಳೂರು — ಡಾ॥ ಜಿ. ಕೃಷ್ಣಪ್ಪ

## ಜನವರಿ ಸಂಚಿಕೆ

'ಹೊಸತು' ವಿಶೇಷಾಂಕ ಉತ್ತಮವಾಗಿದೆ. ನಿಮ್ಮೆಲ್ಲರ ಮುತುವರ್ಜಿಯ ಸಹಿಯನ್ನು ಇಲ್ಲಿ ಕಾಣಬಹುದಾಗಿತ್ತು. ವಿಶೇಷಾಂಕದ ಬಹುತೇಕ ಬರಹಗಳು, ಕತೆಗಳು ಗಂಭೀರ ವಾಗಿವೆ ಹಾಗೂ ಚಿಂತನೆಗೆ ಹಚ್ಚುವಂತಿವೆ. ಹೀಗಾಗಿ ವರ್ಷಪೂರ್ತಿ ಕಣ್ಣಿಗೆ ಕಾಣುವಂತೆ ಇಟ್ಟುಕೊಳ್ಳಬಹುದಾದ 'ಹೊಸತು' ಇದಾಗಿದೆ. ಕರಿಮಣಿ ಸರದಲ್ಲಿ ಕೆಂಪು ಹವಳದಂತೆ... ಪುಸ್ತಕ ಪ್ರಕಾಶನದ ನೂತನ ಪುಸ್ತಕಗಳ ವರ್ಣಮಯ ಮುಖಪುಟಗಳನ್ನು ಗಮನಿಸುವುದೇ ಹಬ್ಬದ ಸಂಭ್ರಮವಾಗಿತ್ತು.

ಕಗ್ಗತ್ತಲಿನಲ್ಲಿ ಹಸಿರಾಗಿ ಬಿಳಿ ಹೂಗಳನ್ನು ಸಿಂಗರಿಸಿ ಕೊಂಡು ಬಂಡೆಯ ಮೇಲೆ ಚಿಗುರೊಡೆದ ಗಿಡದ 'ಮುಖಚಿತ್ರ'ವನ್ನು ಗಮನಿಸುತ್ತಿದ್ದಾಗ ''...ದಲಿತರು ಬಂಡೆಯ ಮೇಲೆ ಚಿಗುರೊಡೆಯಬೇಕಿದೆ...'' ಎಂಬರ್ಥ ದಲ್ಲಿ ಹೆಚ್ಚುಕಮ್ಮಿ ೪ ದಶಕದ ಹಿಂದೆ ಸಾಹಿತಿ ದೇವನೂರ ಮಹಾದೇವರು ನುಡಿದಿದ್ದ ನುಡಿ ನೆನಪಾಗುತ್ತಿತ್ತು. ದಲಿತರ ಪಾಲಿಗೆ ಹಿಂದೂಧರ್ಮದ 'ಹಿಟ್ಲರ್ ಕಟ್ಟಲೆ' ಗಳು ಅವರ ಮೇಲೆ ಬಂಡೆಗಲ್ಲಿನಂತೆ ಈಗಲೂ ಬೇರೆ ಬೇರೆ ವಿನ್ಯಾಸದಲ್ಲಿ ಅವತರಿಸಿಕೊಂಡು... ಸುಡುಬಿಸಿಲಿನಲ್ಲಿ ಒಣಗಿದಂತಿರಲು.

ವಿಚಾರವಾದಿ ನರೇಂದ್ರ ನಾಯಕ್‌ರವರ ಸಂದರ್ಶನ ಉತ್ತಮವಾಗಿದೆ. ವೈಜ್ಞಾನಿಕ ಮನೋಭಾವ ವೈಚಾರಿಕ ಪ್ರಜ್ಞೆಯನ್ನು ಅವರು ತಮ್ಮ ವೈಯಕ್ತಿಕ ಬದುಕಿನಲ್ಲೂ ಅಳವಡಿಸಿಕೊಂಡಿರುವ ಪಾರದರ್ಶಕತೆ ಬೆಂಕಿ ಕೊಂಡ ಹಾದುಹೋದಂತಿದೆ! ಇಂತಹ ಪ್ರಯೋಗ, ಟಫ್ ಡಿಸಿಷನ್‌ಗೆ 'ಪ್ರಾಮಾಣಿಕ'ವಾಗಿ ಒಡ್ಡಿಕೊಳ್ಳುವವರ ಕೊರತೆ ನಮ್ಮಲ್ಲಿರುವುದರಿಂದ ಇದೊಂದು ಚಳುವಳಿ ರೂಪದಲ್ಲಿ ಬೆಳೆಯುತ್ತಿಲ್ಲವೇನೊ. ಅಥವಾ ಮಾಧ್ಯಮಗಳ ನಿರ್ಲಕ್ಷ್ಯವೂ ಕಾರಣವಾಗಿರಬಹುದೇ?

ದು. ಸರಸ್ವತಿ, ವಿ. ಆರ್. ಕಾರ್ಪೆಂಟರ್ ಮತ್ತಿತರರ ಕತೆಗಳು ಚೆನ್ನಾಗಿದ್ದವು.

ಜಿ. ರಾಜಶೇಖರ, ಬರಗೂರು ರಾಮಚಂದ್ರಪ್ಪ, ನಟರಾಜ ಬೂದಾಳು, ಒಕ್ಕುಂದ, ಜಿ. ರಾಮಕೃಷ್ಣ, ಮುಂತಾದವರ ಬರಹಗಳೂ ಚಿಂತನಾರ್ಹವಾಗಿವೆ. 'ಹೊಸತು' ವಿಶೇಷಾಂಕವನ್ನು ಇನ್ನೂ ಓದುತ್ತಾ ಇದ್ದೇನೆ. ಡಿ. ಎಸ್. ನಾಗಭೂಷಣರವರ ಲೇಖನ ಕೆಲವು ಕಡೆ ಹಾದಿ ತಪ್ಪಿದಂತಿದೆ ಅಥವಾ ಓದುಗರ ಹಾದಿಯನ್ನು ತಪ್ಪಿಸಿ ಸಂಘಪರಿವಾರದ ಬಡಾವಣೆಯತ್ತ ಕರೆದೊಯ್ಯುವ ಪ್ರಯತ್ನದಲ್ಲಿರುವಂತೆ ತೋಚಿತು. 'ಕ್ರೈಸ್ತರು ತಮ್ಮ ಮತ ಪ್ರಸಾರಕ್ಕಾಗಿ ಜಾತಿವ್ಯವಸ್ಥೆಗೂ ಹಿಂದೂಧರ್ಮಕ್ಕೂ ತಳಕು ಹಾಕಿದರು' ಎನ್ನುವುದು ಏನು? ಹಿಂದೂಧರ್ಮದ ಅಡಿಪಾಯವೇ ಜಾತಿವ್ಯವಸ್ಥೆ ಇದು ಅಸಮಾನತೆಯ ಮೇಲೆ ಸ್ಥಾಪಿತವಾಗಿರುವಂಥದ್ದು. ಜಾತಿಭೇದ, ಶ್ರೇಣೀಕರಣ,




ವೈದಿಕ ಹಿಂದೂಧರ್ಮದ ಮಾತೃಬೇರು. 'ಜಾತಿಪದ್ಧತಿ ಹಿಂದೂಧರ್ಮದ ಉತ್ಪತ್ತಿಯಾಗಿದೆ' ಎಂಬುದನ್ನು ಶ್ರೇಷ್ಠ ಸಮಾಜ ವಿಜ್ಞಾನಿ ಬಿ. ಆರ್. ಅಂಬೇಡ್ಕರ್ ಒಳಗೊಂಡಂತೆ 'ಭಾರತೀಯ' ಬಹಳಷ್ಟು ಚಿಂತಕರು, ದಾರ್ಶನಿಕರು, ಹೇಳಿರುವುದನ್ನು ಈ ಲೇಖಕರು ಗಮನಿಸಬೇಕಿದೆ. ಮತಾಂತರ ಜರಗುತ್ತಿರುವುದು ಹಿಂದೂಧರ್ಮದ ಜಾತಿಪದ್ಧತಿಯಿಂದಾಗಿ. ಇಲ್ಲಿನ ಶ್ರೇಷ್ಠ ಹಾಗೂ ಕನಿಷ್ಠ ಎಂಬ ಕ್ರೌರ್ಯದಿಂದಾಗಿ. ದಲಿತ-ಶೂದ್ರರ ಜಾಗೃತಿಗೆ ಆಂಗ್ಲರ ಬೌದ್ಧಿಕತೆ, ಮಾನವೀಯತೆ ಕಾರಣವಾಗಿದೆ.

ಮಡಿಕೇರಿ — ರಾಮಸ್ವಾಮಿ

## ''ಪ್ರತಿಕ್ರಿಯೆ'' - ಫೆಬ್ರವರಿ ಸಂಚಿಕೆ

ಫೆಬ್ರವರಿ - ೨೦೧೩ರ ಸಂಚಿಕೆ ಓದಿದೆ. ಹಿರಿಯ ವಿಚಾರವಾದಿ ಲೇಖಕರಾದ ಜ. ಹೊ. ನಾರಾಯಣಸ್ವಾಮಿ ಯವರ 'ಸಾಮಾಜಿಕ ಪರಿವರ್ತನೆಯಲ್ಲಿ ಪತ್ರಿಕೆಗಳು ಮತ್ತು ಡಾ॥ ಅಂಬೇಡ್ಕರ್' ಮತ್ತು ತಿಳಿವು ಅಂಕಣದಲ್ಲಿ ಈರಪ್ಪ ಎಂ. ಕಂಬಳಿ ಬರೆದಿರುವ 'ಮಿದುಳು ಜ್ವರ ಹರಡುವ ಮಂದಿ!' ಲೇಖನಗಳು ವಿಚಾರಪೂರಕವಾಗಿವೆ. ಸದರಿ ಲೇಖಕರಿಗೆ ನನ್ನ ಮೆಚ್ಚುಗೆಯನ್ನು ಈ ಮೂಲಕ ವ್ಯಕ್ತಪಡಿಸುತ್ತೇನೆ.

ಜೊತೆಗೆ ಈ ಲೇಖನಗಳನ್ನು ಪ್ರಕಟಿಸಿದ 'ಹೊಸತು'ವಿನ ಔದಾರ್ಯ ಸ್ತುತ್ಯಾರ್ಹ. ಇಂಥ ವಿಚಾರ ಪ್ರಚೋದಕ ಲೇಖನಗಳು ಇನ್ನು ಹೆಚ್ಚೆಚ್ಚು ಪ್ರಕಟವಾಗಲೆಂದು ಆಶಿಸುತ್ತೇನೆ.

ಬಳ್ಳಾರಿ — ಡಾ॥ ವೆಂಕಟಯ್ಯ ಅಪ್ಪಗೆರೆ

ಹೊಸತು ಮಾಸ ಪತ್ರಿಕೆಯ ಮಾರ್ಚ್ ೨೦೧೩ರ ಸಂಚಿಕೆಯಲ್ಲಿ 'ನೈತಿಕ ಗೂಂಡಾಗಿರಿಗೆ ಮಟ್ಟ ಹಾಕಿರಿ' ಎನ್ನುವ ಶ್ರೀ ಸಿ. ಆರ್. ಕೃಷ್ಣರಾವ್‌ರವರ ಲೇಖನ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಂಘಪರಿವಾರದ ಉಪಟಳದ ವೃತ್ತಾಂತವನ್ನು ಚೆನ್ನಾಗಿಯೇ ವಿವರಿಸುತ್ತದೆ.

ಆ ಸಂಘಟನೆಗಳು ಯುವಕ-ಯುವತಿಯರ ಮೇಲೆ ಹಲ್ಲೆ ನಡೆಸುವ ವಿವರವನ್ನು ನೀಡುತ್ತ ''ಸಂಬಂಧಪಟ್ಟವರು ಅನ್ಯಜಾತಿಯವರಾಗಿದ್ದರಂತೂ ತೀರಿತು ಹೊಡೆತ ತಪ್ಪಿದ್ದಲ್ಲ'' ಎಂಬ ವಾಕ್ಯವಿದೆ.

ಅನ್ಯಜಾತಿಯವರು/ಅನ್ಯಧರ್ಮೀಯರು ಎನ್ನುವ ಪದವನ್ನು ವ್ಯಾಪಕವಾಗಿ ಬಳಸುವುದು ಸಂಘಪರಿವಾರ ದವರು. ಅವರ ವ್ಯಾಖ್ಯೆಯ ಪ್ರಕಾರ ಈ ದೇಶದಲ್ಲಿ ಹಿಂದುಗಳು ಮಾತ್ರವೇ ದೇಶಭಕ್ತರು, ಮುಸಲ್ಮಾನರು ಮತ್ತು ಕ್ರೈಸ್ತ ಧರ್ಮದವರು 'ಹೊರಗಿನ' ಧರ್ಮವನ್ನು ಪಾಲಿಸುವ 'ಅನ್ಯಧರ್ಮೀಯರು'. ಆದುದರಿಂದ ಇವರ 'ದೇಶಭಕ್ತಿ' ಅನುಮಾನಾಸ್ಪದ. ಹಾಗಾಗಿ ನಾವು ಅಂದರೆ ಹಿಂದುಗಳು/ದೇಶಭಕ್ತರು ಒಂದು ಕಡೆ 'ನಮ್ಮ' ವಿರುದ್ಧ ಅವರು ಎನ್ನುವ ತುಚ್ಛಭಾವದಲ್ಲಿ ಅನ್ಯ ಧರ್ಮೀಯರು/ ದೇಶದ್ರೋಹಿಗಳು ಎನ್ನುವ ನುಡಿಕಟ್ಟನ್ನು ಸಂಘಪರಿವಾರ ದವರು ಬಹಳ ವ್ಯಾಪಕವಾಗಿ ತಮ್ಮ ಬರಹಗಳಲ್ಲಿ, ಭಾಷೆಗಳಲ್ಲಿ ಬಳಸುತ್ತಾರೆ.

ಶ್ರೀ ಕೃಷ್ಣರಾವ್‌ರವರ ಲೇಖನದಲ್ಲಿ ಕೂಡ 'ಅನ್ಯ ಧರ್ಮೀಯರು' ಎಂಬ ಪದ ಅಪ್ರಜ್ಞಾಪೂರ್ವಕವಾಗಿ ನುಸುಳಿದೆ. ಕೋಮುವಾದಿಗಳನ್ನು ವಿರೋಧಿಸುವವರು ತಮ್ಮ ವೈಚಾರಿಕೆಯಂತೆ ಭಾಷೆಯ ಕುರಿತೂ ಸ್ಪಷ್ಟವಾಗಿರಬೇಕು.

ವಿರಾಜಪೇಟೆ — ಐ. ಆರ್. ಪ್ರಮೋದ್

ಆತ್ಮೀಯ 'ಹೊಸತು' ಸಂಪಾದಕ ಬಳಗಕ್ಕೆ: ನನ್ನ ಬರಹ, ವಿಚಾರಕ್ಕೊಂದು ಅರ್ಥಪೂರ್ಣತೆ ಸಿಕ್ಕಿದ್ದು ನಿಮ್ಮ 'ಹೊಸತು' ಒದಿನೊಂದಿಗೆ. ಅದರಲ್ಲಿ ಪ್ರಕಟವಾಗುವ ಲೇಖನಗಳು, 'ಸಂಪಾದಕೀಯ' ಇವು ಈ ಕಾಡಮೂಲೆ ಯಲ್ಲಿರುವ ನಮಗೆ ಹೊರ ಜಗತ್ತಿನ ಪರಿಚಯ ಮಾಡಿಸಿವೆ. ಹೊಸ ಆಲೋಚನೆಗೆ ಹಚ್ಚಿವೆ.

'ಹೊಸತು' ಹೊಸ ಹೊಸ ವಿಚಾರ, ಚರ್ಚೆ, ಸಂವಾದದೊಂದಿಗೆ ನವ ನವೀನತೆಯನ್ನ ನಿತ್ಯ ನೂತನತೆಯನ್ನ ಓದುಗರಿಗೆ ತಲುಪಿಸುತ್ತಾ ಹೊಚ್ಚ ಹೊಸತನದೊಂದಿಗೆ ಪ್ರಸಾರವಾಗಲಿ ಅಂತ ಆಶಿಸುತ್ತೇನೆ. ನನ್ನೆಲ್ಲಾ ಕುಟುಂಬ ಒಟ್ಟಿಗೆ ಓದಿ ಚರ್ಚೆ, ವಿಮರ್ಶೆಗಳನ್ನ (ಇಲ್ಲಿನ ಪ್ರಕಟಿತ ವಿಷಯಗಳ ಬಗ್ಗೆ) ಮಾಡ್ತೀವಿ. ನಮಗೆ ಕುಟುಂಬದ ಗೆಳೆಯ, ಸಲಹೆಗಾರ, ಗುರು ಎಲ್ಲವೂ ಹೊಸತೇ ಆಗಿದೆ.

ಚಿಕ್ಕಮಗಳೂರು — ಭಾಗ್ಯ ಹಾಗಲಗಂಚಿ

## ವಿಶೇಷ ಪತ್ರ

ಮಾರ್ಚ್ ೨೦೧೩ರ ಹೊಸತು ಪತ್ರಿಕೆಯಲ್ಲಿ ಪ್ರಕಟವಾದ ಡಾ॥ ಎನ್. ಗಾಯತ್ರಿ ಅವರ 'ಕೊಡಗಿನ ಗೌರಮ್ಮ ನೂರರ ನೆನಪು' ಲೇಖನ ಸಕಾಲಿಕ ಹಾಗೂ ಉಪಯುಕ್ತ ಮಾಹಿತಿಯನ್ನು ಒಳಗೊಂಡಿದೆ. ಇದರೊಂದಿಗೆ ಮತ್ತೊಂದು ಮುಖ್ಯ ಸಂಗತಿಯೊಂದನ್ನು ಇಲ್ಲಿ ಪ್ರಸ್ತಾಪಿಸುತ್ತಿದ್ದೇನೆ. ೧೯೮೪ರಲ್ಲಿ ಮಡಿಕೇರಿಯ ಅಂದಿನ ಸರ್ಕಾರಿ ಕಾಲೇಜಿನಲ್ಲಿ (ಇಂದು ಫೀಲ್ಡ್ ಮಾರ್ಷಲ್ ಕೆ. ಎಂ. ಕಾರ್ಯಪ್ಪ ವಿ. ವಿ. ಕಾಲೇಜು) ನಾನು, ಗೀತಾನಾವಲ್ ಕನ್ನಡ ಅಧ್ಯಾಪಕರು. ೧೯೮೬ರಲ್ಲಿ ಶ್ಯಾಮಸುಂದರ ಕೋಚಿ ಮುಖ್ಯಸ್ಥರಾಗಿ ನಮ್ಮೊಂದಿಗೆ ಸೇರ್ಪಡೆಯಾದರು. ನಮ್ಮ ಪ್ರಯತ್ನದ ಫಲವಾಗಿ ಕರ್ನಾಟಕದಲ್ಲಿ ಪ್ರಥಮಬಾರಿಗೆ ಪಿ.ಯು. ಶಿಕ್ಷಣದಲ್ಲಿ ಐಚ್ಛಿಕ ಕನ್ನಡವನ್ನು ಪ್ರಾರಂಭಿಸಿದೆವು. ಈ ಸಂಯೋಜನೆಯನ್ನು ದಿನಾಂಕ ೨೯.೦೭.೧೯೮೭ರಂದು ಡಾ॥ ಎಂ. ಚಿದಾನಂದಮೂರ್ತಿಯವರು ಉದ್ಘಾಟನೆ ಮಾಡಿದರು. ಕನ್ನಡವನ್ನು ಐಚ್ಛಿಕವಾಗಿ ಕಲಿಯುವ ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಲ್ಲಿ ಶಾಶ್ವತ ಯೋಜನೆಯೊಂದನ್ನು ರೂಪಿಸುವ ಆಲೋಚನೆ ಬಂದಾಗ ತಟಕ್ಕನೆ ನೆನಪಿಗೆ ಬಂದದ್ದು ಕೊಡಗಿನ ಗೌರಮ್ಮನವರ ಹೆಸರು. ಕೂಡಲೆ ಕಾರ್ಯೋನ್ಮುಖರಾದೆವು. ಅಂದಿನ ಜಿಲ್ಲಾಧಿಕಾರಿಗಳಾಗಿದ್ದ ಶ್ರೀ ವೆಂಕಟೇಶ್, ಕೊಡಗು ಲೇಖಕ ಕಲಾವಿದರ ಬಳಗದ ಅಧ್ಯಕ್ಷ ಹಾಗೂ ಪ್ರಜಾವಾಣಿ ಪತ್ರಕರ್ತ ಇ. ವಿ. ಸತ್ಯನಾರಾಯಣ ಹಾಗೂ ವಿಶೇಷವಾಗಿ ಗೌರಮ್ಮನವರ ಪುತ್ರ ಬಿ. ಜಿ. ವಸಂತ ಅವರನ್ನು ಭೇಟಿ ಮಾಡಿ ಕೊಡಗಿನ ಗೌರಮ್ಮನವರ ಹೆಸರಿನಲ್ಲಿ ೫೦ನೇ ಪುಣ್ಯಸ್ಮರಣೆಗಾಗಿ ದತ್ತಿನಿಧಿ ಆರಂಭಿಸಿ ನಿಧಿಯ ಬಡ್ಡಿ ಹಣದಲ್ಲಿ ಚಿನ್ನದ ಪದಕವನ್ನು ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಪ್ರದಾನ ಮಾಡುವುದೆಂದು ತೀರ್ಮಾನಿಸಿದೆವು.

ಈ ಹಿನ್ನೆಲೆಯಲ್ಲಿ ಶ್ರೀ ಬಿ. ಜಿ. ವಸಂತರವರು ೪,೦೦೦/- ರೂ. ಗೌರಮ್ಮನವರ ಸಹೋದರ ಎನ್. ಆರ್. ಗೋಪಾಲಕೃಷ್ಣ ಅವರು ೪,೫೦೦/- ರೂ.ಗಳನ್ನು ಆರಂಭಿಕ ಠೇವಣಿಯಾಗಿ ನೀಡಿದ ಈ ಯೋಜನೆಗೆ ಫೀಲ್ಡ್ ಮಾರ್ಷಲ್ ಕೆ. ಎಂ. ಕಾರ್ಯಪ್ಪನವರು ಸ್ವಯಂ ಪ್ರೇರಿತರಾಗಿ ೫೦೦/- ರೂ.ಗಳನ್ನು ನೀಡಿ ಶುಭ ಹಾರೈಸಿದರು. ನಂತರದ ದಿನಗಳಲ್ಲಿ ಮಡಿಕೇರಿ ಪರಿಸರದ ೩೫ ಜನ ಅಭಿಮಾನಿಗಳು ನೀಡಿದ ಉದಾರ ದಾನದಿಂದ ೨೦,೦೦೦/- ರೂ.ಗಳು ಸಂಗ್ರಹವಾಯ್ತು. ಅಂದಿನ ಕಾಲಕ್ಕೆ ಇದು ನಮಗೆ ಬಹು ದೊಡ್ಡ ಮೊತ್ತ. ಈ ಹಣವನ್ನು ಸರ್ಕಾರಿ ಕಾಲೇಜಿನಲ್ಲಿ ದತ್ತಿನಿಧಿಯಾಗಿ ಇಡಲಾಯ್ತು.

ಎರಡು ವರ್ಷಗಳ ಬಳಿಕ ೧೯೮೮ರಲ್ಲಿ ಗೌರಮ್ಮನವರ ೫೦ನೇ ಪುಣ್ಯತಿಥಿ ಸ್ಮರಣೆಯಲ್ಲಿ ಪ್ರಥಮ ಚಿನ್ನದ ಪದಕವನ್ನು ಡಾ॥ ಶಿವರಾಮ ಕಾರಂತರು ಎಂ. ವೆಂಕಟೇಶ ಎಂಬ ವಿದ್ಯಾರ್ಥಿಗೆ ಪ್ರದಾನ ಮಾಡಿದ್ದು, ಗೌರಮ್ಮನವರ ನೆನಪಿಗೆ ಕಾರಂತರು ಎರಡು ಸಂಪಿಗೆ ಸಸಿಗಳನ್ನು ಕಾಲೇಜು ಆವರಣದಲ್ಲಿ ನೆಟ್ಟು 'ಸಿರಿಸಂಪಿಗೆ', 'ಸವಿಸಂಪಿಗೆ' ಎಂದು ನಾಮಕರಣ ಮಾಡಿದ್ದು (ಸಿರಿಗನ್ನಡ, ಸವಿಗನ್ನಡ ಪಿ.ಯು. ಕನ್ನಡ ಐಚ್ಛಿಕ ಪಠ್ಯಗಳು) ಮಹತ್ವದ ಚಾರಿತ್ರಿಕ ಸಂಗತಿ. ಈ ಕಾರ್ಯಕ್ರಮಕ್ಕೆ ವಿಶ್ರಾಂತ ಕುಲಪತಿ ಡಾ॥ ಬಿ. ಎ. ವಿವೇಕ ರೈ ಮುಖ್ಯ ಅತಿಥಿಯಾಗಿ ಸಾಕ್ಷೀಕರಿಸಿದ್ದರು. ಅಂದಿನಿಂದ ನಿರಂತರವಾಗಿ ಈ ಯೋಜನೆ ಇಂದಿಗೂ ಸದರಿ ಕಾಲೇಜಿನಲ್ಲಿ ಬೇರೆ ವಿನ್ಯಾಸದಲ್ಲಿ ಮುಂದುವರಿದುಕೊಂಡು ಬಂದಿರುತ್ತದೆ.

*ದಾವಣಗೆರೆ* **ಡಾ॥ ಮಲ್ಲಿಕಾರ್ಜುನ ಕಲಮರಹಳ್ಳಿ**

## ದೀನಬಂಧುವಿನಿಂದ ಶುಭಾಶಯಗಳು

೨೦೧೩ರ 'ಹೊಸತು' ವಿಶೇಷ ಸಂಚಿಕೆಯಲ್ಲಿ ನನ್ನ ಪುಸ್ತಕ 'ಹಳ್ಳಿ ಹಾದಿ'ಯ ಕುರಿತು ಬರೆದಿರುವ ಲೇಖನ 'ಬಿಟ್ಟು ಬಂದ ಹಳ್ಳಿಗಳ ಪಾಡು ನೋಡಿ' ಇದನ್ನು ಓದಿದೆ.

## ಬುಟ್ಟಿ ಹೆಣೆವ ಧ್ಯಾನ

ತೆಳುವಾಗಿ ಕೊಯ್ದು
ಬಿದಿರು
ಆಕಾರ ಪಡೆಯುತ್ತಿದೆ ಬುಟ್ಟಿಯಾಗಿ
ಅವಳು ಹೆಣೆವ ಧ್ಯಾನದಲ್ಲಿ!
ಘಮಿಸುತ್ತಿದೆ
ಬೆವರು,
ಅವಳ ಸೀರೆಯ ಸೆರಗಿನಂಚಿನ ತುಂಬಾ
ಮಣಿಸಿದಂತೆ
ಬಾಗುತ್ತಿದೆ ಬಿದಿರು ಧನ್ಯತೆಯಿಂದಾ...

ಅಣ್ಣನ ಕಾಯಕ,
ಬುದ್ಧನ ಧ್ಯಾನದಂತೆ
ಪಕ್ವಗೊಂಡ ಕೈಯೊಳಗೆ
ಅರಳುತ್ತಿದೆ ಬಿದರ ಬುಟ್ಟಿ
ಹೂವೊಂದು ಅರಳಿದಂತೆ
ಬೀಳದಿರಲಿ ಜಾಗತೀಕರಣದ ನೆದರು
ನಿನ್ನ ಈ ಕಸುಬಿಗೆ!

ಈ ಬುಟ್ಟಿಯಿಲ್ಲದೆ
ಹೇಗೆ ನಡೆದೀತು ನಮ್ಮ ಬದುಕು?
ನಸುಕಿನಲ್ಲೇ ಎತ್ತುಗಳ ಶಗಣಿಯ
ತುಂಬಿ ಹಾಕಬೇಕು ತಿಪ್ಪೆಗೆ,
ನಿಸೂರಾಗಿ ರಸ್ತೆಯಾಗಲು
ಬಿಸಿಲ ಮೆರವಣಿಗೆಯಲ್ಲೇ
ಮಣ್ಣು ಕಲ್ಲುಗಳ ಹೊತ್ತು ಹಾಕಬೇಕು
ಹೊತ್ತ ನೂಕಬೇಕು
ತುತ್ತು ಕಾಣಬೇಕು...
ಬುಟ್ಟಿಯ ಹೆಣೆಯುತಿದೆ
ಹೊಟ್ಟೆ ರಟ್ಟೆಯ ನಡುವೆ ಬದುಕನ್ನು!

**ಸಂತೋಷ ಅಂಗಡಿ**
ಬಾದಾಮಿ

*(ಮಾರ್ಚ್ ೨೦೧೩ರ 'ಹೊಸತು' ಮುಖಪುಟ ಚಿತ್ರ ನೋಡಿ ಬರೆದ ಪದ್ಯ)*

ಲೇಖನ ಬಹಳ ಚೆನ್ನಾಗಿ ಮೂಡಿಬಂದಿದೆ. ಲೇಖನದ ತುಂಬ ನನ್ನ ಅನೇಕ ಅಂಕಣಗಳನ್ನು ಉಲ್ಲೇಖಿಸುತ್ತಾ ಸವಿಸ್ತಾರವಾಗಿ ಬರೆದಿದ್ದೀರಿ. ವಂದನೆಗಳು.

ಚಾಮರಾಜನಗರ **ಜಿ. ಎಸ್. ಜಯದೇವ**

## ಆಧುನಿಕ ಸಮಾಜದಲ್ಲಿ ಹೆಣ್ಣುಮಕ್ಕಳು ಎಷ್ಟು ಸುರಕ್ಷಿತರು ?

''ಯತ್ರ ನಾರ್ಯಸ್ತು ಪೂಜ್ಯಂತೆ ರಮಂತೆ ತತ್ರ ದೇವತಃ''. ಎಲ್ಲಿ ಮಹಿಳೆಯರನ್ನು ಗೌರವದಿಂದ, ಪೂಜನೀಯ ಭಾವದಿಂದ ಕಾಣಲಾಗುತ್ತದೆಯೋ ಅಲ್ಲಿ ದೇವತೆಗಳು ವಾಸಿಸುತ್ತಾರೆ ಎಂದರ್ಥ. ಆದರೆ ಈಗ ನಮ್ಮ ದೇಶದಲ್ಲಿ, ಪ್ರತಿರಾಜ್ಯಗಳಲ್ಲಿ ನಡೆಯುತ್ತಿರುವ ಅತ್ಯಾಚಾರ, ನಾರೀಪೀಡಕ ಪ್ರಕರಣಗಳನ್ನು ಗಮನಿಸಿದರೆ, ನಮ್ಮ ದೇಶ ಈಗ ದೇವತೆಗಳು ವಾಸಿಸಲು ಯೋಗ್ಯ ಸ್ಥಾನ ಅಲ್ಲ ಎಂದಾಯಿತು. ಬದಲಿಗೆ ರಕ್ಕಸ ಪ್ರವೃತ್ತಿಯ ರಾಕ್ಷಸರು ವಾಸಿಸುತ್ತಿದ್ದಾರೆಂದು ಅರ್ಥವಾಗುತ್ತದೆ.

ಒಬ್ಬ ಮಹಿಳೆ ತಾಯಿಯಾಗಿ ಹೆಂಡತಿಯಾಗಿ ಮತ್ತು ಮಗಳಾಗಿ ಎಲ್ಲ ಪಾತ್ರಗಳಲ್ಲಿಯೂ ನ್ಯಾಯಯುತವಾಗಿ ಹೊಂದಾಣಿಕೆ ಮಾಡಿಕೊಂಡು ಬದುಕುವ ಶಕ್ತಿ ನಾರಿಮಣಿಗಳಿಗಲ್ಲದೆ ಬೇರೆ ಯಾರಿಗೆ ತಾನೆ ಬರಲು ಸಾಧ್ಯ. ಅಂಥ ತ್ಯಾಗಮಯಿ ನಾರಿಯ ಮೇಲೆ, ಕರುಣಾಮಯಿ ತಾಯಿಯ ಮೇಲೆ, ಏನನ್ನೂ ಅರಿಯದ ಮುಗ್ಧ ಕಂದಮ್ಮಗಳ ಮೇಲೆ ಅತ್ಯಾಚಾರ ನಡೆಯುತ್ತಿರುವುದು ಅತೀವ ಖೇದದ ಸಂಗತಿಯಾಗಿದೆ.

ಅನೇಕ ಗಣ್ಯವ್ಯಕ್ತಿಗಳಿಂದ ಅನೇಕ ಹೇಳಿಕೆಗಳು ಬಂದವು. ಅತ್ಯಾಚಾರಿಗಳಲ್ಲಿ 'ಅಣ್ಣಾ ಬಿಟ್ಬಿಡಿ ಪ್ಲೀಸ್' ಎಂದು ಗೋಗರೆಯಬೇಕು. ಎಂಥಾ ಸುಲಭ ಪರಿಹಾರವಿದು. ಎಲ್ಲರೂ ಇದನ್ನೇ ಮಾಡಬಹುದಲ್ಲಾ, ಅಣ್ಣಾ ಅಂದ ತಕ್ಷಣ ತಂಗಿ ಅಂತ ಹೇಳಿ ಕಾಲಿಗೆ ಬಿದ್ದು ಕ್ಷಮೆ ಕೇಳಿ ಇನ್ನು ನೀ ಆರಾಮಾಗಿ ಮನೆಗೆ ಹೋಗು ಎಂದು ಹೇಳುವ ಮನಃಸ್ಥಿತಿ ಅತ್ಯಾಚಾರಿಗಳಿಗಿರುತ್ತದೆಯಾ. ಅಂತಹ ಒಳ್ಳೆಯ ಸಂಸ್ಕಾರ, ಒಳ್ಳೆಯ ಗುಣ ಅವರದ್ದಾಗಿದ್ದರೆ, ಅವರ್‍ಯಾಕೆ ಅತ್ಯಾಚಾರದಂತಹ ಹೀನಕೃತ್ಯ ಎಸಗಲು ಮುಂದಾಗುತ್ತಿದ್ದರು.

ಇತ್ತೀಚೆಗೆ ಲೈಂಗಿಕ ದೌರ್ಜನ್ಯಗಳು ಹೆಚ್ಚಾಗಲು ಟಿ.ವಿ. ಸಿನೆಮಾದಂತಹ ದೃಶ್ಯ-ಮಾಧ್ಯಮಗಳ ಪ್ರಚೋದನಾತ್ಮಕ ದೃಶ್ಯಗಳು ಕಾರಣವಾಗುತ್ತವೆ. ಇತ್ತೀಚಿನ ಸಿನೆಮಾಗಳನ್ನು ನೋಡಿದರೆ ಕೇವಲ ಅರೆಬರೆ ಬಟ್ಟೆ ತೊಟ್ಟು ನೃತ್ಯ ಮಾಡುವುದು, ಎಗ್ಗಿಲ್ಲದೆ ಮೈ ತೋರಿಸುವುದು. ಮಕ್ಕಳು ವಯಸ್ಸಾದ ಅಜ್ಜಿಯರು ಅಥವಾ ಕುಟುಂಬದ ಎಲ್ಲ ಜನರು ಒಟ್ಟಿಗೆ ಕುಳಿತು ನೋಡಲು ಮುಜುಗರ ಪಡಬೇಕಾದ ದೃಶ್ಯಗಳೇ ಹೆಚ್ಚಾಗಿ ಕಂಡುಬರುತ್ತವೆ. ಇವುಗಳಿಂದ ನಮ್ಮ ಸಮಾಜಕ್ಕೆ ಒಳ್ಳೆಯ ಸಂದೇಶ ಕೊಡಲಾರದೆ ಕೆಟ್ಟ ಸಂದೇಶವನ್ನು ಕೊಟ್ಟಂತಾಗುತ್ತಿದೆ. ಇದರಿಂದ ನಮ್ಮ ಸಮಾಜದ ಸ್ವಾಸ್ಥ್ಯ ಹಾಳಾಗುತ್ತದೆ.

ಮತ್ತೊಂದು ಕಾರಣವೇನೆಂದರೆ ಈಗಿನ ಜನರ ಮನಸ್ಥಿತಿ ಹೇಗಾಗಿದೆ ಅಂದರೆ ನಾನು ಏನೇ ಅಪರಾಧ ಮಾಡಿದರೂ ಸುಲಭವಾಗಿ ತಪ್ಪಿಸಿಕೊಳ್ಳಬಹುದು, ಶಿಕ್ಷೆಯಿಂದ ಪಾರಾಗಬಹುದು ಎನ್ನುವ ಮನಸ್ಥಿತಿ, ಕಾನೂನಿನ ಸಡಿಲತೆ, ಕಾನೂನು ಪಾಲಕರ ಉದ್ದೇಶಿತ ನಿರ್ಲಕ್ಷ್ಯ ಇಂಥ ಪ್ರಕರಣಗಳು ಹೆಚ್ಚಾಗಲು ಕಾರಣವಾಗಿವೆ.

ಕೆಲವರು ಅತ್ಯಾಚಾರಕ್ಕೆ ಮತ್ತೊಂದು ಪರಿಹಾರವನ್ನು ಹೇಳಿದರು. ಅದೇನೆಂದರೆ ಸ್ತ್ರೀ ಮನೆಬಿಟ್ಟು ಹೊರಗೆ ಬರಬಾರದು. ಅಂದರೆ ಮಹಿಳೆ ತನ್ನಲ್ಲಿ ಅಗಾಧವಾದ ಬುದ್ಧಿಶಕ್ತಿ ಇದ್ದರೂ ಅದನ್ನು ಅದುಮಿಟ್ಟುಕೊಂಡು ಲಕ್ಷ್ಮಣರೇಖೆ ಒಳಗಡೆ ಇರಬೇಕು. ಯಾವುದೇ ಕ್ಷೇತ್ರದಲ್ಲಿ ಸಾಧನೆ ಮಾಡುವಂತಿಲ್ಲ. ಏಕೆಂದರೆ ಬುದ್ಧಿ ಅನ್ನೋದು ಕೇವಲ ಪುರುಷನ ಸ್ವತ್ತು ಅಂತ ತಿಳಿದಿದ್ದಾರೆ ಈ ಜನ. ಮಹಿಳೆ ತನ್ನನ್ನು, ಮನೆಯನ್ನು, ಮಕ್ಕಳನ್ನು ಸಂಭಾಳಿಸುತ್ತಲೇ ಹೊರಗೆ ಹೋಗಿ ದುಡಿದು ಆರ್ಥಿಕವಾಗಿ ತನ್ನ ಗಂಡನಿಗೆ ಸಹಾಯ ಆಗುವುದಲ್ಲದೆ ತನ್ನಲ್ಲಿರುವ ಪ್ರತಿಭೆ, ಸಾಮರ್ಥ್ಯಗಳಿಂದ ಎಲ್ಲ ಕ್ಷೇತ್ರಗಳಲ್ಲಿ ಮುಂದೆ ಬರುತ್ತಿರುವುದು ಇಂಥ ಜನರಿಗೆ ಸಹಿಸಲಾಗದೆ ಇಂತಹ ಹೇಳಿಕೆಗಳನ್ನು ಕೊಡುತ್ತಿರಬಹುದು.

ಇದಕ್ಕೆ ಸ್ವಲ್ಪವಾದರೂ ಕಡಿವಾಣ ಬೀಳಬೇಕೆಂದರೆ ಪುರುಷ ಪ್ರಧಾನ ಸಮಾಜದಲ್ಲಿ ಪುರುಷರ ಮನಸ್ಥಿತಿ ಮೊದಲು ಬದಲಾಗಬೇಕು. ಹೆಣ್ಣುಮಕ್ಕಳನ್ನು ತನ್ನ ಸರಿ ಸಮಾನವಾಗಿ ಗೌರವದಿಂದ ಕಾಣಬೇಕು. ಯಾರಾದರೂ ಇಂಥ ಅಪರಾಧ ಮಾಡಿದರೆ ಮಹಿಳೆ-ಪುರುಷರೆನ್ನದೆ ಎಲ್ಲರೂ ಒಟ್ಟಾಗಿ ಆ ವ್ಯಕ್ತಿಯ ವಿರುದ್ಧ ಹೋರಾಡಬೇಕು. ಆ ವ್ಯಕ್ತಿಗೆ ಸರಿಯಾದ ಶಿಕ್ಷೆ ಆಗುವವರೆಗೆ ಸುಮ್ಮನಿರಬಾರದು. ಇಂತಹ ವ್ಯಕ್ತಿಗೆ ಮರಣದಂಡನೆ ಅಥವಾ ಜೀವಾವಧಿ ಶಿಕ್ಷೆಯಂತಹ ಕಠಿಣ ಶಿಕ್ಷೆ ಆಗಬೇಕು. ಯಾರೂ ಕೂಡ ಅಂದರೆ ಎಂತಹ ದುಡ್ಡಿದ್ದವರು ಕೂಡ ಇಂತಹ ತಪ್ಪನ್ನು ಮಾಡಿ ಸುಲಭವಾಗಿ ತಪ್ಪಿಸಿಕೊಳ್ಳಲು ಆಗದಂತಹ ಪರಿಸ್ಥಿತಿ ಸಮಾಜದಲ್ಲಿ ನಿರ್ಮಾಣ ಆಗಬೇಕು.

ಮಹಿಳೆಯರು ಅಥವಾ ಯುವತಿಯರು ಈ ವಿಷಯದಲ್ಲಿ ಹೆಚ್ಚು ಜಾಗರೂಕರಾಗಬೇಕು. ತಮ್ಮ ಮೇಲೆ ಯಾವುದೇ ಅತ್ಯಾಚಾರ ಅಥವಾ ಲೈಂಗಿಕ ಕಿರುಕುಳ ಉಂಟಾದರೆ ಯಾವುದೇ ಅಳುಕಿಲ್ಲದೆ ಆ ವ್ಯಕ್ತಿಯ ವಿರುದ್ಧ ಹೋರಾಡಬೇಕು. ಮಹಿಳೆ ಅಥವಾ ಯುವತಿ ಸ್ವತಃ ಜಾಗ್ರತಳು, ಧೈರ್ಯಶಾಲಿ ಮತ್ತು ಪರಿಸ್ಥಿತಿ ನಿಭಾಯಿಸುವ ಸಾಮರ್ಥ್ಯ ಹೊಂದದ ಹೊರತು ಇಂಥ ಕಾಮುಕರ ಅಟ್ಟಹಾಸಗಳಿಗೆ ಕಡಿವಾಣ ಹಾಕಲು ಸಾಧ್ಯವಾಗುವುದಿಲ್ಲ.

*ಸದಲಗಾ* **ಡಾ॥ ಪ್ರತಿಭಾ. ಕಾಗೆ**

**ಭಾನಾಮತಿ**

ಮಾರ್ಚ್ ಸಂಚಿಕೆಯಲ್ಲಿ ಪ್ರಕಟವಾದ ''ಭಾನಾಮತಿ'' ಕುರಿತ ಲೇಖನ ಸಾಕಷ್ಟು ತಿಳಿವಳಿಕೆಯಿಂದ ಕೂಡಿಲ್ಲ.

ಭಾನಾಮತಿ ಕಾಯಿಲೆ ಅಲ್ಲ; ಮನೋವಿಜ್ಞಾನಕ್ಕೆ ಸಂಬಂಧಪಟ್ಟಿರುವುದೂ ಅಲ್ಲ. ಅದೊಂದು ಗುಪ್ತ ವಿದ್ಯೆ. ಧರ್ಮಶಾಸ್ತ್ರಗಳಲ್ಲಿ ಮಂತ್ರ-ತಂತ್ರ ಹೀಗೆ ಎರಡು ಭಾಗಗಳು ಇವೆ. ಮಂತ್ರ ಸಾತ್ವಿಕ - ತಂತ್ರ ತಾಮಸಿ ವಿದ್ಯೆ. ತಂತ್ರದಲ್ಲಿ ಬೂಟಾಟಿಕೆಯ ಶಕ್ತಿ ಇದೆ. ಈ ಬೂಟಾಟಿಕೆಯ ವಿದ್ಯೆಯಲ್ಲಿ ಭಾನಾಮತಿ ಪ್ರಯೋಗ ನಡೆಯುತ್ತಿದೆ. ಭಾನಾಮತಿಯಲ್ಲಿ ೩೨ ಪ್ರಕಾರದ ಗೊಂಬೆ ಆಟಗಳು ಇವೆಯಂತೆ. ಆ ಎಲ್ಲಾ ವಿದ್ಯೆ ಕಲಿತವನು ತನ್ನ ಸ್ವಸ್ಥಳದಿಂದ ದೂರದ ಅಂಬರದವರೆಗೆ ಪೀಡೆ ಕೊಡಬಲ್ಲ, ಬೆಂಕಿ ಹುಟ್ಟಿಸಬಲ್ಲ; ವಸ್ತ್ರಗಳನ್ನು ಹರಿಯಬಲ್ಲ; ಗೋಡೆಗಳ ಮೇಲೆ ಭೀತಿದಾಯಕ ಶಬ್ದಗಳನ್ನು ಬರೆಯಬಲ್ಲ. ಇಂಥ ನೂರಾರು ಘಟನೆಗಳನ್ನು ಉದಾಹರಿಸಬಲ್ಲೆ. ಆದ್ದರಿಂದ ಈ ಭಾನಾಮತಿಗೆ ಮಾನಸಿಕ ಕಾಯಿಲೆ ಎನ್ನಲುಬಾರದು.

*ಬೆಳಗಾವಿ* **ವಿ. ವಿಜಯಕುಮಾರ್**

---

***ಈ ತಿಂಗಳು (೭ನೇ ಪುಟದಿಂದ)***

ಯಾವುದು ಹೆಚ್ಚು ಆಕ್ಷೇಪಾರ್ಹ? ಅಲ್ಲಿ ಅಮೆರಿಕಾದಲ್ಲಿ ೧೬೩ ಕೋಟಿ ಗುಳುಂ ಮಾಡುವುದೋ ಅಥವಾ ಇಲ್ಲಿ ಭಾರತದಲ್ಲಿ ೧೬೩ ಎಕರೆ ಜಮೀನನ್ನು 'ಅಭಿವೃದ್ಧಿ'ಗಾಗಿ ಕಸಿದುಕೊಳ್ಳುವುದೋ?

* * *

ಮಹಾರಾಷ್ಟ್ರದ ಔರಂಗಾಬಾದ್ ಬಳಿಯ ಮಹಿಳೆಯೊಬ್ಬಾಕೆ ಪೊಲೀಸರ ಕಿರುಕುಳ ತಾಳಲಾರದೆ ಕರ್ನಾಟಕದ ಮಂತ್ರಾಲಯಕ್ಕೆ ಬಂದು ಬೃಹತ್ ಕುಕ್ಷಿ ರಾಘವೇಂದ್ರ ಸ್ವಾಮಿಗಳ ಸನ್ನಿಧಿಯಲ್ಲಿ ಆತ್ಮಹತ್ಯೆಯ ಯತ್ನ ಮಾಡಿದಳೆಂದು ವರದಿಯಾಗಿದೆ. ಮೋಹನ ಭಾಗವತರ ತಿಳಿವಳಿಕೆಗಾಗಿ ಹೇಳಬೇಕಾದ ವಿಚಾರವೇನೆಂದರೆ ಈ ಮಹಿಳೆ 'ಭಾರತ' ದವಳು, 'ಇಂಡಿಯಾ'ದವಳಲ್ಲ. ಆಕೆಗೆ ಪೊಲೀಸರು ಕಿರುಕುಳ ನೀಡುವ ಮುನ್ನ ಸುಸಂಸ್ಕೃತ ಪುರುಷರು ಆಕೆಯನ್ನು ಅತಿಕೆಟ್ಟದಾಗಿ ನಡೆಸಿಕೊಂಡಿದ್ದರು. ಇಂತಹ ವರದಿಯಾಗದ ಘಟನೆಗಳು ನೂರಾರಿವೆ. ಪುರುಷರು ಆತ್ಮಾವಲೋಕನ ಮಾಡಿಕೊಳ್ಳಬೇಕಾದ ವಿಚಾರ ಇದು. ಕೇಂದ್ರ ಸರ್ಕಾರ, ಆಯ್ದ ಸಚಿವರ ತಂಡ, ವರ್ಮಾ ಸಮಿತಿಯ ಶಿಫಾರಸ್ಸುಗಳು, ಇವೆಲ್ಲಾ ಆಶ್ವಾಸನೆ ಕೊಟ್ಟು ''ಮಹಿಳೆಯ ಸ್ಥಿತಿ ನಾಳೆ ಹೇಗಿರುತ್ತದೆ ನೋಡಿ'' ಎಂದು ಪುಸಲಾಯಿಸುತ್ತವೆ. ಆದರೆ ಬೆಳಗಾದರೆ ಮತ್ತೆ ಅದೇ ಭೀಕರತೆ. ಇದಕ್ಕೇನು ಪರಿಹಾರ. ಮನಮೋಹನ ಸಿಂಗ್ ಸರ್ಕಾರಕ್ಕೆ ಪರಿಹಾರ ಥಟಕ್ಕನೆ ಸಿಕ್ಕಿಬಿಟ್ಟಿದೆ. ಏನದು ಪರಿಹಾರ?

ದೇಶದಲ್ಲಿ ಪ್ರತಿದಿನವೂ ಅತ್ಯಾಚಾರದ ಪ್ರಕರಣಗಳು ಎಷ್ಟೊಂದು ವರದಿಯಾಗುತ್ತಿವೆಯೆಂದರೆ ಇದು ಹೀಗೇ ಮುಂದುವರಿಯಲು ಬಿಟ್ಟರೆ ಸದ್ಯದಲ್ಲೇ ''ಅತ್ಯಾಚಾರ'' ಎಂಬ ದಿನಪತ್ರಿಕೆ ಅಗತ್ಯವಾಗಬಹುದು. ಅತ್ಯಂತ ಕಳವಳ ಉಂಟು ಮಾಡುವ ಸಂಗತಿ ಇದು. ಒಂದು ಕಡೆ ನಿರರ್ಗಳವಾಗಿ ಸಂಸ್ಕೃತಿಯ ಶ್ಲಾಘನೆ, ಮತ್ತೊಂದು ಕಡೆ ಕರಾಳ ಸಂಸ್ಕೃತಿಯ ರೌದ್ರನೃತ್ಯ. ಐದು ಸಾವಿರ ವರ್ಷಗಳ ಭಾರತೀಯ ಸಂಸ್ಕೃತಿಯ ಬಗ್ಗೆ ಹೆಮ್ಮೆಪಡುವ ದೇಶದಲ್ಲಿ ಅಮಾನುಷ ಘಟನೆಗಳು ಒಂದೇ, ಎರಡೇ! ಮನಮೋಹನ ಸಿಂಗರ ಪರಿಹಾರದ ಒಂದು ತುಣುಕು ಹೀಗಿದೆ: ವರ್ಮಾ ಸಮಿತಿಯ ವರದಿ ಬಂದಿತು. ಕೇಂದ್ರ ಸರ್ಕಾರದ ಅತೃಪ್ತಿಕರ ಆರ್ಡಿನೆನ್ಸ್ ಬಂದಿತು. ಈಗ ಸಂಪುಟ ಸಚಿವರ ಒಂದು ತಂಡ ಸಲಹೆ ನೀಡಲು ನೇಮಕಗೊಂಡಿದೆ. ಈ ಮಧ್ಯದ ಒಂದು ವಿಲಕ್ಷಣ ಬೆಳವಣಿಗೆ ಏನೆಂದರೆ ಸರ್ಕಾರವು ಅಮೆರಿಕಾದ ಹಾರ್ವರ್ಡ್ ವಿಶ್ವವಿದ್ಯಾನಿಲಯದ ಜಾಕ್ಲಿನ್ ಭಾಭಾ ಎಂಬ ಕಾನೂನು ತಜ್ಞೆಯನ್ನು ನಮ್ಮ ದೇಶದಲ್ಲಿ ಒಂದು ವಿಧೇಯಕ ತಯಾರಿಸಲು ಸಲಹೆಗಾರಳನ್ನಾಗಿ ನೇಮಿಸಿದೆ. ಹಾರ್ವರ್ಡ್ ಸರ್ವಜ್ಞರಿಲ್ಲದೆ ವಿಧೇಯಕ ಹೇಗೆ ತಾನೆ ಸಾಧ್ಯ! ಆಕೆಗೆ ಭಾರತದ ಪರಿಚಯ ಎಷ್ಟಿದೆಯೋ ತಿಳಿಯದು, ಆದರೆ ಆಕೆ ''ಪರಿಣತೆ.'' ನಮ್ಮ ದೇಶದಲ್ಲಿ ಆರೋ ಏಳೋ ಕಾನೂನು ವಿಶ್ವವಿದ್ಯಾನಿಲಯಗಳಿವೆ. ನಾಲ್ಕು ನೂರು ಬೇರೆ ವಿಶ್ವವಿದ್ಯಾನಿಲಯಗಳಿವೆ. ನೂರಾರು ಸಮಾಜಶಾಸ್ತ್ರಜ್ಞರಿದ್ದಾರೆ. ಮಾಧ್ಯಮಗಳಲ್ಲಿ ಲಕ್ಷಗಟ್ಟಲೆ ಜನ ಕೆಲಸ ಮಾಡುತ್ತಿದ್ದಾರೆ. ಒಂದು ಕೋಟಿ ಪದವೀಧರರಿದ್ದಾರೆ. ಇವರಾರಿಗೂ ತಿಳಿಯದ ಅಮೋಘ ಸತ್ಯ ಜಾಕ್ಲಿನ್‌ಳಿಗೆ ತಿಳಿದಿದೆ! ಅದಕ್ಕೇ ಆಕೆಯ ಸಲಹೆ ಅಗತ್ಯ. ಕತ್ರಿಗುಪ್ಪೆಯಲ್ಲಿ ಚರಂಡಿ ರಿಪೇರಿ ಆಗಬೇಕಾದರೂ ಹಾರ್ವರ್ಡ್ ಪರಿಣತರು ಬರುತ್ತಾರೆ ಸದ್ಯದಲ್ಲೇ. ಇದೇನು ವಿದೇಶದ ಮೂಢ ವ್ಯಾಮೋಹ! ಇದು ನಿಜವಾದ ನವವಸಾಹತುಶಾಹಿ. ನಮ್ಮ ಯುವಕರು ಹೇಳಬೇಕಾಗಿದೆ, ''ನಮ್ಮ ವ್ಯಕ್ತಿತ್ವ ಅಷ್ಟು ಹೊಲಸಾಗಿಲ್ಲ. ನಮ್ಮ ಆಗುಹೋಗುಗಳನ್ನು ನಿಯಂತ್ರಿಸಿಕೊಳ್ಳಲು ನಾವು ಸಮರ್ಥರಿದ್ದೇವೆ. ನಮ್ಮ ಮಹಿಳೆಯರ ಯೋಗಕ್ಷೇಮ ಕಾಯ್ದುಕೊಳ್ಳಲು ಸಿದ್ಧರಿದ್ದೇವೆ. ಅದಕ್ಕೆ ಅಗತ್ಯವಾದ ಕಾನೂನು ರೂಪಿಸಲು ಅಶಕ್ತರಾಗುವಷ್ಟು ನಮ್ಮ ಬೌದ್ಧಿಕ ದಿವಾಳಿತನವು ನಮ್ಮನ್ನು ದರಿದ್ರರನ್ನಾಗಿಸಿಲ್ಲ'' ಎಂದು. ಅಂತಹ ಪ್ರಜ್ಞೆ ಮೂಡಿಸುವ ವಾತಾವರಣವನ್ನು ಸಿಂಗ್ - ಅದ್ವಾನಿ ನಿರ್ಮಿಸಲಾರರು, ಅದನ್ನು ಯುವಕರು ಮಾಡಬೇಕು.

ಇದನ್ನು ಬರೆದ ತರುವಾಯದಲ್ಲಿ ಪಾರ್ಲಿಮೆಂಟ್ ಒಂದು ನಿರ್ಣಯ ಅಂಗೀಕರಿಸಿದೆ. ಅದು ಅಷ್ಟೇನೂ ಸಮರ್ಪಕವಲ್ಲ, ಆದರೂ ಈಗ ಇರುವ ಕಾನೂನಿಗಿಂತ ಉತ್ತಮ. ಆದರೆ ಅದರ ಅನುಷ್ಠಾನ ಹೇಗಿರುತ್ತದೆ? ಅದೇ ಪೊಲೀಸರು, ನ್ಯಾಯಾಲಯ ಮತ್ತು ಕಾನೂನಿನ ಪರಿಧಿಯಿಂದ ಹೊರಗಿರುವ ಪಡೆಗಳು, ಖಾಪ್ ಪಂಚಾಯಿತಿಗಳು. ಆದ್ದರಿಂದ ಜನ ಈ ವಿಚಾರದಲ್ಲಿ ಪ್ರವೇಶಿಸಿ ಸನ್ನಿವೇಶವನ್ನು ನಿಯಂತ್ರಿಸಬೇಕು.

* * *

ತಮಟೆಗಳ ಸದ್ದು ಬೆಂಗಳೂರಿನಲ್ಲಿ ಹೆಚ್ಚಾಗಿ ಕೇಳಬರಲಿದೆಯಂತೆ. ಹೀಗಾದರೂ ಉದ್ಯೋಗ ಕಲ್ಪಿಸಿ ಕೊಡುತ್ತೇವೆ ನಮ್ಮ ಯುವಕರಿಗೆ ಎನ್ನುತ್ತದೆ ಬೆಂಗಳೂರು ನಗರಸಭೆ. ಕೊಡಬೇಕಾದ ತೆರಿಗೆ ಕೊಡದಿದ್ದರೆ ಹೆಚ್ಚೆಂದರೆ ನಿಮ್ಮ ಮನೆಮುಂದೆ ತಮಟೆ ನುಡಿಸುತ್ತಾರೆ. ಅಷ್ಟೆ; ನಿಮ್ಮ ಮನೆ ಜಪ್ತಿ ಮಾಡುವುದಿಲ್ಲ, ತೆರಿಗೆ ವಸೂಲು ಮಾಡಲು ಕಾನೂನು ಕ್ರಮ ಜರುಗಿಸುವುದಿಲ್ಲ, ಇದಲ್ಲವೆ ಔದಾರ್ಯ! ಅಂದಹಾಗೆ ತೆರಿಗೆ ಕೊಡದೆ ಬಿಬಿಎಂಪಿಗೆ ಸತಾಯಿಸುತ್ತಿರುವವರು ಭಾರೀ ಶ್ರೀಮಂತರು, ಉದ್ಯಮಿಗಳು, ಸರಕಾರಿ ಅಧಿಕಾರಿಗಳು. ಇವರು ಅದಕ್ಕೆಲ್ಲ ಬಗ್ಗುವವರಲ್ಲ. ಈಜೀಪುರದ ಗುಡಿಸಲಿಗೆ ಬುಲ್‌ಡೋಜರ್ ಸೇವೆ ಮತ್ತು ಗರುಡಮಾಲ್‌ಗೆ ತಮಟೆ ಸೇವೆ!! ತಮಟೆ ಹೊಡಿಸಿ ತೆರಿಗೆ ಕಟ್ಟಲು ಇನ್ನೊಂದು ವರ್ಷ ಗಡುವು ನೀಡಬೇಕಾದರೆ ಗರುಡ ಮಾಲ್ ಯಾರಿಗಾದರೂ 'ಚಿತ್ರಾನ್ನ' ತಿನ್ನಿಸಬೇಕೆ? ಹಾಗಾದರೆ ಎಷ್ಟು ಕಿಲೋ ಚಿತ್ರಾನ್ನ?

**ಶೇಷನಾರಾಯಣ**

# ಕಾವೇರಿ ಅಂತಿಮ ತೀರ್ಪು: ಮುಂದೇನಾಗಬಹುದು?

ಜಲವಿವಾದ ಕಾಯಿದೆ ಪ್ರಕಾರ, ಕೇಂದ್ರ ಸರಕಾರ ಕಾವೇರಿ ನದಿ ಪ್ರಾಧಿಕಾರವನ್ನು ರದ್ದುಪಡಿಸಿ, ನಿರ್ವಹಣಾ ಮಂಡಳಿಯನ್ನು ರಚಿಸಲು ನಿರ್ಧರಿಸಿ, ತೀರ್ಪು ನೀಡಿದೆ.

ತಮಿಳುನಾಡು ಸರಕಾರ ಈ ನಿರ್ಧಾರವನ್ನು ಸ್ವಾಗತಿಸಿ, 'ದೀರ್ಘಕಾಲದ ನಮ್ಮ ಹೋರಾಟಕ್ಕೆ ಜಯ ಲಭಿಸಿದೆ' ಎಂದು ಘೋಷಿಸುವ ಗೆಜ್ಜೆಟ್ ಪ್ರತಿಯನ್ನು ಪತ್ರಕರ್ತರಿಗೆ ತೋರಿಸುತ್ತ ಮುಖ್ಯಮಂತ್ರಿ ಜಯಲಲಿತಾ ಅವರು ವಿಜಯದ ನಗೆ ಬೀರಿದ್ದಾರೆ.

ಆದರೆ ಕರ್ನಾಟಕವು ಕಾವೇರಿ ನಿರ್ವಹಣಾ ಮಂಡಳಿಯೇ ಬೇಡ ಎನ್ನುವ ಅಭಿಪ್ರಾಯ ಹೊಂದಿದೆ. ಇದಕ್ಕೆ ಕಾರಣ ಅನೇಕ ಪ್ರಮುಖ ಸಮಸ್ಯೆಗಳು ಹಾಗೆಯೇ ಇವೆ. ಇದರಿಂದ ತಮಿಳುನಾಡಿಗೇ ಹೆಚ್ಚು ಲಾಭವಾಗಲಿದೆ ಎನ್ನುವುದೂ ಒಂದು. ಈ ವಿಷಯ ವಾಗಿಯೇ ಚರ್ಚಿಸಲು ಮುಖ್ಯಮಂತ್ರಿ ಜಗದೀಶ ಶೆಟ್ಟರ ಅವರು ೨೭-೦೨-೨೦೧೩ರಂದು ಸಂಸದರ ಸಭೆ ಕರೆದಿದ್ದರು. ಕೇಂದ್ರದಲ್ಲಿ ರಾಜ್ಯವನ್ನು ಪ್ರತಿನಿಧಿಸಿರುವ ಸಚಿವರಾದ ವೀರಪ್ಪ ಮೊಯಿಲಿ, ಮಲ್ಲಿಕಾರ್ಜುನ ಖರ್ಗೆ ಹಾಗೂ ಕೆ. ರಹಮಾನ್ ಖಾನ್ ಸಹ ಇನ್ನಿಷ್ಟು ಸಂಸದರೊಂದಿಗೆ ಭಾಗವಹಿಸಿದ್ದರು. ಸಭೆಯಲ್ಲಿ ಬರೀ ಚಿಂತನೆ ಮಾತ್ರ ನಡೆದಿದೆ. ನಿರ್ವಹಣಾ ಮಂಡಳಿ ಬೇಡವೆಂದು ಸುಪ್ರೀಂ ಕೋರ್ಟಿಗೆ ಮನವಿ ಸಲ್ಲಿಸುವ ಸಲುವಾಗಿ ಆ ಸಭೆಯಲ್ಲಿ ಚರ್ಚೆ ಮಾತ್ರ ಆಗಿದೆ. ಅಂತಿಮ ತೀರ್ಮಾನವೇನೂ ಆಗಿಲ್ಲ.

ಕಾವೇರಿ ನಿರ್ವಹಣಾ ಮಂಡಳಿಯ ರಚನೆ ಈಗಲೇ ಆಗಲೇಬೇಕೆಂದು ತಮಿಳುನಾಡು ಸರಕಾರ ತರಾತುರಿ ಮಾಡುತ್ತ ಇದೆ. ಕೇಂದ್ರ ಸರಕಾರಕ್ಕೆ ನಿರ್ದೇಶನ ನೀಡಬೇಕು ಎಂದು ಅದು ಸುಪ್ರೀಂ ಕೋರ್ಟಿಗೂ ಹೋಗಿತ್ತು. ಆದರೆ ಹಾಗೆ ಆದೇಶ ನೀಡಲು ಸುಪ್ರೀಂ ಕೋರ್ಟ್ ನಿರಾಕರಿಸಿತು. ಅದು ಕೇಂದ್ರ ಸರಕಾರದ ವಿವೇಚನೆಗೆ ಬಿಟ್ಟ ವಿಷಯ ಎಂದುಬಿಟ್ಟಿತು. ತಮಿಳುನಾಡು ಸರಕಾರಕ್ಕೆ ಇದರಿಂದ ಮುಖಭಂಗವಾದಂತೆಯೂ ಆಯಿತು.

ಈಗ ಎರಡೂ ಕಡೆಯ ಸಂಸದರು ಪ್ರಧಾನಿ ಮನಮೋಹನ ಸಿಂಗ್ ಅವರ ಸುತ್ತಮುತ್ತ ಓಡಾಡುತ್ತ ಲಾಬಿ ಮಾಡಿಕೊಂಡಿದ್ದಾರೆ.

ಇದು ರಾಜ್ಯಗಳ ತಿಕ್ಕಾಟದ ವಿಷಯವಾಯಿತು. ಕಾವೇರಿ ಅಂತಿಮ ತೀರ್ಪಿನಲ್ಲಿ ಏನಿದೆ ? ತೀರ್ಪಿನಲ್ಲಿ ಏನು ಹೇಳಿದೆ ?

ನೀರು ನಿರ್ವಹಣಾ ಮಂಡಳಿಗೇ ಪರಮಾಧಿಕಾರ. ಕಾವೇರಿ ಕೊಳ್ಳದ ಎಲ್ಲ ಜಲಾಶಯಗಳ ನೀರಿನ ಸಂಗ್ರಹಣೆ, ನಿರ್ವಹಣೆ, ನೀರು ಬಿಡುವ ವಿಧಾನ ಇತ್ಯಾದಿಗಳು ಎಲ್ಲವೂ ನಿರ್ವಹಣಾ ಮಂಡಳಿಗೇ ಸೇರಬೇಕು; ಸೇರುತ್ತದೆ. ಈ ವಿಧದಲ್ಲಿಯೂ ಯಾವುದೇ ರಾಜ್ಯ ಅಸಹಕಾರ ನೀಡಿದರೆ, ಕೇಂದ್ರ ಸರಕಾರದ ಬೆಂಬಲ ಪಡೆದು ನಿರ್ವಹಣಾ ಮಂಡಳಿ ಬಲವಂತವಾಗಿ ಜಾರಿ ಮಾಡುವ ಅಧಿಕಾರ ಹೊಂದಿರುತ್ತದೆ. ಇದು ಈ ತೀರ್ಪಿನ ಮುಖ್ಯ ವಿಚಾರ.

ಕಾವೇರಿ ಜಲಾನಯನ ಪ್ರದೇಶ ದಲ್ಲಿರುವ ಹವಾಮಾನ ಇಲಾಖೆ, ಕೇಂದ್ರ ಜಲ ಆಯೋಗ ಇಲ್ಲವೇ ರಾಜ್ಯಗಳು ಸಂಗ್ರಹಿಸುವ ಮಳೆಯ ಪ್ರಮಾಣ – ಇತ್ಯಾದಿ ವಿಷಯಗಳನ್ನು ಇನ್ನು ಮುಂದೆ ನಿರ್ವಹಣಾ ಮಂಡಳಿಯೇ ನಿರ್ವಹಿಸುತ್ತದೆ.

ಕರ್ನಾಟಕ ಮತ್ತು ತಮಿಳು ನಾಡಿನ ಮುಂಗಾರು-ಹಿಂಗಾರು ಮಳೆಯ ಪ್ರಮಾಣ, ವಾಯವ್ಯ ಮತ್ತು ನೈರುತ್ಯ ದಿಕ್ಕುಗಳಿಂದ



ಮುಗಿಲನ್ನು ಹೊತ್ತು ಮಳೆ ಸುರಿಸುವ ನೀರಿನ ಪ್ರಮಾಣ – ಇತ್ಯಾದಿ ವಿಷಯಗಳು ಇನ್ನು ಮುಂದೆ ಮಂಡಳಿಗೇ ಸೇರಿದ್ದು. ಯಾವ ರಾಜ್ಯವೂ ಸುಳ್ಳು ಹೇಳುವ ಹಾಗಿಲ್ಲ, ಇಷ್ಟು ಟಿ.ಎಂ.ಸಿ. ಎಂದು ಜಗಳಾಡುವ ಹಾಗಿಲ್ಲ. ಹತ್ತು ದಿನಗಳಿಗೊಮ್ಮೆ ಮಂಡಳಿಯೇ ಮಳೆಯ ನೀರಿನ ಪ್ರಮಾಣ ಇಷ್ಟು ಇದೆ ಎಂದು ದಾಖಲೆ ಒದಗಿಸುತ್ತದೆ.

ಪ್ರತಿವರ್ಷ ಆರಂಭದಲ್ಲಿ ನಿರ್ವಹಣಾ ಮಂಡಳಿಯಲ್ಲಿ ಇರುವ ತಮ್ಮ ಪ್ರತಿನಿಧಿಗಳ ಮೂಲಕ ಜೂನ್ ತಿಂಗಳವರೆಗೆ ಅಗತ್ಯವಿರುವ ನೀರಿನ ಬೇಡಿಕೆ ಪಟ್ಟಿಯನ್ನು ಆಯಾ ರಾಜ್ಯ ಸರಕಾರಗಳು ಒದಗಿಸಬೇಕು. ಯಾವ ಜಲಾಶಯದಿಂದ ಎಷ್ಟು ನೀರು ಬೇಕಿದೆ ಎಂದು ತಿಳಿಸಬೇಕು. ಎಷ್ಟು ಬೆಳೆಗೆ ಎಷ್ಟು ನೀರು ಬೇಕಾಗುತ್ತದೆ ಎನ್ನುವುದನ್ನು ಮಂಡಳಿಯೇ ನಿರ್ಧರಿಸುತ್ತದೆ. ರಾಜ್ಯಗಳು ಅಲ್ಲ. ಈ ತೀರ್ಪಿನ ಜಾರಿಗೆ ಅಗತ್ಯವಾಗಿ ಬೇಕಾದ ಹೈಡ್ರಾಲಿಕ್ ಗೇಟುಗಳಿಗೂ, ನೀರು ಮಾಪನ ಕೇಂದ್ರಗಳಿಗೂ ಆಗಾಗ ಭೇಟಿಯಿತ್ತು ಪರಿಶೀಲಿಸುವ ಕ್ರಮವೂ ಅಧಿಕಾರವೂ ಮಂಡಳಿಗೇ ಇರುತ್ತದೆ. ಒಟ್ಟಿನ ಮೇಲೆ ಪರಸ್ಪರ ರಾಜ್ಯಗಳು ಆಪಾದನೆ ಮಾಡುವ ಹಾಗಿಲ್ಲ. ಮಳೆ ಇದ್ದಾಗ, ಇಲ್ಲವಾದಾಗ, ಎರಡೂ ರಾಜ್ಯಗಳು ಹೇಗೆ ನಡೆದುಕೊಳ್ಳಬೇಕು ಎನ್ನುವುದು ಮಂಡಳಿಯದೇ ಅಂತಿಮ ತೀರ್ಪು.

ಕರ್ನಾಟಕದಲ್ಲಿರುವ ಕೆ.ಆರ್.ಎಸ್., ಕಬಿನಿ, ಹಾರಂಗಿ, ಹೇಮಾವತಿ ತಮಿಳುನಾಡಿನಲ್ಲಿರುವ ಭವಾನಿ, ಅಮರಾವತಿ, ಮೆಟ್ಟೂರು, ಕೇರಳದಲ್ಲಿರುವ ಬನೆಸುರ ಸಾಗರ ಇತ್ಯಾದಿ ಜಲಾಶಯಗಳೆಲ್ಲವೂ ಮಂಡಳಿಯ ವ್ಯಾಪ್ತಿಗೇ ಸೇರುತ್ತವೆ.

ಮಂಡಳಿಗೆ ಕೇಂದ್ರದಿಂದಲೇ ಅಧ್ಯಕ್ಷ, ಸದಸ್ಯರ ನೇಮಕ ಆಗಲಿದೆ. ಆದರೆ ಇದಕ್ಕಾಗಿ ತಗಲುವ ವೆಚ್ಚವನ್ನು ಮಾತ್ರ ರಾಜ್ಯ ಸರಕಾರಗಳೇ ವಹಿಸಿಕೊಳ್ಳಬೇಕು. ತಮಿಳುನಾಡು ಮತ್ತು ಕರ್ನಾಟಕ ಶೇಕಡ ೪೦, ಕೇರಳ ಶೇ. ೧೫, ಪುದುಚೇರಿ ಶೇಕಡ ೫... ಹೀಗೆ. ಮಂಡಳಿಯ ಅಧ್ಯಕ್ಷರ ಹಾಗೂ ಸದಸ್ಯರ ಸಂಬಳ ಇದರಲ್ಲಿ ಸೇರುತ್ತವೆ. ಆಡಳಿತ ನಿರ್ವಹಣೆಗೆ ಅಗತ್ಯವಾಗಿ ಬೇಕಾದ ಅಧಿಕಾರಿಗಳನ್ನೂ ಸಿಬ್ಬಂದಿಯನ್ನೂ ಮಂಡಳಿಯೇ ನೇಮಿಸಿಕೊಳ್ಳುತ್ತದೆ.

ಅಷ್ಟೇ ಅಲ್ಲ, ಅಂತಿಮ ತೀರ್ಪಿನಲ್ಲಿ ಯಾವುದೇ ತಿದ್ದುಪಡಿ ಮಾಡುವ ಅಧಿಕಾರ ನ್ಯಾಯಮಂಡಳಿಗೆ ಮತ್ತು ಸುಪ್ರೀಂ ಕೋರ್ಟಿಗೆ ಮಾತ್ರ ಇರುತ್ತದೆ. ರಾಜ್ಯಗಳಿಗೆ ಅವಕಾಶವಿಲ್ಲ.

ಕಾವೇರಿ ನಿರ್ವಹಣಾ ಮಂಡಳಿಗೆ ಪೂರ್ಣಾವಧಿ ಅಧ್ಯಕ್ಷ, ಇಬ್ಬರು ಪೂರ್ಣಾವಧಿ ಸದಸ್ಯರು ಇರುತ್ತಾರೆ. ಇವರನ್ನು ಕೇಂದ್ರ ಸರಕಾರವೇ ನೇಮಕ ಮಾಡಲಿದೆ. ಅಂಥವರು ನೀರಿನ ವಿಚಾರದಲ್ಲಿ ತಜ್ಞರಾಗಿರಬೇಕು, ಇಪ್ಪತ್ತು ವರ್ಷ ಅನುಭವ ಇರಬೇಕು. ಸದಸ್ಯರಿಗೂ ಬೃಹತ್ ಜಲಾಶಯಗಳ ನಿರ್ವಹಣೆಯ ಬಗ್ಗೆ ಹದಿನೈದು ವರ್ಷಗಳ ಸೇವಾ ಅನುಭವ ಇರಬೇಕು.

ಅಧ್ಯಕ್ಷರ ಅವಧಿ ಮೂರು ವರ್ಷಗಳು. ಅವರ ದಕ್ಷತೆಯನ್ನು ಪರಿಗಣಿಸಿ ಸೇವಾ ಅವಧಿಯನ್ನು ಎರಡು ವರ್ಷಗಳ ಕಾಲ ಹೆಚ್ಚಿಸಲು ಅವಕಾಶವಿದೆ. ಜಲಸಂಪನ್ಮೂಲ ಸಚಿವಾಲಯ ಹಾಗೂ ಕೃಷಿ ಸಚಿವಾಲಯದಿಂದ ಇಬ್ಬರು ಸದಸ್ಯರನ್ನು ನೇಮಕ ಮಾಡಿಕೊಳ್ಳಬಹುದು. ಆದರೆ ಈ ಸದಸ್ಯರು ಮುಖ್ಯ ಇಂಜಿನಿಯರ್ ಅಥವಾ ಕಮಿಷನರ್ ದರ್ಜೆಯ ಅಧಿಕಾರಿಗಳೇ ಆಗಿರಬೇಕಾಗುತ್ತದೆ. ಒಟ್ಟಿನ ಮೇಲೆ ನೀರಿನ ವಿಚಾರದಲ್ಲಿ ಪರಿಣತಿ ಹೊಂದಿರುವ ಜಲತಂತ್ರಜ್ಞರೇ ಇರಬೇಕು, ಅಷ್ಟೆ. ಇವರಲ್ಲದೆ ಕರ್ನಾಟಕ, ತಮಿಳುನಾಡು, ಪುದುಚೇರಿ ಮತ್ತು ಕೇರಳ ರಾಜ್ಯಗಳ ಒಬ್ಬೊಬ್ಬರು ಅರೆಕಾಲಿಕ ಸದಸ್ಯರನ್ನೂ ನೇಮಕ ಮಾಡಲಾಗುತ್ತದೆ.

ಮಂಡಳಿಯ ಸದಸ್ಯರೆಲ್ಲರಿಗೂ ಸಮಾನ ಅಧಿಕಾರ. ಬಹುಮತದ ಆಧಾರದಲ್ಲಿ ಪ್ರಮುಖ ತೀರ್ಮಾನಗಳನ್ನು ತೆಗೆದುಕೊಳ್ಳಬಹುದು. ಸಭೆಯ ಕೋರಂಗೆ ಆರು ಸದಸ್ಯರ ಹಾಜರಿ ಅಗತ್ಯ. ಕೋರಂ ಇಲ್ಲದೆ ಹೋದರೆ ಸಭೆಯನ್ನು ಮುಂದೂಡಬೇಕು. ಇದು ಮೂರು ದಿನಗಳು ಮಾತ್ರ. ಆನಂತರ ಮತ್ತೆ ಸಭೆ ಸೇರಬೇಕು. ಈ ಸಭೆಗೆ ಕೋರಂ ಅಗತ್ಯ ಇಲ್ಲ.

ಕಾವೇರಿ ನ್ಯಾಯಮಂಡಳಿಯ ಅಂತಿಮ ತೀರ್ಪಿನಿಂದ ಕರ್ನಾಟಕಕ್ಕೆ ಅನ್ಯಾಯವಾಗಿದೆ ಎಂದು ಕೆಲವು ತಜ್ಞರ ಅಭಿಮತ. ಸರಕಾರದ ಉದ್ದೇಶವೂ ಸಹ. ಅದು ಹೇಗೆ ?

ಕಾವೇರಿ ಅಂತಿಮ ತೀರ್ಪಿನಿಂದ ಕರ್ನಾಟಕಕ್ಕೆ ಅನುಕೂಲಕ್ಕಿಂತ ಅನಾನುಕೂಲವೇ ಹೆಚ್ಚು. ೧೯೨೪ರ ಒಪ್ಪಂದ ರದ್ದಾದರೂ ಅದರ ಬಲದಿಂದ ತಮಿಳುನಾಡು ಈಗಾಗಲೇ ಅಭಿವೃದ್ಧಿಪಡಿಸಿಕೊಂಡಿರುವ ೨೪.೭೧ ಲಕ್ಷ ಎಕರೆ ಅಚ್ಚುಕಟ್ಟು ಪ್ರದೇಶಕ್ಕೆ ಮಾನ್ಯತೆ ನೀಡಿರುವುದು. ಇದಕ್ಕಾಗಿ ೪೧೯ ಟಿ.ಎಂ.ಸಿ. ಒಟ್ಟು ನೀರಿನ ಬಳಕೆ. ಇದು ಕರ್ನಾಟಕಕ್ಕೆ ಆಗಿರುವ ಭಾರೀ ಅನ್ಯಾಯ.

೧. ನಮ್ಮಲ್ಲಿ ೨೪ ಲಕ್ಷ ಎಕರೆ ನೀರಾವರಿಯನ್ನು ಅಭಿವೃದ್ಧಿಪಡಿಸಲು ಸಾಧ್ಯ ಎಂದು ಎಷ್ಟೇ ಕೇಳಿಕೊಂಡರೂ, ಈಗ ಇರುವ ೧೧.೨೪ ಲಕ್ಷ ಎಕರೆಗೆ ಬದಲು ೧೮.೮೫ ಲಕ್ಷ ಎಕರೆಗೆ ಸೀಮಿತ ಪಡಿಸಲಾಗಿದೆ.

೨. ತಮಿಳುನಾಡಿನ ಅಂತರ್ಜಲವನ್ನೇ ಮಂಡಳಿ ಲೆಕ್ಕಕ್ಕೆ ತೆಗೆದುಕೊಂಡಿಲ್ಲ.

೩. ಪರಿಸರ ರಕ್ಷಣೆ ಮತ್ತು ಸಮುದ್ರಕ್ಕೆ ಹರಿದುಹೋಗುವ ೧೪ ಟಿ.ಎಂ.ಸಿ. ನೀರನ್ನು ಲೆಕ್ಕಕ್ಕೆ ತೆಗೆದುಕೊಂಡು ತಮಿಳುನಾಡಿಗೇ ಹೆಚ್ಚಿನ ಸೌಲಭ್ಯ ಒದಗಿಸಲಾಗಿದೆ.




೪. ಹಾಗೆಯೇ ಬೆಂಗಳೂರು ಮಹಾನಗರ ಸೇರಿದಂತೆ ಇತರ ಕೆಲವು ಪ್ರದೇಶಗಳ ಕುಡಿಯುವ ನೀರಿನ ಪ್ರಸ್ತಾಪವೇ ಈ ಐ-ತೀರ್ಪಿನಲ್ಲಿ ಇಲ್ಲ.

ಭಾಕ್ರಾ-ಬಿಯಾಸ್ ನದಿಗಳ ನೀರು ಹಂಚಿಕೆಗೆ ಸ್ಥಾಪಿಸಿರುವ ನಿಯಂತ್ರಣಾ ಮಂಡಳಿಯ ರೀತಿಯಲ್ಲಿಯೇ ಇದೂ ಸಹ ಇರುತ್ತದೆ ಎಂದು ಕೇಂದ್ರ ಸರಕಾರ ಹೇಳಿದೆ.

ಒಂದು ಟಿ.ಎಂ.ಸಿ. ಎಂದರೆ ಒಂದು ಸಾವಿರ ದಶಲಕ್ಷ ಘನ ಅಡಿ ಅಥವಾ ಒಂದು ಬಿಲಿಯನ್ ಘನ ಅಡಿ. ೧೦೦೦ ಅಡಿ ಉದ್ದ x ೧೦೦೦ ಅಡಿ ಅಗಲ, x ೧೦೦೦ ಅಡಿ ಆಳ (ಒಂದು ಲಕ್ಷ ಸಹಸ್ರ ದಶಲಕ್ಷ ಘನ ಅಡಿಗಳು) ನೀರು ಎಂದರ್ಥ.

ಒಂದು ಸಮಾಧಾನದ ಅಂಶ ಎಂದರೆ ಐ-ತೀರ್ಪನ್ನು ಪ್ರಶ್ನಿಸುವ ರಾಜ್ಯಗಳ ಹಕ್ಕಿಗೆ, ಹಾಗೆಯೇ ಈಗ ವಿಚಾರಣೆಗೆ ಇರುವ ತಕರಾರು ಅರ್ಜಿಗಳ ವಿಚಾರಣೆಗಳಿಗೆ ಈ ಅಧಿಸೂಚನೆ ಅಡ್ಡಿಯಾಗುವುದಿಲ್ಲ ಎನ್ನುವುದು. ಕಾನೂನಿನ ಹೋರಾಟಕ್ಕೆ ಅಡೆತಡೆಗಳೂ ಇರುವುದಿಲ್ಲ ಎನ್ನುವ ಸುಪ್ರೀಂ ಕೋರ್ಟಿನ ಹೇಳಿಕೆ.

ಸರಕಾರದಂತೆಯೇ ಜಲವಿವಾದ ತಜ್ಞ ಮೋಹನ ಕಾತರಕಿಯವರು, ''ತನ್ನ ಅಂತಿಮ ವರದಿಯನ್ನು ಜಾರಿಗೆ ತರಲು 'ಕಾವೇರಿ ನಿರ್ವಹಣಾ ಮಂಡಳಿ'ಯನ್ನು ರಚಿಸಲು, ನ್ಯಾಯಾಧೀಕರಣ, ಕೇಂದ್ರ ಸರಕಾರಕ್ಕೆ ಶಿಫಾರಸು ಮಾಡಿದೆ, ಈ ಶಿಫಾರಸು ನಿರ್ದೇಶನ ಅಲ್ಲ. ಕೇಂದ್ರ ಸರಕಾರದ ಈ ಶಿಫಾರಸ್ಸನ್ನು ಒಪ್ಪುವುದು ಕಡ್ಡಾಯ ಅಲ್ಲ'' ಎಂದು ಹೇಳಿದ್ದಾರೆ.

ಈ ಅಧಿಸೂಚನೆಯನ್ನು ವಾಪಸ್ಸು ಪಡೆಯಬೇಕೆಂದು ಮಂಡಳಿ ಜಿಲ್ಲಾ ರೈತ ಹಿತ ಸಂರಕ್ಷಣಾ ಸಮಿತಿಯ ಅಧ್ಯಕ್ಷರೂ ಮಾಜಿ ಸಂಸದರೂ ಆದ ಜಿ. ಮಾದೇಗೌಡರು ಹೇಳಿಕೆ ನೀಡಿದ್ದಾರೆ.

ಮಂಡ್ಯ ಮತ್ತು ತಂಜಾವೂರಿನ ರೈತರ ಮಾತಿಗೆ ಪ್ರಾಮುಖ್ಯತೆ ನೀಡಲೇಬೇಕಾಗಿದೆ. ಯಾಕೆಂದರೆ, ಅವರೇ ತಾನೆ ಭತ್ತದ ಬೆಳೆ ಬೆಳೆದು ನಮಗೆ ಅನ್ನ ನೀಡುವವರು ?

ನಮಗೆ ಮತ್ತೊಂದು ಅನುಕೂಲದ ವಿಚಾರ ಎಂದರೆ ಬಿಳಿಗುಂಡ್ಲುವಿನ ನೀರಿನ ಮಾಪನವೇ ಅಂತಿಮ ಎಂದು ಐ-ತೀರ್ಪು ಹೇಳಿರುವುದು. ಕರ್ನಾಟಕ ಮತ್ತು ತಮಿಳುನಾಡಿನ ಗಡಿಭಾಗದಲ್ಲಿ ಸ್ಥಾಪಿಸಿರುವ ಕೇಂದ್ರ ಆಯೋಗದ ಜಲಮಾಪನಕ್ಕಿಂತ ಮೆಟ್ಟೂರು ಜಲಮಾಪನ ಹಳೆಯದು. ಅಲ್ಲದೆ, ಮೆಟ್ಟೂರಿನ ಜಲಮಾಪನದಲ್ಲಿ ಹಲವು ದೋಷಗಳು ಇವೆ ಎಂದು ನೀರಾವರಿ ಇಂಜಿನಿಯರುಗಳೇ ಹೇಳುತ್ತಾರೆ. ಹಾಗಿದ್ದೂ ತಮಿಳುನಾಡು ಸರಕಾರ ಮೆಟ್ಟೂರೇ ನಮಗೆ ಲೆಕ್ಕ ಎಂದು ಹೇಳಿಕೊಂಡಿತ್ತು. ಆದರೆ ಐ-ತೀರ್ಪು ಬಿಳಿಗುಂಡ್ಲುವನ್ನೇ ಎತ್ತಿ ಹಿಡಿದಿದೆ. ಕರ್ನಾಟಕದ ಪಾಲಿಗೆ ಇದೊಂದು ಸಮಾಧಾನಕರವಾದ ಅಂಶ.

ಎಷ್ಟೇ ಲೋಪದೋಷಗಳಿದ್ದರೂ ಅಂಥವನ್ನು ಸರಿಪಡಿಸಿ ಮುಂದುವರಿಯುವುದೇ ಸರಿಯಾದ ಮಾರ್ಗ ಎನ್ನುವುದೇ ಎಲ್ಲರ ಆಶಯ. ಭಾರತದಲ್ಲಿ ಕಾವೇರಿಯ ಪ್ರಶ್ನೆಯೇ ಅತ್ಯಂತ ಹಳೆಯ ಪ್ರಶ್ನೆ. ಎಷ್ಟು ದಿನಗಳು ಬಂದ್, ಮುಷ್ಕರ – ಇತ್ಯಾದಿಗಳು ನಡೆದುಕೊಂಡಿರಲು ಸಾಧ್ಯ ?

**ಶೇಷನಾರಾಯಣ**
ಲಕ್ಕಪ್ಪ ಬಡಾವಣೆ, ನಂ. ೧೩೦, ೪ನೆಯ ಕ್ರಾಸ್, ಸಿಂಗಾಪುರ
ವಿದ್ಯಾರಣ್ಯಪುರ ಅಂಚೆ, ಬೆಂಗಳೂರು - ೫೬೦ ೦೯೭

# ಕಮ್ಯೂನಿಸ್ಟ್ ಆಂದೋಲನದತ್ತ

**ಅಡ್ಡೂರು ಶಿವಶಂಕರ ರಾವ್**



೧೯೪೦ರಲ್ಲಿ ಮಂಗಳೂರಿನ ಎಸ್‌ಕೆಡಿಬಿ ಹಾಸ್ಟೆಲಿನಲ್ಲಿ ನನಗೆ ಒಳ್ಳೆಯ ಸ್ನೇಹಿತ ವರ್ಗವಿತ್ತು. ಖುಷಿಯ ಸ್ವತಂತ್ರ ಬದುಕು. ಹಾಸ್ಟೆಲ್‌ನಲ್ಲಿ ಹರಿದಾಸ ಆಚಾರ್, ಗಣೇಶ, ಶಂಕರ್... ಇವರೆಲ್ಲಾ ರಾಜಕೀಯದ ಕುರಿತು ಮಾತನಾಡುತ್ತಿದ್ದರು. ಚರ್ಚಿಸುತ್ತಿದ್ದರು. ಅವರ ವಿಚಾರಗಳು ನನ್ನನ್ನು ಸೆಳೆದವು. ಎ. ರಾಘವನ್ ಅಲೋಶಿಯಸ್ ಕಾಲೇಜ್ ಹಾಸ್ಟೆಲ್‌ನಲ್ಲಿದ್ದರು. ಮಂಗಳೂರು ವಿದ್ಯಾರ್ಥಿ ಯೂನಿಯನ್ ಆಗಷ್ಟೇ ಶುರುವಾಗಿತ್ತು (೧೯೪೦). ಹಾಸ್ಟೆಲ್‌ನಲ್ಲಿ ಈ ಕುರಿತು ಚರ್ಚೆಯಾಗುತ್ತಿತ್ತು. ನಾನು ಮತ್ತು ಕೆಲವು ಸ್ನೇಹಿತರು ಯೂನಿಯನ್‌ನ ಚಟುವಟಿಕೆಗಳಲ್ಲಿ ಸಕ್ರಿಯರಾದೆವು.

೧೯೪೦ರಲ್ಲಿ ವಿದ್ಯಾರ್ಥಿ ಸಮ್ಮೇಳನ ಜರುಗಿತು. ಮೋಹನ ಕುಮಾರಮಂಗಲಂ ಎಂಬುವರು ಸಮ್ಮೇಳನಕ್ಕೆ ಬಂದಿದ್ದರು. ಅವರ ಮಾತಿನ ಮೋಡಿ, ವೈಚಾರಿಕತೆಗಳು ನಮ್ಮ ಮೇಲೆ ಗಾಢ ಪ್ರಭಾವ ಬೀರಿದವು. ಮತ್ತೊಮ್ಮೆ ೧೯೪೧ರ ಸಮ್ಮೇಳನಕ್ಕೆ ಡಾ|| ಕೆ. ಬಿ. ಕೃಷ್ಣ ಬಂದಿದ್ದರು. ಇವರೆಲ್ಲರ ವರ್ಚಸ್ಸಿಗೆ ನಾನು ಮಾರುಹೋದೆ.

ಬ್ರಿಟಿಷ್ ಸರಕಾರದ ಕೆಂಗಣ್ಣು ಕಮ್ಯೂನಿಸ್ಟ್ ಆಂದೋಲನದ ಮೇಲಿತ್ತು. ೧೯೪೧ರಲ್ಲಿ ಕಮ್ಯೂನಿಸ್ಟ್ ಪಕ್ಷದ ಮೇಲೆ ನಿಷೇಧ ಹೇರಿದರೂ ಕಮ್ಯೂನಿಸ್ಟ್ ವಿಚಾರಗಳ ಮತ್ತು ಆಗುಹೋಗುಗಳ ಕುರಿತು ವಾರ್ತಾ ಪತ್ರಿಕೆ ಪ್ರಕಟವಾಗುತ್ತಿತ್ತು. ಅದು ಅಷ್ಟು ಸುಲಭದಲ್ಲಿ ಸಿಗುತ್ತಿರಲಿಲ್ಲ. ಗುಟ್ಟಾಗಿ ಓದಬೇಕಿತ್ತು. ಅದನ್ನು ಯಾರಲ್ಲಾದರೂ ಕಂಡರೆ ಸಾಕು. ಅವರಿಗೆ ಆರು ತಿಂಗಳು ಸೆರೆಮನೆ. ಹಾಸ್ಟೆಲ್‌ನ ಅಡುಗೆ ಭಟ್ಟರ ಮುಖಾಂತರ ಪತ್ರಿಕೆ ಸಿಗುತ್ತಿತ್ತು. ಬಹಳ ಆಸಕ್ತಿಯಿಂದ ಓದುತ್ತಿದ್ದೆವು. ಅದರಲ್ಲಿ ಪ್ರಕಟವಾಗುತ್ತಿದ್ದ ಕಮ್ಯೂನಿಸ್ಟ್ ಸಿದ್ಧಾಂತಗಳು ನಮ್ಮನ್ನು ಕೆರಳಿಸುತ್ತಿದ್ದುವು. 'ಕಮ್ಯೂನಿಸ್ಟ್ ಮ್ಯಾನಿಫೆಸ್ಟೋ' ಪುಸ್ತಕವೊಂದು ಅಚಾನಕವಾಗಿ ಓದಲು ಸಿಕ್ಕಿತ್ತು. ಲೈಟ್ ಆನ್ ಮೋಸ್ಕೋ. ಮಸ್ಟ್ ದಿ ವಾರ್ ಸ್ಪ್ರೆಡ್, ಪ್ರಾಬ್ಲೆಮ್ ಆಫ್ ಇಂಡಿಯಾ, ರಷ್ಯಾ ವಿದೌಟ್ ಇಲ್ಯೂಷನ್ಸ್ ಎಂಬ ಪುಸ್ತಕಗಳು, ಭೂಗತ ಪತ್ರಿಕೆ 'ಕಮ್ಯೂನಿಸ್ಟ್' – ಇವುಗಳೆಲ್ಲದರ ವಿಚಾರಗಳು ಮತ್ತು ಹೂರಣಗಳು ನನ್ನ ಕಮ್ಯೂನಿಸ್ಟ್ ಜೀವನಕ್ಕೆ ಮೂಲವಾಯಿತು. ಆ ತತ್ವಗಳು ನನಗೆ ವೇದ ವಾಕ್ಯವಾಯಿತು. ಅಂದಿನಿಂದ ಕಮ್ಯೂನಿಸ್ಟ್ ಹೊರತಾಗಿ ಬೇರಾವುದೇ ವಿಚಾರಗಳು ನನಗೆ ಅರ್ಥವಾಗುತ್ತಿರಲಿಲ್ಲ.

ವಿದ್ಯಾರ್ಥಿ ಯೂನಿಯನ್‌ನ ಸಕ್ರಿಯ ಸದಸ್ಯನಾದೆ. ಹಾಸ್ಟೆಲ್‌ನಲ್ಲಿ ಕಮ್ಯೂನಿಸ್ಟ್ ವಿಚಾರಗಳನ್ನು ಒಪ್ಪಿದ ಸಮಾನಾಸಕ್ತರ ತಂಡ ಸಿದ್ಧವಾಯಿತು. ಬಿ. ವಿ. ಕಕ್ಕಿಲ್ಲಾಯರು ಮಂಗಳೂರು ವಿದ್ಯಾರ್ಥಿ ಯೂನಿಯನ್‌ನ ಕಾರ್ಯದರ್ಶಿಯಾದರು. ಹರಿದಾಸರು ಟ್ರೇಡ್ ಯೂನಿಯನ್ ಆಂದೋಳನದಲ್ಲಿ ಸಕ್ರಿಯವಾಗಿದ್ದು ಕಮ್ಯೂನಿಸ್ಟ್ ತಂಡದಲ್ಲಿ ಕೆಲಸ ಮಾಡುತ್ತಿದ್ದರು.

ಕಮ್ಯೂನಿಸ್ಟ್ ಪಕ್ಷದ ಕೆಲಸವನ್ನು ಹಾಸ್ಟೆಲ್‌ನಲ್ಲಿ ಮಾಡುತ್ತಾನೆ ಎಂಬ ಕಾರಣಕ್ಕಾಗಿ ಸಹಪಾಠಿ ಗಣೇಶನನ್ನು ಹಾಸ್ಟೆಲ್‌ನಿಂದ ಹೊರಹಾಕಲು ಆಡಳಿತ ವರ್ಗ ನಿರ್ಧರಿಸಿತ್ತು. ನಾನು ಪ್ರತಿಭಟಿಸಿದೆ. ನಾನು ಗಣೇಶನ ಪರ ಮಾತನಾಡಿದೆ ಎಂಬ ಕಾರಣಕ್ಕಾಗಿ ಅಡಿಗರಿಗೆ ಮತ್ತು ವೆಂಕಟರಮಣರಿಗೆ ನನ್ನ ಮೇಲೆ ಅಸಮಾಧಾನವಾಯಿತು. ನನ್ನ ಭಾವನಲ್ಲಿ ದೂರಿದರು. ಅಕ್ಕ ನನ್ನ ಪರವಾಗಿ ಮಾತನಾಡಿದ್ದರಿಂದ ಅಕ್ಕನಿಗೂ ಭಾವನಿಗೂ ವಿರಸವಾಯಿತು. ಭಾವನ ಡ್ರಾಯಿಂಗ್ ಮಾಸ್ತರರ ಮಧ್ಯಸ್ಥಿಕೆಯಿಂದ ಪ್ರಕರಣ ತಿಳಿಯಾಯಿತು.

ಕಮ್ಯೂನಿಸ್ಟ್ ನಾಯಕರಾದ ಕೆ. ಬಿ. ಕೃಷ್ಣ, ಪರಮೇಶ್ವರನ್ ಮುಂತಾದವರು ಆಗಾಗ್ಗೆ ಮಂಗಳೂರಿಗೆ ಬಂದು ಪಕ್ಷದ ಕುರಿತಾಗಿ ವಿಚಾರ ವಿನಿಮಯ ಮಾಡುತ್ತಿದ್ದರು. ಇವರ ಸಂಪರ್ಕ ಹೆಚ್ಚಿದಂತೆಲ್ಲಾ ನನ್ನ ಕಮ್ಯೂನಿಸ್ಟ್ ಮನಸ್ಸು ದೃಢವಾಗತೊಡಗಿತು.

ಕಮ್ಯೂನಿಸ್ಟ್ ವಿಚಾರಗಳ ರಾಜಕೀಯ ಚರಿತ್ರೆ, ತತ್ವಗಳನ್ನು ಓದಿ, ಮಾಹಿತಿ ಸಂಗ್ರಹಿಸಿ, ಅದನ್ನು ಆಸಕ್ತರಿಗೆ ತಿಳಿಸುವುದು ನನ್ನ ಹವ್ಯಾಸ. 'ಸಮಾಜದಲ್ಲಿ ಸ್ವಾತಂತ್ರ್ಯ ಸಿಗಬೇಕಾದರೂ, ಜನರು ಸುಖವಾಗಿ ಬಾಳಬೇಕಾದರೂ ಕಮ್ಯೂನಿಸ್ಟ್ ಸರಕಾರವು ಅಧಿಕಾರಕ್ಕೆ ಬಂದರೆ ಮಾತ್ರ ಸಾಧ್ಯ' – ಎಂಬ ನಂಬುಗೆ ತಳವೂರಿತ್ತು.

ಹಾಸ್ಟೆಲ್‌ಗೆ ಸೀಮಿತವಾಗಿದ್ದ ನಮ್ಮ ಕಾರ್ಯ ವ್ಯಾಪ್ತಿ ಕ್ರಮೇಣ ವಿಸ್ತರಿಸಿತು. ಬೀಡಿ ಕೆಲಸಗಾರರ, ನೇಯ್ಗೆ ಕೆಲಸಗಾರರ ಸಂಪರ್ಕ. ಅವರಿಗೆಲ್ಲಾ ಮಾಹಿತಿ ನೀಡಲು ನಾನು ತರಗತಿಗಳನ್ನು ನಡೆಸುತ್ತಿದ್ದೆ. ಇದರಿಂದಾಗಿ ಹಲವರು ನನ್ನ ಶಿಷ್ಯರಾದರು!

ಕ್ವಿಟ್ ಇಂಡಿಯಾ ಚಳುವಳಿ ಆರಂಭ. ಕಮ್ಯೂನಿಸ್ಟ್ ಪಕ್ಷದಲ್ಲಿದ್ದ ಕೆಲವರು ಕಾಂಗ್ರೆಸ್ ಸೇರಿದರು. ಹಲವರು ಪೊಲೀಸರ ಸೆರೆಯಾದರು.

ಮಂಗಳೂರಿನ ನೆಹರೂ ಮೈದಾನದ ಒಂದಂಚಿನಲ್ಲಿ ಕಮ್ಯೂನಿಸ್ಟ್ ಪಕ್ಷದ ಕಚೇರಿಯಿತ್ತು. ನಾನು ಪತ್ರಿಕೆ, ಪುಸ್ತಕಗಳನ್ನು ಆಸಕ್ತರಿಗೆ ಕೊಡುತ್ತಿದ್ದೆ. ಚಿಕ್ಕ ವಾಚನಾಲಯ ರೂಪುಗೊಂಡಿತ್ತು. ಜನರ ಆಸಕ್ತಿ ಹೆಚ್ಚಾಗುತ್ತಿದ್ದಂತೆ ಮಾಹಿತಿಯನ್ನು ಇನ್ನಷ್ಟು ಜನರಿಗೆ ತಿಳಿಸಬೇಕೆಂಬ ಹಪಹಪಿಕೆ ಹೆಚ್ಚಾಯಿತು.

೧೯೪೩ರಲ್ಲಿ ಜಿಲ್ಲಾ ಟ್ರೇಡ್ ಯೂನಿಯನ್ ಸಮ್ಮೇಳನವು ಮಂಗಳೂರಿನ ಬಂಟ್ಸ್ ಹಾಸ್ಟೆಲ್ ಮೈದಾನದಲ್ಲಿ ಜರುಗಿತ್ತು. ನಮ್ಮ ಸಂಘಟನೆಯ ಶಕ್ತಿಯೂ ಆಗ ಹೆಚ್ಚಾಗಿತ್ತು. ಹಂಚಿನ ಕೆಲಸಗಾರರ ಸಂಘಟನೆಯು ವಿವಿಧ ಬೇಡಿಕೆಗಳಿಗಾಗಿ ನಮ್ಮೊಡನೆ ಕೈಜೋಡಿಸಿತ್ತು. ಎಸ್. ಎ. ಡಾಂಗೆ ಅವರು ಅಧ್ಯಕ್ಷತೆ ವಹಿಸಿದ್ದ ಬೃಹತ್ ಸಮಾವೇಶವು ಹಂಚಿನ ಕಾರ್ಮಿಕರ ಸಂಘಟನೆಯ ಕಾರ್ಯಕ್ರಮಕ್ಕೆ ಚಾಲನೆ ನೀಡಿತು. ಆಗ ಮಂಗಳೂರಿನ



ಬೀದಿಬೀದಿಗಳಲ್ಲಿ 'ಮೂರು ತಿಂಗಳ ಬೋನಸ್ ಸಿಗಲೇಬೇಕು...' ಮುಂತಾದ ಘೋಷಣೆಗಳು ಪ್ರತಿಧ್ವನಿಸಿದವು. ಇಂತಹ ನ್ಯಾಯಯುತ ಬೇಡಿಕೆಗಳಿಗಾಗಿ ಹೋರಾಟ ನಡೆಸಿದ್ದು ಕಮ್ಯೂನಿಸ್ಟರು ರೂಪಿಸಿದ ಕಾರ್ಮಿಕ ಸಂಘಟನೆಗಳು ಎಂಬುದು ಗಮನಾರ್ಹ. ಆಗ ಅಕ್ಕಿಗೆ ಕ್ರಯ ಏರಿತು. ಕಾಳಸಂತೆಯಲ್ಲಿ ಹೆಚ್ಚು ಕ್ರಯಕ್ಕೆ ಅಕ್ಕಿ ಮಾರಾಟವಾಗುತ್ತಿತ್ತು. ಹಣ ಇದ್ದವರು ಬೇಕಾದಷ್ಟು ಅಕ್ಕಿಯನ್ನು ದಾಸ್ತಾನು ಮಾಡಿದರು. ಬಡವರು ವಂಚಿತರಾದರು. ಎಲ್ಲರಿಗೂ ತೊಂದರೆಯಾಯಿತು. ನ್ಯಾಯಬೆಲೆ (ರೇಷನ್)ಯಲ್ಲಿ ಅಕ್ಕಿ ವಿತರಿಸುವ ವ್ಯವಸ್ಥೆಗಾಗಿ ಹೋರಾಟ ಶುರುವಾಯಿತು. ಸಂಬಂಧಪಟ್ಟವರೊಡನೆ ಸಂಪರ್ಕ. ಕಲೆಕ್ಟರರ ಭೇಟಿ. ತಾತ್ವಿಕವಾಗಿ ಒಪ್ಪಿಕೊಂಡರು. ಪ್ರತಿಯೊಂದು ಮನೆಯಲ್ಲಿ ಎಷ್ಟೆಷ್ಟು ಮಂದಿ ಸದಸ್ಯರಿದ್ದಾರೆ ಎಂಬ ಲೆಕ್ಕ ತೆಗೆಯುವ ಕೆಲಸ ನಮಗೆ ವಹಿಸಲಾಯಿತು. ರಾತ್ರಿ ಹಗಲೆನ್ನದೆ ಓಡಾಡಿ, ಮಾಹಿತಿ ಸಂಗ್ರಹಿಸಿ, ಕಾರ್ಡು ಮೂಲಕ ಜನರಿಗೆ ಅಕ್ಕಿ ಸಿಗುವಂತೆ ಮಾಡಿದೆವು. ಕ್ಯೂನಲ್ಲಿ ನಿಂತು ಅಕ್ಕಿ ಪಡೆದು ಸಂತೃಪ್ತಿಯಿಂದ ಜನರು ಹೋಗುವ ದೃಶ್ಯ ಈಗಲೂ ನನಗೆ ಕಣ್ಣಿಗೆ ಕಟ್ಟುವಂತೆ ಗೋಚರಿಸುತ್ತದೆ. ಅಲ್ಲಿಯವರೆಗೆ 'ರೇಷನ್, ಕ್ಯೂ' ಎಂಬುದು ಇರಲೇ ಇಲ್ಲ!

ಅಲ್ಲಲ್ಲಿ ಮಾಹಿತಿ ವಿನಿಮಯ ತರಗತಿಗಳನ್ನು ನಡೆಸುತ್ತಿದ್ದೆ. ಇದರಿಂದಾಗಿ ಕವಲು ಮನಸ್ಸಿನಲ್ಲಿದ್ದ ಅನೇಕರು ನಮ್ಮ ತತ್ವ ಸಿದ್ಧಾಂತಗಳನ್ನು ಒಪ್ಪಿಕೊಂಡರು. ಇಲಿಯಾಗಿದ್ದ ಕೆಲಸಗಾರರು ಹುಲಿಯಾದರು! ಮುದುಡಿಕೊಂಡಿದ್ದವರು ಕೊಡವಿ ಮೇಲೆದ್ದರು! ಇದು ಕಾಂಗ್ರೆಸ್ಸಿನ ಕೆಲವರಿಗೆ ಇರಿಸುಮುರುಸಾಯಿತು. ಕೆಲವರನ್ನು ಒಲಿಸಿ ತನ್ನೆಡೆ ಸೆಳೆದುಕೊಳ್ಳುವ ಕಾಂಗ್ರೆಸ್ಸಿನ ತಂತ್ರ ವಿಫಲವಾಯಿತು.

ಪಕ್ಷದ ಮುಖ್ಯಸ್ಥರು ತಮ್ಮ ಕೈಯಿಂದ ನನಗೆ ಖರ್ಚಿಗಾಗಿ ಇಪ್ಪತ್ತೈದು ರೂಪಾಯಿಗಳನ್ನು ಕೊಡುತ್ತಿದ್ದರು. ಹೇಗೋ ಸರಿದೂಗಿಸುತ್ತಿದ್ದೆ. ಪತ್ರಿಕೆಗಳನ್ನು ಮಾರುವ ವೃತ್ತಿ ಕೈಗೊಂಡೆ. 'ಪೀಪಲ್ಸ್ ವಾರ್', 'ಕ್ರಾಸ್ ರೋಡ್' ಪತ್ರಿಕೆಗಳನ್ನು ಮಾರಾಟ ಮಾಡಲು ಮನೆಮನೆಗೆ ಹೋದೆ. ಪ್ರತೀ ಮನೆಯಲ್ಲಿ ಕನಿಷ್ಠ ಹತ್ತು ನಿಮಿಷವಾದರೂ ಇದ್ದು, ಪ್ರಚಲಿತ ವಿದ್ಯಮಾನಗಳನ್ನು ಚರ್ಚಿಸುತ್ತಿದ್ದೆ. ಹೆಚ್ಚೆಚ್ಚು ಮನೆಗಳ ಸಂಪರ್ಕವಾಯಿತು. ಅವರೆಲ್ಲರ ವಿಶ್ವಾಸ ಗಳಿಸಿಕೊಂಡೆ. ನಾನು 'ಪೋಲಿ ಅಲ್ಲ' ಎಂಬ ಪ್ರಮಾಣ ಪತ್ರ ಸಿಕ್ಕಿತ್ತು! ಪೇಪರ್ ಮಾರಾಟದಿಂದ ನನ್ನ ಬೌದ್ಧಿಕ ವಿಚಾರವೇನೋ ಪಕ್ವವಾಯಿತು. ಆದರೆ ಪತ್ರಿಕೆಯ ಹಣವನ್ನು ವಸೂಲಿ ಮಾಡಲು ಹರಸಾಹಸ ಮಾಡಬೇಕಾಯಿತು! ಕೆಲವರಂತೂ ಬಾಯುಪಚಾರದಲ್ಲೇ ಸುಧಾರಿಸಿದರು.

ಅಮ್ಮ, ನಾನು, ತಂಗಿ ಜೊತೆಯಾಗಿ ಮಂಗಳೂರಿನ ಸನ್ಯಾಸಿಗುಡ್ಡೆಯಲ್ಲಿ ಬಿಡಾರ ಮಾಡಿದೆವು. 'ನಿನ್ನ ಗಣಗಳನ್ನು (ಸ್ನೇಹಿತರನ್ನು) ಮಾತ್ರ ಕರೆದುಕೊಂಡು ಬರಬಾರದು' ಎಂದು ಅಮ್ಮ ಮೊದಲೇ ತಾಕೀತು ಮಾಡಿದ್ದರು. ಮುಂದೆ ನನ್ನ ಕೆಲವು ಸ್ನೇಹಿತರ ಒಡನಾಟದಿಂದ ಅಮ್ಮ ತಮ್ಮಲ್ಲೇ ರಾಜಿ ಮಾಡಿಕೊಂಡಂತೆ ಕಂಡಿತು. ಬಹಳ ವಿರೋಧ ತೋರಲಿಲ್ಲ ಅಥವಾ ಇವನನ್ನು ತಿದ್ದಲು ತನ್ನಿಂದ ಸಾಧ್ಯವಿಲ್ಲವೆಂದು ಗ್ರಹಿಸಿ ಸುಮ್ಮನಿದ್ದರೋ ಏನೋ?

ಸಣ್ಣಣ್ಣ ಸುಬ್ಬರಾವ್ ಆಗಾಗ್ಗೆ ಮನೆಗೆ ಬರುತ್ತಿದ್ದ. ಪಕ್ಷದ ಬಗ್ಗೆ ಬಿಸಿಬಿಸಿ ಚರ್ಚೆಯಾಗುತ್ತಿತ್ತು. ನಮ್ಮ ವಾಗ್ಯುದ್ಧ ನೋಡಿ ಕೆಲವರು ದಂಗಾದುದೂ ಇದೆ. ಅಣ್ಣ ಪ್ರತೀ ಸಲ ಬಂದಾಗಲೂ ಚರ್ಚೆ ಪರಾಕಾಷ್ಠೆಗೆ ಮುಟ್ಟುತ್ತಿತ್ತು. ಇದನ್ನು ಅಮ್ಮನೂ ಆಕ್ಷೇಪಿಸಿದ್ದರು. ನನ್ನ ಸಣ್ಣ ತಂಗಿಗೆ ಭದ್ರಾವತಿಯ ಡಾ॥ ಜಿ. ವಾಸುದೇವ ರಾವ್ ಅವರೊಂದಿಗೆ ವಿವಾಹವಾಯಿತು. ಅವರು ಆಗ ಮುಂಬಯಿಯಲ್ಲಿ ನೌಕಾದಳದಲ್ಲಿ ಇದ್ದರು. ಅನಂತರ ಸ್ವಲ್ಪ ದಿವಸ ನಾನು ಅವರೊಂದಿಗೆ ಮುಂಬೈಯಲ್ಲಿದ್ದೆ.

೧೯೪೫ರಲ್ಲಿ ಜರ್ಮನ್ - ರಷ್ಯಾ ಯುದ್ಧ ನಿಲುಗಡೆಯಾಯಿತು. ಭಾರತದಲ್ಲಿ ಬ್ರಿಟಿಷರ ವಿರುದ್ಧ ಹೋರಾಡುವ ಛಲ ಹೆಚ್ಚಾಗುತ್ತಿದ್ದಂತೆ, ಕಮ್ಯೂನಿಸ್ಟರನ್ನು ಬಗ್ಗುಬಡಿಯಲು ಸರಕಾರ ಮುಂದಾಗಿತ್ತು. ಸರಕಾರದ ಧಾಳಿಯೂ ಆರಂಭವಾಗಿತ್ತು. ಕೆಲವರು ಬಂಧನಕ್ಕೊಳಗಾದರು. ಸರಕಾರದ ವಿರುದ್ಧ ರಣಕಹಳೆ ಜೋರಾಯಿತು. ಒಂದು ಹಂತದಲ್ಲಿ ನಾನೂ ಪೊಲೀಸರ ಕೋಳಕ್ಕೆ ಕೈ ಕೊಡಬೇಕಾಯಿತು. ಆಗ ಕೆದಿಲಾಯರು ಮ್ಯಾಜಿಸ್ಟ್ರೇಟ್, ರಾಮಚಂದ್ರ ರಾವ್ ಎಪಿಪಿ (ಅಸಿಸ್ಟೆಂಟ್ ಪಬ್ಲಿಕ್ ಪ್ರಾಸಿಕ್ಯೂಟರ್) ಆಗಿದ್ದರು. ಮೂರು ಮಂದಿಯ ಜಾಮೀನಿನೊಂದಿಗೆ ನಾನು ಹೊರಬಂದೆ. ಉಳಿದವರೆಲ್ಲಾ ಆರು ತಿಂಗಳ ಸೆರೆಮನೆವಾಸ ಅನುಭವಿಸಿದರು.

೧೯೪೭ರಲ್ಲಿ ಸ್ವಾತಂತ್ರ್ಯ ಸಿಕ್ಕಿತು. ಆಗ ಕಮ್ಯೂನಿಸ್ಟರ ಮೇಲೆ ಪುನಃ ಸರಕಾರದ ಧಾಳಿ. ಸಿಂಪ್ಸನ್ ಸೋನ್ಸ್ ಮತ್ತು ನಾನು ಮಾತ್ರ ಉಳಿದಿದ್ದೆವು, ಮಿಕ್ಕವರೆಲ್ಲಾ ಬಂಧನಕ್ಕೆ ಒಳಗಾಗಿದ್ದರು. ಸೋನ್ಸರು ಭೂಗತರಾಗಿ ಪಕ್ಷದ ಕೆಲಸ ಮಾಡುತ್ತಿದ್ದರೆ, ನಾನು ಹೊರಗಿದ್ದುಕೊಂಡು ಕೆಲಸ ಮಾಡಿದೆ. ಮೈಸೂರಿನ ಜವಾಬ್ದಾರಿ ಸರಕಾರಕ್ಕಾಗಿ ಹೋರಾಟಕ್ಕೆ ಜಾಥಾ ಕರೆದುಕೊಂಡು ಹೋದೆ. ಕುಂದಾಪುರ, ಪುತ್ತೂರು, ಕಾರ್ಕಳಗಳಲ್ಲಿ ಪಕ್ಷದ ಕೆಲಸಕ್ಕೆ ಹೋದವ ಕೆಲವರೊಂದಿಗೆ ಆಗುಂಬೆಯಲ್ಲಿ ಸೇರಿದೆ. ಅನಂತರ ಬೇರೆ ಬೇರೆ ದಿಕ್ಕುಗಳಿಗೆ ಹೊರಟುಹೋದೆವು. ಯಾಕೆಂದರೆ ಒಂದೇ ಕಡೆಯಲ್ಲಿದ್ದರೆ ಸರಕಾರದ ಗಮನಕ್ಕೆ ಬಂದೀತು, ಮಾತ್ರವಲ್ಲದೆ ಬಂಧನವೂ ಆದೀತು. ಇದರಿಂದಾಗಿ ಪಕ್ಷದ ಕೆಲಸಕ್ಕೆ ತೊಡಕಾದೀತೆಂಬ ಭಯ.

ಆ ಸಮಯದಲ್ಲಿ ದಾವಣಗೆರೆಯಲ್ಲಿ ಬಿ. ಮುರುಗಯ್ಯ ಅವರು ಕಾರ್ಮಿಕರನ್ನು ಸಂಘಟಿಸಿ ಆಂದೋಳನಕ್ಕೆ ಚಾಲನೆ ನೀಡಿದ್ದರು. ಕಾರ್ಮಿಕರಲ್ಲಿ ರಾಜಕೀಯ ಪ್ರಜ್ಞೆ ಮೂಡಿಸಿ ಆಂದೋಳನವನ್ನು ಬಲಪಡಿಸಲಿಕ್ಕಾಗಿ ಅವರೊಂದಿಗೆ ಕೆಲಸ ಮಾಡಬೇಕೆಂದು ಕಮ್ಯೂನಿಸ್ಟ್ ಪಕ್ಷ (ಅವಿಭಜಿತ) ನನ್ನನ್ನು ಕೇಳಿಕೊಂಡಿತು. ೧೯೪೭ ಜನವರಿ ೧ರಿಂದ ನಾನು ದಾವಣಗೆರೆಯಲ್ಲಿ ಕಮ್ಯೂನಿಸ್ಟ್ ಪಾರ್ಟಿಯ ಕಾರ್ಯಕರ್ತನಾಗಿ ದುಡಿಯಲು ಆರಂಭ.

ದಾವಣಗೆರೆಯಲ್ಲಿ ಕಮ್ಯೂನಿಸ್ಟ್ ಪಕ್ಷದ ರಾಜ್ಯಮಟ್ಟದ ಸಮಾವೇಶ ನಡೆಯಿತು. ಕೇಂದ್ರ ಸಮಿತಿಯ ಮೋಹನ ಕುಮಾರಮಂಗಲಂ ಅಧ್ಯಕ್ಷತೆ ವಹಿಸಿದ್ದರು. ಆ ಸಮ್ಮೇಳನವು ಕೈಗಾರಿಕಾ ಕಾರ್ಮಿಕರಲ್ಲಿ ಜಾಗೃತಿಯ ಅಲೆಯನ್ನೇ ಹಬ್ಬಿಸಿ, ಸಂಘಟನೆ ಬಲಗೊಂಡಿತು. ಅಂತಿಮವಾಗಿ ದಾವಣಗೆರೆ ಹತ್ತಿ ಗಿರಣಿ ಲಾಕೌಟ್ ಘೋಷಿಸಿತು.

ನಮ್ಮ ಹೋರಾಟ ಮುಂದುವರಿಯಿತು. ಪೊಲೀಸರು ನನ್ನನ್ನು ಮತ್ತು ಇತರ ಕಾರ್ಮಿಕ ನಾಯಕರನ್ನು ಬಂಧಿಸಿ, ನಮ್ಮ ಮೇಲೆ ದಾವೆ ಹೂಡಿದರು. ನಮಗೆಲ್ಲರಿಗೂ ಒಂದೂವರೆ ತಿಂಗಳ ಕಠಿಣ ಶಿಕ್ಷೆಯಾಯಿತು. ನಮ್ಮನ್ನು ಜೈಲಿನಲ್ಲಿ ಬಂಧನದಲ್ಲಿಟ್ಟರು.

ನನ್ನ ತಂದೆ ಅಡ್ಡೂರು ಶಿವಶಂಕರ ರಾಯರು ೧೯ ಫೆಬ್ರವರಿ, ೨೦೧೩ರಂದು ಮಂಗಳೂರಿನಲ್ಲಿ ೯೧ನೆಯ ವಯಸ್ಸಿನಲ್ಲಿ ನಿಧನರಾದರು. (ಅವರ ಜನ್ಮ ದಿನಾಂಕ ೧೩-೪-೧೯೨೨).

ಕರ್ನಾಟಕದಲ್ಲಿ ಕಮ್ಯೂನಿಸ್ಟ್ ಆಂದೋಲನವು ನೆಲೆಯೂರುತ್ತಿದ್ದ ದಿನಗಳಲ್ಲಿ ಅವರು ಸಕ್ರಿಯರಾಗಿದ್ದರು. ಮಂಗಳೂರು, ಭದ್ರಾವತಿ ಹಾಗೂ ದಾವಣಗೆರೆಗಳಲ್ಲಿ ಆಂದೋಲನವನ್ನು ಬಲಪಡಿಸಲು ಅವರು ಬಹಳ ಕೆಲಸ ಮಾಡಿದ್ದರು. ಆ ದಿನಗಳ ಬಗ್ಗೆ ಅವರು ಬರೆದ ಲೇಖನ ಇದು.

**ಅಡ್ಡೂರು ಕೃಷ್ಣ ರಾವ್**
'ಸುಮ', ೫ನೇ ಅಡ್ಡ ರಸ್ತೆ, ಬಿಜೈ ಹೊಸ ರಸ್ತೆ
ಮಂಗಳೂರು - ೫೭೫ ೦೦೪

# ರಾಜಿ

**ಕೃಷ್ಣ ಅನುಪಮ**

ರಾಜಭವನದ ಎದುರಿನ ಹೂದೋಟ ಕಣ್ಣುತುಂಬುವಂತಿದ್ದರೂ ಮೇ ತಿಂಗಳ ಬಿಸಿಲು ಕಣ್ಣು ಕುಕ್ಕುವಂತಿದೆ. ರಾಜಭವನದ ಒಂದು ಬದಿಗೆ ಕಟಾಂಜನವನ್ನು ನಿಲ್ಲಿಸಿ ರಾಜ್ಯಪಾಲರ ಜನತಾದರ್ಶನಕ್ಕೆ ತಯಾರಿ ಮಾಡಿದ್ದಾರೆ. ಅರ್ಧಭಾಗಕ್ಕೆ ಶಾಮಿಯಾನದ ನೆರಳಿದೆ. ಕಟಾಂಜನದ ಚಕ್ರವ್ಯೂಹದಲ್ಲಿ ಮಾತ್ರವಲ್ಲ, ಹೊರಗೂ ಕೂಡ ಜನಜಂಗುಳಿ. ಅಂಗವಿಕಲರು, ವೃದ್ಧರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಕೈಯಲ್ಲಿ ಕಾಗದಪತ್ರಗಳು : ಕೆಲವರದು ನೀಟಾದ ಫೈಲಿನ ರೂಪದಲ್ಲಿದ್ದರೆ ಕೆಲವರದು ಗಾಳಿಗೆ ಹಾರಾಡುವ ಕಿವಿ ಬಂದ ಪೇಪರುಗಳ ಕಂತೆ. ಅದನ್ನೇ ಮಗುಚಾಡುತ್ತಾ ಏನೋ ಸಂಶೋಧನೆ ಮಾಡುತ್ತಿರುವವರಂತೆ ಕೆಲವರಿದ್ದರೆ, ಎಲ್ಲವನ್ನೂ ಕಂಕುಳಲ್ಲಿ ತುರುಕಿಕೊಂಡು ನಿರ್ಲಕ್ಷ್ಯದಿಂದಿರುವವರೂ ಇದ್ದಾರೆ.

ಸಿದ್ದಪ್ಪನವರ ಕೈಯಲ್ಲೂ ಒಂದು ಕಟ್ಟು ಕಾಗದಪತ್ರಗಳಿವೆ. ನಡುಗುವ ಕೈಕಾಲುಗಳು, ಇರುವ ನಾಕೆಂಟು ಕೂದಲುಗಳನ್ನು ಒಟ್ಟು ಮಾಡಿ ಕಟ್ಟಿದ ಸಣ್ಣ ಚಂಡಿಕೆ, ದಪ್ಪ ಕನ್ನಡಕ. ಮೊದಲೇ ಮಧ್ಯಮ ಮೈಕಟ್ಟಿನ ಮನುಷ್ಯ, ವೃದ್ಧಾಪ್ಯದಿಂದಾಗಿ ಇನ್ನೂ ಕುಗ್ಗಿಹೋಗಿದ್ದಾರೆ. ತೋಳಿಲ್ಲದ ದಪ್ಪ ಬಿಳಿ ಖಾದಿ ಅಂಗಿ, ಮೊಣಕಾಲಿನವರೆಗೆ ಬರುವ ದಟ್ಟಿ ಪಂಚೆ, ಬೆಳ್ಳಿಕಟ್ಟಿನ ಕಪ್ಪು ಊರುಗೋಲಿನ ಆಧಾರ. ಕಟಾಂಜನದ ಸಾಲಿನಲ್ಲಿ ನಿಲ್ಲಲು ತ್ರಾಣವಿಲ್ಲದೆ ಒಂದು ಮರದ ನೆರಳಲ್ಲಿ ಕಟ್ಟೆಯ ಮೇಲೆ ಪಿಳಿಪಿಳಿ ಕಣ್ಣುಬಿಡುತ್ತಾ ಕೂತಿದ್ದಾರೆ. ಅಷ್ಟರಲ್ಲಿ ಅವರ ಮಗ ವೀರಭದ್ರ ಓಡೋಡಿ ಬಂದು ಇವರ ರಟ್ಟೆ ಹಿಡಿದು ನಿಲ್ಲಿಸಿ ಕ್ಯೂಗೆ ಸೇರಲು ಅವಸರಿಸುತ್ತಾನೆ. ಕಾಗದಪತ್ರಗಳನ್ನು ಅವರ ಕೈಯಿಂದ ಕಸಿದುಕೊಂಡಂತೆ ತೆಗೆದುಕೊಂಡು ಒಮ್ಮೆ ಅವುಗಳ ಮೇಲೆ ಕಣ್ಣಾಡಿಸುತ್ತಾನೆ. ಕೆಲವಕ್ಕೆ ತನ್ನ ಪೆನ್ನಿನಿಂದ ಗುರುತು ಮಾಡುತ್ತಾನೆ. ಅವರ ಕೈ ಹಿಡಿದು ಎಳೆದುಕೊಂಡೇ ಬಂದಂತೆ ಕರೆತಂದು ಸಾಲಿನಲ್ಲಿ ನಿಲ್ಲಿಸುತ್ತಾನೆ. ರಾಜ್ಯಪಾಲರು ಬಂದು ಮನವಿ ಸ್ವೀಕರಿಸಲು ಹೆಚ್ಚು ಸಮಯವಿಲ್ಲ ಅಂತ ಮೈಕಿನಲ್ಲಿ ಘೋಷಿಸುತ್ತಾರೆ. ಸಿದ್ದಪ್ಪನವರಿಗೆ ನಿಂತು ನಿಂತು ಬವಳಿ ಬಂದಂತಾಗುತ್ತದೆ. ಸಾಲು ಚಲಿಸುವುದಿಲ್ಲ.

ಸಿದ್ದಪ್ಪನವರ ಊರು ಕುಂದಾಪುರ ತಾಲೂಕಿನ ಒಂದು ಹಳ್ಳಿ. ಕಾಟಿಮುಲ್ಲೆ ಎಂದು ಅದರ ಹೆಸರು. ಅದು ಬಹುತೇಕ ರೈತಾಪಿ ಕುಟುಂಬಗಳೇ ನೆಲೆಸಿರುವ ಕೊಂಪೆ. ಕುಂದಾಪುರದಿಂದ ಬಸ್ಸು ಹಿಡಿದು ಕ್ರಾಸಿಗೆ ಇಳಿದು ನಾಕೈದು ಮೈಲಿ ನಡೆದು ಊರು ಸೇರಬೇಕು. ಸಿದ್ದಪ್ಪನವರು ಕಮ್ಮಾರ ಕಸುಬಿನವರು. ರೈತರಿಗೆ ಬೇಕಾಗುವ ಉಪಕರಣಗಳ ತಯಾರಿಯಲ್ಲಿ ಸಿದ್ಧಹಸ್ತರು. ಬೇಸಾಯದ ಕಾಲದಲ್ಲಿ ಕೈತುಂಬಾ ಕೆಲಸ. ಮನೆಗೆ ತಾಗಿಕೊಂಡೇ ಅವರ ಕಮ್ಮಾರಸಾಲೆ. ಮೇಲಿನಿಂದ ಇಳಿಬಿಟ್ಟ ಕೊಂತಕ್ಕೆ ಸರಪಳಿಯಿಂದ ಬಿಗಿದ ಎರಡಾಳುದ್ದದ ತಿದಿ. ತಿದಿಯ ಬಾಯಲ್ಲಿ ನಿಗಿನಿಗಿ ಕೆಂಡದಲ್ಲಿ ಸದಾ ಬೇಯುತ್ತಿರುವ ಕತ್ತಿ, ಕುಟಾರಿ ಮುಂತಾದ ಪರಿಕರಗಳು. ಕೌಪೀನ ಮಾತ್ರ ತೊಟ್ಟು ಬರಿಮೈಯಲ್ಲಿ ದಿನವಿಡೀ ದುಡಿಮೆ. ತಮ್ಮ ಸಮಸಮಕ್ಕೆ ದುಡಿಯುವ ಎಳೆಯ ಹೆಂಡತಿ. ಹೀಗೆ ಅಪ್ಪನ ಗರಡಿಯಲ್ಲಿ ಪಳಗಿ ಎಲ್ಲರಿಂದ ಸೈ ಎನಿಸಿಕೊಳ್ಳುತ್ತಿರುವ ಹೊತ್ತಿಗೆ ದೇಶವಿಡೀ ಹರಡುತ್ತಿದ್ದ ಸ್ವಾತಂತ್ರ್ಯದ ಗಾಳಿ ಕುಂದಾಪುರದ ಕಡೆಗೂ ಬೀಸಿತು. ಗಾಂಧೀಜಿ ಕುಂದಾಪುರಕ್ಕೆ ಬಂದರು.

ಅಂದು ಗಾಂಧೀಜಿಯನ್ನ ನೋಡಲು ಗೆಳೆಯರ ಜೊತೆ ಸಿದ್ದಪ್ಪನವರು ಕುಂದಾಪುರಕ್ಕೆ ಹೋಗಿದ್ದರು. ಬ್ರಿಟಿಷ್ ಚಕ್ರಾಧಿಪತ್ಯವನ್ನೇ ನಡುಗಿಸುತ್ತಿರುವ ಗಾಂಧಿ, ಭಾರತಕ್ಕೆ ಸ್ವಾತಂತ್ರ್ಯ ಕೊಡಿಸುವ ಪಣ ತೊಟ್ಟಿರುವ ಗಾಂಧೀಜಿ ಜಗಜಟ್ಟಿಯ ತರಹ ಇರಬಹುದು, ಸಿಂಹದಂತೆ ಗರ್ಜಿಸಬಹುದು ಎಂದುಕೊಂಡು ಹೋಗಿದ್ದ ಯುವಕ ಸಿದ್ದಪ್ಪನವರಿಗೆ ಅಕಾಲ ವೃದ್ಧಾಪ್ಯ ಬಂದಂತೆ ಕಾಣುವ ಬರಿ ಮೈ ಫಕೀರನನ್ನು ನೋಡಿ ನಿರಾಶೆ, ಆಶ್ಚರ್ಯ ಎರಡೂ ಆದವು. ಆದರೆ ಗಾಂಧೀಜಿಯ ಚುರುಕುತನ, ಅರ್ಥವಾಗದಿದ್ದರೂ ಹಳ್ಳ ಹರಿವ ಶಬ್ದದಂತೆ ಕೇಳಿದ ಅವರ ಭಾಷಣ ಸಿದ್ದಪ್ಪನವರನ್ನು ತನ್ನೆಡೆಗೆ ಕರೆದಂತೆ ಅನ್ನಿಸಿತು. ಆಗ ಅವರಿಗೆ ಮದುವೆಯಾಗಿ ವರ್ಷ ಕಳೆದಿರಲಿಲ್ಲ. ಅವರು ಅಂದೇ ಸತ್ಯಾಗ್ರಹದ ದೀಕ್ಷೆ ತೊಟ್ಟರು. ಸತ್ಯಾಗ್ರಹಿ ಯುವಕರ ಪಡೆ ಕಟ್ಟಿಕೊಂಡು ಅಂಚೆ ಪೆಟ್ಟಿಗೆ ಮಾಯ ಮಾಡಿದರು, ಟೆಲಿಗ್ರಾಫ್ ತಂತಿಗಳನ್ನು ಕತ್ತರಿಸಿದರು. ಈಚಲು ಮರಗಳನ್ನು ಕಡಿದು ಹಾಕಿದರು. ಹೆಂಡದಂಗಡಿಯ ಮುಂದೆ ಪಿಕೆಟಿಂಗ್ ಮಾಡಿದರು. ಅಖಂಡವಲ್ಲದಿದ್ದರೂ ಅಷ್ಟಷ್ಟು ದಿನ ಬ್ರಹ್ಮಚರ್ಯವನ್ನೂ ಪಾಲಿಸಿದರು. ಇವರ ಈ ಎಲ್ಲಾ ಚಟುವಟಿಕೆಗಳು ಹೆಂಡತಿಯಲ್ಲಿ ದಿಗ್ಭ್ರಮೆ ಹುಟ್ಟಿಸಿದವು, ಇವರ ಅಪ್ಪ ಸಿಟ್ಟಿನಲ್ಲಿ ಕುಣಿದಾಡುವಂತೆ ಮಾಡಿದವು.

ಅದು ಗಾಂಧೀಜಿಯವರ ಹರಿಜನೋದ್ಧಾರದ ಕಾವು ಏರುತ್ತಿದ್ದ ಕಾಲ. ಕಾಟಿಮುಲ್ಲೆಯಲ್ಲೂ ದೊಡ್ಡ ಹೊಲೆಯರ ಕೇರಿ ಇತ್ತು. ತಮ್ಮ ಪಟಾಲಮ್ಮಿನ ಜೊತೆ ಅವರು ಅಲ್ಲಿಗೆ ಹೋಗಿ ಕೇರಿಯ ಕಸ ಗುಡಿಸಿ ಹರಿಜನರಿಗೆ ಸ್ವಚ್ಛತೆಯ ಪಾಠ ಹೇಳಿಕೊಡಲು ನೋಡಿದರು. ಹರಿಜನರನ್ನು ಊರಿನ ವಿಷ್ಣುಮೂರ್ತಿ ದೇವಸ್ಥಾನದ ಒಳಗೆ ಕರೆದುಕೊಂಡು ಹೋಗುವ ಕಾರ್ಯಕ್ರಮ ಹಾಕಿಕೊಂಡು ಓಡಾಡಿದರು. ಆದರೆ ಅವರ ಊರಿನ ಹರಿಜನರು ದೇವಸ್ಥಾನದ ಒಳಗೆ ಬಂದು ಹರಿಯ ದರ್ಶನ ಪಡೆಯಲು ಸುತರಾಂ ಒಪ್ಪಲಿಲ್ಲ. ಊರಿನ ಕೆಲವರು ಇವರನ್ನು ಗೇಲಿ ಮಾಡುತ್ತಾ, ''ದೇವಸ್ಥಾನ ಯಾಕೆ ಹಾಳು ಮಾಡುತ್ತಾನಂತೆ ಅವನು. ಬೇಕಿದ್ದರೆ ಅವನ ಮನೆಯ ಜಗಲಿಯ ಮೇಲೆ ಊಟ ಹಾಕಲಿ ನೋಡುವ'' ಅಂತ ಸವಾಲು ಹಾಕಿದರು. ಸಿದ್ದಪ್ಪನವರಿಗೆ ಹುಮ್ಮಸ್ಸು ಬಂತು. ಅಪ್ಪ ಕುಂದಾಪುರ ಸಂತೆಗೆ ಹೋಗುವ ಶನಿವಾರವನ್ನು ಗೊತ್ತುಮಾಡಿಕೊಂಡರು. ನಾಕೈದು ಜನ ಹೊಲೆಯರಿಗೆ ಏನೇನೋ ಆಸೆ ತೋರಿಸಿ ಮನೆಗೆ ಕರೆಸಿ ಜಗಲಿ ಹತ್ತಿಸಲು ನೋಡಿದರು. ಹೊಲೆಯರು ಪಾಪ ಧೈರ್ಯಕ್ಕಾಗಿ ಕುಡಿದುಕೊಂಡು ಬೇರೆ ಬಂದಿದ್ದರು. ಆದರೂ ಜಗಲಿ ಮೇಲೆ ಹಾಕಿದ್ದ ಎಲೆ ಮುಂದೆ ಅವರನ್ನು ಕೂರಿಸಲು ಆಗಲಿಲ್ಲ. ಎಲೆಗಳನ್ನು ಗಬಕ್ಕನೆ ಎತ್ತಿಕೊಂಡು ಬಂದು ಅಂಗಳದಲ್ಲಿ ಉಂಡುಹೋದರು. ಸಂಜೆ ಕ್ರಾಂತಿ ಮಾಡಿದ ಉಮೇದಿನಲ್ಲಿ ಮನೆಗೆ ಬಂದರೆ ಅಪ್ಪ ಕೋಲು ಹಿಡಿದು ಹೊಡೆಯಲಿಕ್ಕೇ ಬಂದುಬಿಟ್ಟರು. ಇಡೀ ಮನೆ, ಅಂಗಳ ಎಲ್ಲವನ್ನೂ ಸೆಗಣಿ ನೀರು ಹಾಕಿ ತೊಳೆಯುತ್ತಿದ್ದರು. ಪುಣ್ಯಾವಾಚನ ಮಾಡಲು ಭಟ್ಟರನ್ನೂ ಕರೆಸಿದ್ದರು.

ದಿನಾ ಒಂದಿಲ್ಲೊಂದು ಚಟುವಟಿಕೆಗಳಲ್ಲಿ ತೊಡಗಿಕೊಂಡಿರುತ್ತಾ ಸಿದ್ದಪ್ಪನವರು ಒಮ್ಮೆ ಬಂಧನಕ್ಕೂ ಒಳಗಾದರು. ದೂರದ ಬಳ್ಳಾರಿ ಜೈಲಿನಲ್ಲಿ ಮೂರು ತಿಂಗಳು ಇದ್ದು ಬಂದರು. ಓದಲು ಬರೆಯಲು ಬರುವಷ್ಟು ವಿದ್ಯಾವಂತರಾಗಿದ್ದ ಅವರು ಜೈಲಿನಲ್ಲಿ ಓದುವ ಗೀಳು ಅಂಟಿಸಿಕೊಂಡರು. ಹಿರಿಯ ಹೋರಾಟಗಾರರ ಜೊತೆ ಬೆರೆತರು. ಜೈಲಿನಿಂದ ಬಿಡುಗಡೆಯಾಗಿ ಹೊರಬಂದಾಗ ಒಳಗೆ ಏನೋ ಹೊಸತನ ತುಂಬಿಕೊಂಡಂತೆ ಅವರಿಗೆ ಅನ್ನಿಸಿತು. ಮುಂದೆ ಮೂರೇ ತಿಂಗಳಲ್ಲಿ ದೇಶಕ್ಕೆ ಸ್ವಾತಂತ್ರ್ಯ ಬಂತು. ಒಂದಷ್ಟು ದಿನ ತಮ್ಮ ಹೋರಾಟಕ್ಕೆ ಫಲ ಸಿಕ್ಕಿದ್ದಕ್ಕೆ ಸಂಭ್ರಮಪಟ್ಟರು. ಅಂತೂ ಬ್ರಿಟಿಷರ ಆಡಳಿತದಿಂದ ಮುಕ್ತರಾದೆವು, ಇನ್ನು ಭಾರತ ದೇಶ ಅಭಿವೃದ್ಧಿ ಹೊಂದುತ್ತದೆ ಅಂತ ಖುಷಿಪಟ್ಟರು.

ತದನಂತರದ ಗಾಂಧೀಜಿಯ ಕಗ್ಗೊಲೆ ಸಿದ್ದಪ್ಪನವರನ್ನು ಬೆಚ್ಚಿಬೀಳಿಸಿತು. ಇನ್ನು ಈ ದೇಶಕ್ಕೆ ಭವಿಷ್ಯವೇ ಇಲ್ಲವೇನೋ ಅಂತಲೂ ಅನ್ನಿಸಿತು. ಆದರೂ ಈ ನೆಹರು ಎಂಬ ಮಾಯಗಾರ ಎಲ್ಲವನ್ನೂ ಸರಿದೂಗಿಸುತ್ತಾನೆ, ದೇಶದಲ್ಲಿ ಎಲ್ಲರೂ ಉಂಡುಟ್ಟು ನಲಿಯುವಂತಾದೀತು ಎಂಬ ಆಶಾವಾದಕ್ಕೆ ಒಳಗಾದರು. ಈ ಮಧ್ಯೆ ಸರಕಾರ ಸ್ವಾತಂತ್ರ್ಯ ಹೋರಾಟಗಾರರನ್ನು ಗುರುತಿಸಿ ಪಿಂಚಣಿ ಕೊಡಲು ಶುರುಮಾಡಿತು. ಸಿದ್ದಪ್ಪನವರೂ ಪಿಂಚಣಿಗೆ ಭಾಜನರಾದರು. ಅವರ ತಂದೆ ಮತ್ತು ಹೆಂಡತಿಗೆ ಮೊತ್ತಮೊದಲ ಬಾರಿಗೆ ತಾವು ಬೈದುಕೊಂಡಿದ್ದ ಇವರು ಮಾಡಿದ ಕೆಲಸಗಳೆಲ್ಲ ಒಳ್ಳೆಯವೆ ಇರಬೇಕೆಂಬ ಅನುಮಾನ ಬಂತು. ಪಿಂಚಣಿ ಪಡೆಯುತ್ತಿರುವವರನ್ನು ನೋಡಿದಾಗ ಎಷ್ಟೋ ಜನ ಖೊಟ್ಟಿ ಹೋರಾಟಗಾರರೂ ಪಿಂಚಣಿ ಪಡೆಯುತ್ತಿರುವ ವಿಷಯ ಸಿದ್ದಪ್ಪನವರನ್ನು ಬಹುವಾಗಿ ಕಾಡಿತು. ಎಲ್ಲಾ ಇಷ್ಟು ಬೇಗ ಸ್ವಾರ್ಥಿಗಳಾಗಿಬಿಟ್ಟರೇ ? ಅಂತ ಆಶ್ಚರ್ಯಪಟ್ಟರು. ಕೆಲವರ ಮೇಲೆ ಅರ್ಜಿ ಬರೆದು ಹಾಕಿ ಜನರ ನಿಷ್ಠುರವನ್ನೂ ಕಟ್ಟಿಕೊಂಡರು.

ಇಂತಹ ಸಂದರ್ಭದಲ್ಲಿ ಮತ್ತೇನೂ ತಲೆಕೆಡಿಸಿಕೊಳ್ಳಲು ಹೋಗದೆ ಮತ್ತೆ ತಮ್ಮ ವೃತ್ತಿಗೆ ಇಳಿದರು. ಒಬ್ಬ ಮಗನೂ ಹುಟ್ಟಿದ. ಇವರ ಜೊತೆ ಹೋರಾಟದಲ್ಲಿ ಭಾಗಿಯಾಗಿದ್ದ ಎಷ್ಟೋ ಜನ ಕಾಂಗ್ರೆಸ್ ಪಕ್ಷ ಸೇರಿ ರಾಜಕಾರಣಿಗಳಾದರು. ಕೆಲವರು ಮಂತ್ರಿಗಳೂ ಆದರು. ಮಗ ವೀರಭದ್ರ ಸರಿಯಾಗಿ ಕಲಿಯಲೂ ಇಲ್ಲ, ಸ್ವಲ್ಪ ಚಂಗಲು ಬಿದ್ದ. ಮದುವೆ ಮಾಡಿದರು. ಅವನಿಗೆ ಎರಡು ಮಕ್ಕಳೂ ಆದವು.

ಪಿಂಚಣಿ ಕಾಲಕಾಲಕ್ಕೆ ಸ್ವಲ್ಪ ಸ್ವಲ್ಪ ಹೆಚ್ಚಾಗುತ್ತಾ ಪ್ರತಿ ತಿಂಗಳು ತಪ್ಪದೆ ಬರುತ್ತಿತ್ತು. ನಮ್ಮದೇ ದೇಶಕ್ಕಾಗಿ ಹೋರಾಡಿದ್ದಕ್ಕೆ ಪ್ರತಿ ತಿಂಗಳೂ ಹಣ ಪಡೆಯುವಾಗ ಸಿದ್ದಪ್ಪನವರಿಗೆ ಒಳಗೆಲ್ಲೋ ಚುಚ್ಚಿದಂತೆ ಆಗುತ್ತಿತ್ತು. ಸಾಕು ಬಿಡಿರಿ ನಿಮ್ಮ ಪಿಂಚಣಿ ಅಂತ ಸರಕಾರಕ್ಕೆ ಬರೆದುಹಾಕುವ ವಿಚಾರವೂ ಎಷ್ಟೋ ಸಲ ಅವರ ಮನಸ್ಸಿಗೆ ಬಂದಿತ್ತು. ಅಂತೂ ಆ ಕಾಲ ಬಂದೇಬಿಟ್ಟಿತು.

ಅವರ ಹಳ್ಳಿಯಲ್ಲಿ ಒಂದು ಸರಕಾರಿ ಹೆಂಡದಂಗಡಿ ಇತ್ತು. ಅದನ್ನು ತೆರೆಯುವಾಗಲೂ ಸಿದ್ದಪ್ಪ ಅದು ಬೇಡವೇ ಬೇಡ ಅಂತ ಅರ್ಜಿ ಬರೆದುಹಾಕಿದ್ದರು. ಆಗಲೇ ಅಬಕಾರಿ ಗುತ್ತಿಗೆ ಸರಕಾರಕ್ಕೆ ಕೋಟ್ಯಂತರ ರೂಪಾಯಿ ಆದಾಯದ ಮೂಲವಾಗಿಬಿಟ್ಟಿತ್ತು. ಸರಕಾರ ಕ್ಯಾರೆ ಎನ್ನಲಿಲ್ಲ. ಈ ಎಂಭತ್ತರ ದಶಕದಲ್ಲಿ ಸರಕಾರದ ಉದಾರ ನೀತಿಯಿಂದಾಗಿ ಒಂದು ಬಾರ್ ತೆರೆಯಲೂ ಕೂಡ ಅನುಮತಿ ದೊರೆಯಿತು. ಈ ಸಂದರ್ಭದಲ್ಲಿ ಸಿದ್ದಪ್ಪ ಮತ್ತೆ ಸರಕಾರಕ್ಕೆ ಬರೆದುಹಾಕಿದರು. ವೀರಭದ್ರ ಬೇರೆ ಕುಡಿತ ಕಲಿತಿದ್ದ. ಆದರೆ ಸಿದ್ದಪ್ಪನವರಿಗೆ ಬಾರ್ ಶುರುವಾಗದಂತೆ ತಡೆಯಲೂ ಆಗಲಿಲ್ಲ, ಮಗನ ಕುಡಿತ ಬಿಡಿಸಲೂ ಆಗಲಿಲ್ಲ. ಈ ಬಾರಿ ಬಂದ ಪಿಂಚಣಿಯನ್ನು ಅವರು ಮುಟ್ಟಲಿಲ್ಲ. ಸರಕಾರಕ್ಕೆ ತಮಗೆ ಪಿಂಚಣಿ ಬೇಡ ಅಂತ ಅಧಿಕೃತವಾಗಿ ಬರೆದೂ ಹಾಕಿದರು. ಇದು ಸುದ್ದಿಯಾಗಿ ಪತ್ರಿಕೆಗಳಲ್ಲೂ ಬಂತು. ಎಷ್ಟೋ ಜನ ಸಿದ್ದಪ್ಪನವರ ನೈತಿಕ ಸಿಟ್ಟನ್ನು , ಅವರ ಪ್ರತಿಭಟನೆಯ ವಿಧಾನವನ್ನು ಕೊಂಡಾಡಿದರು.

ತೊಂಭತ್ತರ ದಶಕ ಜಾಗತೀಕರಣಕ್ಕೆ ನಾಂದಿ ಹಾಡಿತು. ರೈತರು ನೇಗಿಲಿನಿಂದ ಉಳುವುದನ್ನು ಕಡಿಮೆ ಮಾಡಿದರು. ಟ್ರ್ಯಾಕ್ಟರುಗಳು ಬಂದವು. ಗದ್ದೆಗಳನ್ನು ವಾಣಿಜ್ಯ ಉದ್ದೇಶಕ್ಕೆ ಪರಿವರ್ತಿಸತೊಡಗಿದರು. ಕೊಯಿಲು ಮಾಡಲು ಯಂತ್ರ ಬಂತು. ಭತ್ತವನ್ನು ಕುಟ್ಟಿ ಅಕ್ಕಿ ಮಾಡುವ ಬದಲು ಮಿಲ್ಲಿಗೆ ಕೊಟ್ಟು ಅಕ್ಕಿ ತರಲು ಶುರು ಮಾಡಿದರು. ಒಟ್ಟಾರೆ ಸಿದ್ದಪ್ಪನವರ ಕಸುಬು ಮೂಲೆಗುಂಪಾಗಲು ತೊಡಗಿತು. ತಿದಿಯಲ್ಲಿ ಕೆಂಡ ತಣ್ಣಗಾಗುತ್ತಾ ಕಬ್ಬಿಣ ಕುಟ್ಟುವ ಸದ್ದು ಕೇಳಿಸದಂತಾಯ್ತು. ಇಷ್ಟರಲ್ಲಿ ಮಗ ವೀರಭದ್ರ ತಾನು ಸ್ವಂತ ಉದ್ಯಮ ಮಾಡುತ್ತೇನೆಂದು ಸಾಲ ಮಾಡಿ ಸಬ್ಸಿಡಿ ತಿಂದು ಇದ್ದ ಎರಡು ಗದ್ದೆಗಳನ್ನೂ ಹರಾಜಿಗಿಟ್ಟ. ಸಿದ್ದಪ್ಪ ಕಂಗಾಲಾದರು.

ಈ ಮಧ್ಯೆ ವೀರಭದ್ರ ಹೊಸ ವರಾತ ಶುರು ಮಾಡಿದ. ಸ್ವಾತಂತ್ರ್ಯ ಹೋರಾಟಗಾರರ ಪಿಂಚಣಿ ತಿರಸ್ಕರಿಸಿದ ಅಪ್ಪನ ನಿರ್ಧಾರ ಮೂರ್ಖತನದ್ದು ಅಂತ ಬಹಿರಂಗವಾಗಿ ಸಾರಿದ. ಅವರ ಎದುರಿಗೇ ಈ ಕುರಿತು ಗೇಲಿ ಮಾಡಲು ಶುರುಮಾಡಿದ. ''ಇದನ್ನು ಮಾಡಿ ನೀವು ಏನನ್ನು ಸಾಧಿಸಿದಿರಿ ? ಇದರಿಂದ ದೇಶ ಉದ್ಧಾರವಾಯ್ತೇ ? ಅದು ಬರುತ್ತಿದ್ದರೆ ಮಕ್ಕಳು ಎರಡು ಹೊತ್ತಿನ ಊಟವನ್ನಾದರೂ ಮಾಡಿಕೊಂಡಿರುತ್ತಿದ್ದರಲ್ಲ, ಅದಕ್ಕೂ ನೀವು ಕಲ್ಲು ಹಾಕಿದಿರಿ'' ಎಂದೆಲ್ಲ ಹಂಗಿಸತೊಡಗಿದ. ತಾವು ತೆಗೆದುಕೊಂಡ ನಿರ್ಧಾರ ತಪ್ಪು ಎಂದು ಸಿದ್ದಪ್ಪನವರಿಗೆ ಎಂದೂ ಅನ್ನಿಸಿರಲಿಲ್ಲ. ಆದರೂ ತನ್ನ ಈ ತರಹದ ಪ್ರತಿಭಟನೆ ಸರಕಾರದ ಮೇಲೆ ಯಾವುದೇ ಪರಿಣಾಮವನ್ನು ಬೀರಲಿಲ್ಲ ಎಂಬುದೂ ಸ್ಪಷ್ಟವಾಗಿತ್ತು. ಅಂದು ಗಾಂಧೀಜಿಯ ಒಂದು ಉಪವಾಸಕ್ಕೆ ಬ್ರಿಟಿಷ್ ಸರ್ಕಾರ ಎಚ್ಚೆತ್ತುಕೊಳ್ಳುತ್ತಿತ್ತು. ಈಗ ಗಾಂಧೀಜಿ ಇದ್ದಿದ್ದರೂ ಈ ಸರ್ಕಾರ ಕ್ಯಾರೆ ಎನ್ನುತ್ತಿರಲಿಲ್ಲ ಅನ್ನಿಸಿತು. ಆದರೂ ಮಗನ ಈ ಚುಚ್ಚುಮಾತು ಮಾತ್ರ ಅಪಾರ ನೋವನ್ನು ಕೊಡುತ್ತಿತ್ತು. ಅವನಿಗೆ ಕೂಡ ಇವರ ಯಾವ ವಾದವೂ ಅರ್ಥವಿಲ್ಲದ್ದರಂತೆ ಕಾಣುತ್ತಿತ್ತು.

ಒಂದು ದಿನ ವೀರಭದ್ರ ಒಂದು ಪತ್ರ ಬರೆದುಕೊಂಡು ಬಂದ. ಸಿದ್ದಪ್ಪ ಬರೆದಂತಿದ್ದ ಪತ್ರದಲ್ಲಿ ತಾನು ಪಿಂಚಣಿ ತಿರಸ್ಕರಿಸಿದ್ದು ತಪ್ಪಾಯಿತೆಂದೂ, ಈಗ ತಾನು ತುಂಬಾ ಸಂಕಷ್ಟದಲ್ಲಿದ್ದೇನೆಂದೂ, ತಾನು ದೇಶಕ್ಕೆ ಮಾಡಿದ ಸೇವೆಯನ್ನು ಪರಿಗಣಿಸಿ ತನಗೆ ಸ್ವಾತಂತ್ರ್ಯ ಹೋರಾಟಗಾರರ ಪಿಂಚಣಿ ಹಿಂಬಾಕಿ ಸಹಿತ ಸಿಗುವಂತೆ ಮಾಡಬೇಕೆಂದೂ ಬರೆಯಲಾಗಿತ್ತು. ನಡುಗುವ ಕೈಗಳಲ್ಲಿ ಪತ್ರ ಹಿಡಿದು ಅದನ್ನು ಬೆಳಕಿಗೆ ಹಿಡಿದು ಓದುತ್ತಿದ್ದಂತೆ ಸಿದ್ದಪ್ಪನವರ ಕಣ್ಣುಗಳು ಹನಿಗೂಡಿದವು. ಮಗ ಭಾಷಣ ಶುರು ಮಾಡಿದ : ''ಈ ದೇಶದಲ್ಲಿ ನೂರಕ್ಕೆ ನೂರು ಪ್ರಾಮಾಣಿಕರು ಯಾರು ? ನೀವೊಬ್ಬರು ಪಿಂಚಣಿ ತಿರಸ್ಕರಿಸಿ ಏನು ಪ್ರಯೋಜನ ? ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ಕಳ್ಳತನ ಮಾಡಿ ಜೈಲಿಗೆ ಹೋಗಿದ್ದವರೂ ಈಗ ಪಿಂಚಣಿ ಪಡೆಯುತ್ತಿದ್ದಾರಲ್ಲ'' ಇಂತಹ ಹಲವು ಬಾಣಗಳನ್ನು ಒಂದೇ ಸಮನೆ ಬಿಡಲು ಶುರು ಮಾಡಿದ.

ಸಿದ್ದಪ್ಪನವರಿಗೆ ಇವೆಲ್ಲ ಗೊತ್ತಿಲ್ಲದ್ದೇನಲ್ಲ. ೧೯೪೦-೪೫ರ ಮಧ್ಯೆ ಎರಡನೇ ಮಹಾಯುದ್ಧದ ಸಮಯದಲ್ಲಿ ಬ್ರಿಟಿಷರು ಆಹಾರಧಾನ್ಯ, ಮರಮುಟ್ಟು ಇತ್ಯಾದಿ ಯುದ್ಧಕ್ಕೆ ಬೇಕಾಗುವ ಎಲ್ಲಾ ವಸ್ತುಗಳ ಕೊಡುಕೊಳ್ಳುವಿಕೆಯನ್ನು ತೀವ್ರವಾಗಿ ನಿಯಂತ್ರಿಸಿದ್ದರು. ಆಗ ಅಕ್ಕಿಯ ಕಾಳಸಂತೆ ಬಹಳ ಲಾಭದಾಯಕವಾಗಿತ್ತು. ಎಷ್ಟೋ ಜನ ಈ ಅವ್ಯವಹಾರದಲ್ಲಿ ಕಣ್ಣಾನೂರು, ಬಳ್ಳಾರಿ ಜೈಲು ಸೇರಿದ್ದರು. ಸ್ವಾತಂತ್ರ್ಯಾನಂತರ ಜೈಲಿನ ದಾಖಲೆ ಫೋರ್ಜರಿ ಮಾಡಿ ದಿಢೀರ್ ಸ್ವಾತಂತ್ರ್ಯ ಹೋರಾಟಗಾರರಾಗಿಬಿಟ್ಟಿದ್ದರು. ಈಗ ಅಂಥವರು ಖಾದಿ ಹಾಕಿಕೊಂಡು ಓಡಾಡುವುದನ್ನು ನೋಡಬಹುದಾಗಿತ್ತು.

ಸಿದ್ದಪ್ಪ ಅವನನ್ನು ಒಮ್ಮೆ ಶೂನ್ಯ ದೃಷ್ಟಿಯಿಂದ ನೋಡಿದರು. ಸನ್ನೆಯಿಂದ ಅವನನ್ನು ಸುಮ್ಮನಾಗಿಸಿ ಕೈಸನ್ನೆಯಿಂದಲೆ ಪೆನ್ನು ಕೇಳಿದರು. ನಿಧಾನವಾಗಿ ಸಹಿ ಮಾಡಿ ಪತ್ರವನ್ನು ಅವನ ಕಡೆಗೆ ತಳ್ಳಿದರು. ಮಗ ಅದನ್ನು ನೀಟಾಗಿ ಮಡಚಿ ಕವರಿಗೆ ಹಾಕಿ ಪೋಸ್ಟ್ ಮಾಡಲು ಹೋದ.

ಎಲ್ಲಾ ಹೀಗೇಕಾಯಿತು ಎಂಬ ಜಿಜ್ಞಾಸೆಗೆ ಕೊನೆ ಇಲ್ಲ. ಇಡೀ ಜಗತ್ತೇ ಲೋಲುಪತೆಯನ್ನು ಆರಿಸಿಕೊಂಡು ಸುಖಿಸಲು ನೋಡುತ್ತಿರುವಾಗ ಗಾಂಧಿ ಹೇಳಿದಂತೆ ಬದುಕಲು ಭಾರತಮಾತೆಯ ಮಕ್ಕಳಿಗೆ ಸಾಧ್ಯವಾದೀತೇ ? ಹಾಗೆ ನೋಡಿದರೆ ದೇಶಗಳ ನಾಯಕರೂ ಸರಳ ಬಾಳ್ವೆಯನ್ನೇ ಒಂದಲ್ಲ ಒಂದು ರೀತಿಯಲ್ಲಿ ಆದರ್ಶವಾಗಿಟ್ಟುಕೊಂಡವರೇ.

ಜಾರ್ಜ್ ವಾಷಿಂಗ್ಟನ್ ಅಮೇರಿಕಾದವರಿಗೆ ಎಲ್ಲ ದೇಶಗಳ ವ್ಯವಹಾರದಲ್ಲಿ ಮೂಗು ತೂರಿಸುತ್ತಾ ಹೋಗಿ ಎಂದು ಹೇಳಿರಲಾರ. ಹೀಗೆ ಯೋಚಿಸುತ್ತಾ ಸಿದ್ದಪ್ಪನವರಿಗೆ ತಾವು ತಮ್ಮನ್ನು ಸಮರ್ಥಿಸಿಕೊಳ್ಳಲು ಬಾಲಿಶ ಯೋಚನೆಗಳನ್ನು ಮಾಡುತ್ತಿರುವಂತೆ ಅನ್ನಿಸಿ ನಾಚಿಕೆಯಾಯಿತು.

ಎಷ್ಟು ದಿನ ಕಾದರೂ ಸರಕಾರದಿಂದ ಉತ್ತರ ಬರಲಿಲ್ಲ, ಮತ್ತೆರಡು ಸಲ ನೆನಪಿನೋಲೆಯೂ ಹೋಯಿತು. ಒಂದಿಬ್ಬರು ಬೆಂಗಳೂರಿಗೆ ಓಡಾಡುವ ದಲ್ಲಾಳಿಗಳು ಈ ಕೆಲಸ ತಾವು ಮಾಡಿಸಿಕೊಡುವುದಾಗಿ ಹೇಳಿಕೊಂಡು ವೀರಭದ್ರನಿಂದ ದುಡ್ಡು ಕಿತ್ತರು. ಇದೇ ಸಮಯದಲ್ಲಿ ಚುನಾಯಿತ ಸರಕಾರ ಪತನವಾಗಿ ರಾಜ್ಯಪಾಲರ ಆಡಳಿತ ಬಂತು. ರಾಜ್ಯಪಾಲರು ಹುರುಪಿನಿಂದ ಜನತಾ ದರ್ಶನ ಕಾರ್ಯಕ್ರಮ ಶುರುಮಾಡಿದರು. ವೀರಭದ್ರ ಮತ್ತೆ ಚುರುಕಾದ. ಕಾಗದಪತ್ರಗಳನ್ನು ಮತ್ತೆ ರೆಡಿ ಮಾಡಿಕೊಂಡ. ಈ ಸಲ ಅಪ್ಪನನ್ನೇ ಬೆಂಗಳೂರಿಗೆ ಹೊರಡಿಸಿಬಿಟ್ಟ. ಇತ್ತೀಚೆಗಂತೂ ಸಿದ್ದಪ್ಪ ಹೇಳಿದಂತೆ ಕೇಳುವ ಗೊಂಬೆಯಂತಾಗಿದ್ದರು. ತಾನು ಇನ್ನೆಷ್ಟು ದಿನ ಬದುಕಿ ತನ್ನ ಮಗನಿಗೆ ಎಷ್ಟು ಪಿಂಚಣಿ ಸಿಗಬಹುದು ? ಇಷ್ಟಕ್ಕೆಲ್ಲ ಕಾರಣವಾದ ಸ್ವಾತಂತ್ರ್ಯ ಇದುವರೆಗೆ ಏನು ಕೊಟ್ಟಿತು ? ತಮ್ಮ ಹೋರಾಟಕ್ಕೇ ಅರ್ಥವಿಲ್ಲದ ಮೇಲೆ ಪಿಂಚಣಿಗೆ ಏನು ಅರ್ಥ ? ಅದನ್ನು ಸ್ವೀಕರಿಸುವುದರಲ್ಲೂ ಅರ್ಥವಿಲ್ಲ, ತಿರಸ್ಕರಿಸುವುದರಲ್ಲೂ ಅರ್ಥವಿಲ್ಲ, ಹೀಗೆ ಏನೇನೋ ಯೋಚಿಸುತ್ತಾ ಕೂತುಬಿಡುವರು.

ಅಂತೂ ಸಾಲು ಚಲಿಸಲು ಶುರುವಾಯ್ತು. ಪ್ರತಿಯೊಬ್ಬರೂ ರಾಜ್ಯಪಾಲರು ಕುಳಿತಿದ್ದ ವೇದಿಕೆಗೆ ಹೋಗಿ ಅವರ ಕೈಗೆ ತಮ್ಮ ಮನವಿ ಕೊಡುತ್ತಿದ್ದರು. ರಾಜ್ಯಪಾಲರು ಅವರ ಮಾತನ್ನು ಆಲಿಸಿ ಅವರ ಮನವಿಯ ಮೇಲೆ ಶರಾ ಬರೆದು ಸಂಬಂಧಿಸಿದ ಅಧಿಕಾರಿಗಳಿಗೆ ಕೊಡುತ್ತಿದ್ದರು. ಕೆಲವರದು ಬೇಗ ಮುಗಿದರೆ ಕೆಲವರು ಹೊತ್ತು ತೆಗೆದುಕೊಳ್ಳುತ್ತಿದ್ದರು. ಮಧ್ಯದಲ್ಲಿ ಎಷ್ಟೋ ಜನ ಅಂಗವಿಕಲರು ಬೇರೆ. ಒಟ್ಟಾರೆ ಇದನ್ನೆಲ್ಲಾ ನೋಡುತ್ತಿದ್ದರೆ ಲೋಕವಿಡೀ ಕಷ್ಟಕೋಟಲೆಗಳಿಂದ ತುಂಬಿಹೋಗಿದೆಯೇನೋ ಅನ್ನಿಸುತ್ತಿತ್ತು.

ಸಿದ್ದಪ್ಪನವರ ಸರದಿ ಕೊನೆಗೂ ಬಂತು. ವೀರಭದ್ರ ಅವರ ಕೈ ಹಿಡಿದು ನಡೆಸುತ್ತಾ ರಾಜ್ಯಪಾಲರ ಎದುರು ನಿಲ್ಲಿಸಿದ. ವೀರಭದ್ರ ಸಂಕ್ಷಿಪ್ತವಾಗಿ ಎಲ್ಲಾ ಕತೆ ಹೇಳಿದ. ರಾಜ್ಯಪಾಲರು ಎದ್ದು ನಿಂತು ಸಿದ್ದಪ್ಪನವರ ಎರಡೂ ಕೈಗಳನ್ನು ಹಿಡಿದುಕೊಂಡು ಗೌರವ ತೋರಿಸಿದರು. ಮನವಿಯನ್ನು ತೆಗೆದುಕೊಂಡರು ಸಿದ್ದಪ್ಪನವರಿಗೆ ಎಲ್ಲವೂ ಮುಗಿದಂತಾಗಿ ನಿರಾಳವೆನಿಸಿತು. ಎಷ್ಟೊಂದು ಜನರಿಗೆ ಏನೇನೆಲ್ಲ ಸಮಸ್ಯೆಗಳಿವೆಯಲ್ಲಾ ಅಂದುಕೊಂಡು ಆಶ್ಚರ್ಯಪಟ್ಟರು.

ವೀರಭದ್ರ ತಂದೆಯನ್ನು ಮರದ ಸುತ್ತ ಕಟ್ಟಿದ ಸಿಮೆಂಟ್ ಕಟ್ಟೆಯ ಮೇಲೆ ಕೂರಿಸಿ ಅವರಿಗೆ ಕುಡಿಯಲು ಏನಾದರು ತರಲು ಹೊರಗೆ ಹೋದ. ಒಂದು ಸೀಯಾಳ ಕೆತ್ತಿಸಿಕೊಂಡು ಅದಕ್ಕೆ ಸ್ಟ್ರಾ ಹೆಟ್ಟಿಕೊಂಡು ಬರುವಾಗ ಸ್ವಲ್ಪ ಹೊತ್ತಾಯಿತು. ಸಿದ್ದಪ್ಪ ಕಾಲು ಮಡಚಿ ಅಲ್ಲೇ ಮಗ್ಗುಲಾಗಿ ಮಲಗಿಬಿಟ್ಟಿದ್ದರು. ವೀರಭದ್ರ ದಿಟ್ಟಿಸಿ ಅವರನ್ನೇ ಒಂದು ಕ್ಷಣ ನೋಡುತ್ತಾ ನಿಂತ. ಅವರ ಎದೆ ಏರಿಳಿಯುತ್ತಿದ್ದುದು ನೋಡಿ ಅವನಿಗೆ ಸಮಾಧಾನವಾಯ್ತು. ಅವರನ್ನು ಎಬ್ಬಿಸಲು ಅವನಿಗೆ ಮನಸ್ಸಾಗಲಿಲ್ಲ. ಅವರ ಕಾಲ ಕಡೆ ಇದ್ದ ಸ್ವಲ್ಪ ಜಾಗದಲ್ಲಿ ಕುಳಿತು ಅವರಿಗೆ ಎಚ್ಚರವಾಗುವುದನ್ನೇ ಕಾಯತೊಡಗಿದ.


**ಕೃಷ್ಣ ಅನುಪಮ**
ಜಲಜ ಜನರಲ್ ಮತ್ತು ಹೆರಿಗೆ ಆಸ್ಪತ್ರೆ, ಕವಲಕ್ಕಿ ಅಂಚೆ, ಹೊನ್ನಾವರ ತಾಲೂಕು, ಉ.ಕ. ಜಿಲ್ಲೆ - ೫೮೧ ೩೩೧


## ಪುಸ್ತಕ ಬಿಡುಗಡೆ ಸಮಾರಂಭ




**ನವಕರ್ನಾಟಕ ಪ್ರಕಾಶನ ಹಾಗೂ ದಿ ಗ್ರೀನ್ ಪಾತ್ ಸಂಸ್ಥೆ ಜಂಟಿಯಾಗಿ ಆಯೋಜಿಸಿದ್ದ ಸಮಾರಂಭವೊಂದರಲ್ಲಿ ಕೃಷಿ ತಜ್ಞ ನಾಡೋಜ ಡಾ|| ಎಲ್. ನಾರಾಯಣ ರೆಡ್ಡಿ ಅವರ ಬದುಕು - ಚಿಂತನೆಯನ್ನು ಪರಿಚಯಿಸುವ 'ನೆಲದೊಡಲ ಚಿಗುರು' ಎಂಬ ನವಕರ್ನಾಟಕ ಪ್ರಕಟಿಸಿರುವ ಪುಸ್ತಕವನ್ನು ಲೋಕಾರ್ಪಣೆ ಮಾಡಲಾಯಿತು. ನಗರದ ಕನ್ನಡ ಸಾಹಿತ್ಯ ಪರಿಷತ್ತಿನ ಆವರಣದಲ್ಲಿನ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ನಡೆದ ಈ ಸಮಾರಂಭದ ಅಧ್ಯಕ್ಷತೆಯನ್ನು ಪ್ರೊ|| ಎಸ್. ಜಿ. ಸಿದ್ಧರಾಮಯ್ಯ ಅವರು ವಹಿಸಿ ಕೃತಿಯ ಲೋಕಾರ್ಪಣೆ ನೆರವೇರಿಸಿದರು. ಶ್ರೀ ಜನಾರ್ದನ ಕೆಸರಗದ್ದೆ ಅವರು ಪುಸ್ತಕದ ಪರಿಚಯ ಮಾಡಿಕೊಟ್ಟರು. ವೇದಿಕೆಯಲ್ಲಿ ನಾಡೋಜ ಡಾ|| ಎಲ್. ನಾರಾಯಣ ರೆಡ್ಡಿ, ಕೃತಿಯ ಲೇಖಕದ್ವಯರಾದ ಶ್ರೀ ಎನ್. ಎಲ್. ಆನಂದ್ - ಶ್ರೀ ಗುಂಡಪ್ಪ ದೇವಿಕೇರಿ ಅಲ್ಲದೆ ಶ್ರೀಮತಿ ಚುಕ್ಕಿ ನಂಜುಂಡಸ್ವಾಮಿ, ಡಾ|| ಆರ್. ದ್ವಾರಕೀನಾಥ್ ಮುಂತಾದವರು ಉಪಸ್ಥಿತರಿದ್ದರು.**

## ಕವಿತೆ - ಕಳೆದು ಹೋಗಿದ್ದಾಳೆ




**ಕ**ವಿಗಳು...
ಕವಿತೆ ಬರೆದರು
ಚಂದ್ರ - ತಾರೆ
ಗುಲಾಬಿ - ಮಲ್ಲಿಗೆ,
ಮುಂಗಾರು ಮಳೆ - ಜಲಪಾತ
ಎಲ್ಲವನ್ನೂ ಕವನಿಸಿದರು.

ನಾನು -
ಇಲ್ಲಿ ಒಂಟಿ... ಒಬ್ಬಂಟಿ
ಕವಿತೆ ಕನ್ಯೆ ಮುನಿದು
ಅಗಲಿದ್ದಾಳೆ ನನ್ನ.

ಖಾಲಿ ಹಾಳೆ ಜಾಲ ಬೀಸಿ
ಕಾದಿರುವೆ
ಕವಿತೆ ಮೀನು ಹಿಡಿಯಲು.

ಕೊನೆಗೂ -
ಕವಿತೆ ಬರಲಿಲ್ಲ,
ಎದೆ ಕದ ತಟ್ಟಲಿಲ್ಲ.

ಹಾಗಾಗಿ ನಾನೀಗ...
ಸಂತೈಸುತ್ತಿದ್ದೇನೆ
ವಾಸ್ತವವಾದಿಯಾಗಿ
ಅದೇ ದಿನಚರಿಯ
''ಗೃಹಿಣಿ''ಯಾಗಿ !!


**ಶೋಭಾ ಪ್ರಮೋದ್**
ಮನ್‌ಗಾವ್, ರಾಯಗಢ ಜಿಲ್ಲೆ - ೪೦೨ ೧೦೪ ಮಹಾರಾಷ್ಟ್ರ

# ರಾಬರ್ಟ್ ಬ್ರೂಸ್ ಫೂಟ್: ಮೈಸೂರು ಭೂವಿಜ್ಞಾನದ ಪಿತಾಮಹ



ರಾಬರ್ಟ್ ಬ್ರೂಸ್ ಫೂಟ್ ಅವರನ್ನು ಮೈಸೂರು ಭೂವಿಜ್ಞಾನದ ಪಿತಾಮಹನೆಂದೇ ಕರೆಯಲಾಗುವುದು. ದೇಶಕ್ಕೆ ಸ್ವಾತಂತ್ರ್ಯ ಬರುವುದಕ್ಕೆ ಸರಿಯಾಗಿ ೧೦೧ ವರ್ಷಗಳ ಮುಂಚೆ ೨೪ನೇ ವಯಸ್ಸಿನ ಬ್ರೂಸ್ ಫೂಟ್ ಭಾರತಕ್ಕೆ ಬಂದ. ಆಗ ತಾನೇ ಥಾಮಸ್ ಓಲ್ಡ್ ಹಮ್‌ರ ನೇತೃತ್ವದಲ್ಲಿ ಕಲಕತ್ತಾದಲ್ಲಿ ಭಾರತೀಯ ಭೂವೈಜ್ಞಾನಿಕ ಸರ್ವೇಕ್ಷಣ (೧೮೫೧) ಸಂಸ್ಥೆಯನ್ನು ತೆರೆಯಲಾಗಿತ್ತು. ಬ್ರಿಟನ್‌ನಲ್ಲಿ ಆಯ್ಕೆಯಾದ ೧೨ ಯುವ ಭೂವಿಜ್ಞಾನಿಗಳನ್ನು ಭಾರತಕ್ಕೆ ಓಲ್ಡ್ ಹಮ್ ಕರೆದುಕೊಂಡು ಬಂದಿದ್ದರು. ಈ ೧೨ ಭೂವಿಜ್ಞಾನಿಗಳನ್ನು ಮೊದಲಿಗೆ ಭಾರತದ ಭೂನಕ್ಷೆ ತಯಾರಿಕೆಯ ಯೋಜನೆಯಲ್ಲಿ ತೊಡಗಿಸಲಾಯಿತು. ದುರಂತವೆಂದರೆ ಮೊದಲ ೨ ವರ್ಷಗಳಲ್ಲೇ ಮೂವರು ಭೂವಿಜ್ಞಾನಿಗಳು ಕಾಲರಾ ಮತ್ತು ಸೂರ್ಯಾಘಾತದಿಂದ ಸಾವನ್ನಪ್ಪಿದರು.

ಮದ್ರಾಸ್ ಪ್ರೆಸಿಡೆನ್ಸಿ ಕಡೆಗೆ ಬಂದ ಬ್ರೂಸ್ ಫೂಟ್ ಕೆಲವೇ ತಿಂಗಳುಗಳಲ್ಲಿ ಮದ್ರಾಸಿನ ಶ್ರೀಪೆರಮತ್ತೂರ್ ಹತ್ತಿರದ ಕ್ರಿಟೆಷಿಯಸ್ ಪದರುಗಳಲ್ಲಿ ಪಳೆಯುಳಿಕೆಗಳನ್ನು ಕಂಡುಹಿಡಿದರು. ದಕ್ಷಿಣ ಭಾರತದಲ್ಲೆಲ್ಲ ಓಡಾಡಿದ ಬ್ರೂಸ್ ಫೂಟ್ ಮತ್ತು ಆತನ ಸಹೋದ್ಯೋಗಿಗಳು ಸುಮಾರು ೫೮ ಸಾವಿರ ಚದರ ಮೈಲಿಗಳ ಪ್ರದೇಶವನ್ನು ಸಮೀಕ್ಷೆಗೆ ಒಳಪಡಿಸಿ ಹಲವು ರೀತಿಯ ಸಂಶೋಧನೆಗಳನ್ನು ಕೈಗೊಂಡು ಭಾರತದ ಭೂನಕ್ಷೆಗೆ ಹೊಸ ತಿರುವುಗಳನ್ನೇ ನೀಡಲು ನಾಂದಿ ಹಾಕಿದ್ದರು. ಆಗಿನ ಮೈಸೂರು ರಾಜರ ಆಳ್ವಿಕೆಯ ಪ್ರದೇಶದಲ್ಲಿ ಸಮೀಕ್ಷೆ ನಡೆಸಿ ಗ್ರಾನೈಟ್-ನೈಸ್, ಕಾಲಡಿಗಿ, ಭೀಮಾ ಬೋಗುಣಿಗಳು, ದಕ್ಕನ್ ಟ್ರ್ಯಾಪ್ ಶಿಲೆಗಳ ಮೇಲೆಲ್ಲ ಓಡಾಡಿ ಅವುಗಳ ವಯೋಮಾನ ಮತ್ತು ಅವುಗಳ ನಡುವಿನ ಸಂಬಂಧಗಳನ್ನು ಗುರುತಿಸಿದ್ದರು. ಬಳ್ಳಾರಿ, ರಾಯಚೂರು, ಕೋಲಾರ ಪ್ರದೇಶಗಳಲ್ಲೂ ಬ್ರೂಸ್ ಫೂಟ್ ಪುರಾತನ ಚಿನ್ನದ ಗುಂಡಿ/ಪುರಾತನ ಗಣಿಗಳನ್ನು ಪರೀಕ್ಷಿಸಿ ಆಧುನಿಕ ಚಿನ್ನದ ಗಣಿಗಳು ಪ್ರಾರಂಭವಾಗಲು ಅಡಿಪಾಯ ಹಾಕಿದರು. ಮುಂದೆ ಕೋಲಾರ ಮತ್ತು ಹಟ್ಟಿ ಚಿನ್ನದ ಗಣಿಗಳು ವಿಶ್ವ ವಿಖ್ಯಾತ ಗಣಿಗಳಾದವು.

೨೨.೦೯.೧೮೫೮ರಲ್ಲಿ ಜಿಎಸ್‌ಐಗೆ ಸೇರಿಕೊಂಡ ಬ್ರೂಸ್ ಫೂಟ್ ೩೩ ವರ್ಷಗಳ ಕಾಲ ವೃತ್ತಿ ಮಾಡಿ, ಕರ್ನಾಟಕದ ಧಾರವಾಡ ಕ್ರೆಟಾನ್ (ಪೀಠಭೂಮಿ) ಕಾಲಡಿಗಿ, ಭೀಮಾಸ್ ಎಂಬ ಹೆಸರುಗಳನ್ನು ಮೊದಲಿಗೆ ಕೊಟ್ಟವರೂ ಬ್ರೂಸ್ ಫೂಟ್ ಅವರೆ. ಮೈಸೂರಿನ ವೈವಿಧ್ಯಮಯ ಖನಿಜ ಮತ್ತು ಶಿಲೆಗಳನ್ನು ಗುರುತಿಸಿ ನೂರಾರು ಲೇಖನಗಳು ಮತ್ತು ವೃತ್ತಾಂತಗಳನ್ನು ಬರೆದು ಪ್ರಕಟಿಸಿ ಕರ್ನಾಟಕದ ಭೂವಿಜ್ಞಾನವನ್ನು ಪ್ರಪಂಚಕ್ಕೆ ಪರಿಚಯಿಸಿದರು. ಮದ್ರಾಸ್, ನಿಜಾಮ್ ಮತ್ತು ಮೈಸೂರು ಪ್ರಾಂತ್ಯಗಳಲ್ಲಿ ಕೆಲಸ ಮಾಡಿದ ಫೂಟ್ ೧೮೯೧ರಲ್ಲಿ ಜಿಎಸ್‌ಐನಿಂದ ನಿವೃತ್ತಿ ಹೊಂದಿದರು. ಅನಂತರ ೩ ವರ್ಷಗಳ ಕಾಲ ಮೈಸೂರಿನ ಗಣಿ ಮತ್ತು ಭೂವಿಜ್ಞಾನ ವಿಭಾಗದ ನಿರ್ದೇಶಕರಾಗಿ ಮೈಸೂರು ಸಂಸ್ಥಾನದಲ್ಲಿ ಕೆಲಸ ನಿರ್ವಹಿಸಿದರು. ಆದಾದ ಮೇಲೆ ೨ ವರ್ಷ ಕಾಲ ಬರೋಡದಲ್ಲಿ ಕೆಲಸ ನಿರ್ವಹಿಸಿ ಕಲಕತ್ತಾಗೆ ಹಿಂದಿರುಗಿದರು.

**ಪುರಾತತ್ವಶಾಸ್ತ್ರದ ತಜ್ಞ**

ಬ್ರೂಸ್ ಫೂಟ್ ಒಬ್ಬ ಅಸಾಧಾರಣ ಭೂವಿಜ್ಞಾನಿಯಲ್ಲದೆ ಬಹು ದೊಡ್ಡ ಪುರಾತತ್ವಶಾಸ್ತ್ರಜ್ಞರೂ ಕೂಡ ಆಗಿದ್ದರು. ೧೯ನೇ ಶತಮಾನದಲ್ಲಿ ಯಾರೇ ಬುದ್ಧಿವಂತರು ತಮಗೆ ಇಷ್ಟವಾದ ಕೆಲಸದಲ್ಲಿ ತೊಡಗಿಕೊಳ್ಳುವ ಅವಕಾಶಗಳಿದ್ದವು. ಹಾಗಾಗಿ ಈತ ತನಗೆ ಇಷ್ಟವಾದ ಹಲವಾರು ಸಂಶೋಧನೆಗಳಲ್ಲಿ ತೊಡಗಿಕೊಂಡು ತನ್ನ ಅದ್ಭುತ ಪ್ರತಿಭೆಯಿಂದ ತಾನು ಕೈಗೊಂಡ ಸಂಶೋಧನೆಗಳನ್ನು ಉತ್ಕೃಷ್ಟ ಶ್ರೇಣಿಗೆ ತಂದು ನಿಲ್ಲಿಸಿದ. ಬ್ರೂಸ್ ಫೂಟ್‌ಗಿಂತ ಎಷ್ಟೋ ವರ್ಷಗಳ ಮುಂಚೆ ರೆವರೆಂಡ್ ಪೆಟರ್ ಪೆರ್ಸಿವೆಲ್ ಎಂಬುವರು ಮದ್ರಾಸಿಗೆ ಬಂದು ನೆಲೆಸಿದ್ದರು. ಪೆಟರ್ ಪೆರ್ಸಿವೆಲ್ ಅಗಾಧ ಪಂಡಿತನಾಗಿದ್ದು ಮದ್ರಾಸಿನಲ್ಲಿ ತಮಿಳು ಮತ್ತು ತೆಲುಗು ಭಾಷೆಗಳನ್ನು ಕಲಿತು ಬೈಬಲ್‌ಅನ್ನು ಭಾಷಾಂತರ ಮಾಡಿದ್ದಲ್ಲದೆ ವೇದಗಳನ್ನು ಸಹ ಇಂಗ್ಲಿಷಿಗೆ ಅನುವಾದ ಮಾಡಿದ್ದರು ಜೊತೆಗೆ ಸಾಲದ್ದಕ್ಕೆ ತಮಿಳು ಮತ್ತು ತೆಲುಗು ಪತ್ರಿಕೆಗಳನ್ನು ಮುದ್ರಿಸುತ್ತಿದ್ದರು. ಈತನ ಮಗಳಾದ ಎಲಿಜಬೆತ್ ಅನ್ನಾಳನ್ನು ಬ್ರೂಸ್ ಫೂಟ್ ಮದುವೆಯಾದರು.

ನಾಲ್ಕು ಮಕ್ಕಳನ್ನು ಹೆತ್ತ ಎಲಿಜಬೆತ್ ಅನಿರೀಕ್ಷಿತವಾಗಿ ತೀರಿಕೊಂಡಾಗ ಕೊನೆಯ ಮಗುವಿಗೆ ಕೇವಲ ಒಂದು ವರ್ಷ. ತನ್ನ ವೃತ್ತಿಯಿಂದ ನಿಂತ ಕಡೆ ನಿಲ್ಲದೆ ಓಡಾಡುತ್ತಿದ್ದ ಕಾರಣ ಬ್ರೂಸ್ ಫೂಟ್ ಮೊದಲನೇ ಪತ್ನಿಯ ಮಕ್ಕಳನ್ನು ನೋಡಿಕೊಳ್ಳಲು ಎಲಿಜಾ ವೆಲ್ಸ್‌ಳನ್ನು ಮದುವೆ ಮಾಡಿಕೊಳ್ಳಬೇಕಾಯಿತು. ಬ್ರೂಸ್‌ರ ದುರಂತವೆಂದರೆ ಎಲಿಜಾ ವೆಲ್ಸ್‌ಗೆ ನಾಲ್ಕು ಮಕ್ಕಳಾಗಿ ಆಕೆಯೂ ಮರಣ ಹೊಂದಿದಳು. ಎರಡನೇ ಪತ್ನಿಯ ಕೊನೆ ಮಗಳಾದ ವೈಲೆಟ್ ಅನ್ನಾ ಹುಟ್ಟಿದ್ದು ಹೊಸಪೇಟೆ ಹತ್ತಿರದ ದರೋಜಿ ಕರಡಿಧಾಮದ ಬಂಗಲೆಯಲ್ಲಿ. ಬ್ರೂಸ್ ಫೂಟ್ ಇದೇ ಸಮಯದಲ್ಲಿ ಹಂಪಸಾಗರದ ಎದುರಿಗೆ ತುಂಗಭದ್ರಾ ನದಿ ದಡಗಳಲ್ಲಿ ಆದಿಮಾನವ ರೂಪಿಸಿದ್ದ ವೃತ್ತಾಕಾರದ ಕಲ್ಲು ಮಸಣಗಳಲ್ಲಿ ಸಂಶೋಧನೆ ನಡೆಸುತ್ತಿದ್ದರು.

ಬ್ರೂಸ್ ಫೂಟ್ ಪಲ್ಲವರಂನಲ್ಲಿ ಸಂಶೋಧನೆ ನಡೆಸಿ ಶಿಲಾಯುಗದ ಮಾನವ ಉಪಯೋಗಿಸುತ್ತಿದ್ದ ಶಿಲಾಯುಧಗಳನ್ನು ಕಂಡುಹಿಡಿದರು. ಅನಂತರ ವಿಲಿಯಂ ಕಿಂಗ್ ಜೊತೆಗೆ ಫೂಟ್ ಈಗಿನ ಆಂಧ್ರಪ್ರದೇಶದ ಬೆಲ್ಲಂ ಗುಹೆಗಳನ್ನು ಕಂಡು ಹಿಡಿದಿದ್ದರು. ಈ ಗುಹೆಗಳಲ್ಲಿ ಉತ್ಖನನ ನಡೆಸಲು ತನ್ನ ಮೊದಲ ಪತ್ನಿಯ ದೊಡ್ಡ ಮಗನಾದ ಹೆನ್ರಿ ಬ್ರೂಸ್ ಫೂಟ್‌ನನ್ನು ನೇಮಿಸಲಾಯಿತು. ಆತ ಅತ್ಯಂತ ಗುರುತರವಾದ ಕೆಲಸ ಮಾಡಿ ಹತ್ತಾರು ಗುಹೆಗಳಲ್ಲಿ ಸಾವಿರಾರು ಆದಿಮಾನವನ ತಲೆಬುರುಡೆ, ಎಲುಬುಗಳು ಮತ್ತು ಪುರಾತನ ಸಲಕರಣೆಗಳನ್ನು ಹೊರ ತೆಗೆದು, ದಕ್ಷಿಣ ಭಾರತದಲ್ಲಿ ಆದಿಮಾನವ ಜೀವಿಸಿದ್ದನ್ನು ದೃಢಪಡಿಸಿಬಿಟ್ಟಿದ್ದ. ಹೀಗೆ ಫೂಟ್ ಮತ್ತು ಆತನ ಮಗ ಹೆನ್ರಿ ಭಾರತದ ಪುರಾತತ್ವಶಾಸ್ತ್ರದ ಮುಖವನ್ನೇ ಬದಲಿಸಿಬಿಟ್ಟಿದ್ದರು.

೧೮೯೨ರಲ್ಲಿ ಬರೋಡಾ ಹತ್ತಿರ ಬ್ರೂಸ್ ಫೂಟ್ ಮತ್ತು ಆತನ ಕೊನೆಯ ಮಗಳಾದ ವೈಲೆಟ್ ಅನ್ನಾ ಇಬ್ಬರೂ ಸೇರಿ ಪುರಾತತ್ವ ಶೋಧನೆ ನಡೆಸಿ ಆದಿಮಾನವ ಉಪಯೋಗಿಸುತ್ತಿದ್ದ ನೂರಾರು ಸಲಕರಣೆಗಳನ್ನು ಹೆಕ್ಕಿ ತೆಗೆದಿದ್ದರು. ಎತ್ತಿನ ತಲೆ, ಸುತ್ತಿಗೆ ಕಲ್ಲು, ಶಿಲಾಯುಧಗಳು, ಮಡಿಕೆ-ಕುಡಿಕೆ, ರುಬ್ಬುಕಲ್ಲುಗಳನ್ನು ತೆಗೆಯಲಾಯಿತು. ಬ್ರೂಸ್ ಫೂಟ್‌ರ ಇನ್ನೊಬ್ಬ ಮಗಳಾದ ರೂಬಿ, ಕೋಲಾರ ಚಿನ್ನದ ಗಣಿಗಳಲ್ಲಿ ಮೇಲಧಿಕಾರಿಯಾಗಿದ್ದ ವಿಲಿಯಂ ಪ್ರಿಚರ್ಡ್‌ರನ್ನು ಮದುವೆಯಾಗಿದ್ದಳು. ಪ್ರಿಚರ್ಡ್ ಗಣಿಗಳ ಹತ್ತಿರದ ವಲಗಮಾದಿ ಹಳ್ಳಿಯ ದಿಬ್ಬ ಒಂದರಲ್ಲಿ ಸಿಕ್ಕಿದ ಕೆಂಪು ಮಡಿಕೆ (ಬಟನ್ ತುಟಿಗಳಿದ್ದ) ಯನ್ನು ಸಂಗ್ರಹಿಸಿ ಬ್ರೂಸ್ ಫೂಟ್‌ಗೆ ಕೊಡುಗೆಯಾಗಿ ನೀಡಿದ್ದ.

ಹೀಗೆ ದೇಶದ ಹಲವಾರು ಭಾಗಗಳಿಂದ ಉತ್ಖನನ ಮಾಡಿ ಸಂಗ್ರಹಿಸಿದ್ದ ವಿಧವಿಧವಾದ ಆದಿಮಾನವರ ಎಲುಬುಗಳು ಮತ್ತು ಅವರು ಉಪಯೋಗಿಸುತ್ತಿದ್ದ ಸಲಕರಣೆಗಳು ಮತ್ತು ಖನಿಜ/ಶಿಲೆಗಳು ಬ್ರೂಸ್ ಫೂಟ್‌ರ ಸಂಗ್ರಹದಲ್ಲಿದ್ದವು. ಈ ಅತ್ಯಮೂಲ್ಯವಾದ ಸಂಗ್ರಹವನ್ನು ಜರ್ಮನ್ ದೇಶ ಸಾವಿರಾರು ರೂಪಾಯಿಗಳಿಗೆ ಕೇಳಿದರೂ ಬ್ರೂಸ್ ಫೂಟ್ ಕೊಡಲಿಲ್ಲ, ಅವೆಲ್ಲ ಭಾರತದಲ್ಲೇ ಇರಬೇಕಾದ ವಸ್ತುಗಳೆಂದು, ಅವುಗಳನ್ನೆಲ್ಲ ಕಲಕತ್ತಾದ ರಾಷ್ಟ್ರೀಯ ಸಂಗ್ರಹಾಲಯದಲ್ಲಿ ಇಡಲಾಯಿತು. ದೂರದ ಬ್ರಿಟನ್‌ನಿಂದ ಭಾರತಕ್ಕೆ ಬಂದು ನೆಲೆಸಿ ಭಾರತದ ಭೂವಿಜ್ಞಾನ ಮತ್ತು ಪುರಾತತ್ವ ಶಾಸ್ತ್ರವನ್ನು ಪ್ರಪಂಚದ ಕಣ್ಣಿನಲ್ಲಿ ಮೂಡಿಸಿದ ಶ್ರೇಯಸ್ಸು ಬ್ರೂಸ್ ಫೂಟ್ ಅಲ್ಲದೆ ಆತನ ಕುಟುಂಬಕ್ಕೂ ಸೇರುತ್ತದೆ. ಡಿಸೆಂಬರ್ ೨೯, ೧೮೧೨ರಲ್ಲಿ ಕಲಕತ್ತಾದಲ್ಲಿ ಪ್ರಾಣತ್ಯಾಗ ಮಾಡಿದ ರಾಬರ್ಟ್ ಬ್ರೂಸ್ ಫೂಟ್‌ರ ಭೂವಿಜ್ಞಾನ ಮತ್ತು ಪುರಾತತ್ವಶಾಸ್ತ್ರದ ಕೊಡುಗೆಯ ನೆನಪಿನಲ್ಲಿ ಒಂದು ದಿನದ ಕಾರ್ಯಾಗಾರವನ್ನು ಬೆಂಗಳೂರಿನ ಜಿಎಸ್‌ಐ ಕಛೇರಿಯಲ್ಲಿ ಅದೇ ದಿನ ನಡೆಸಲಾಯಿತು.

**ಡಾ|| ಎಂ. ವೆಂಕಟಸ್ವಾಮಿ**

ಭೂವಿಜ್ಞಾನಿ, ನಂ. ೫೧೯, ೩ನೇ ಬ್ಲಾಕ್, ಸಿಪಿಡಬ್ಲ್ಯೂ 'ಡಿ' ಕ್ವಾರ್ಟರ್ಸ್ ಎಚ್.ಎಸ್.ಆರ್. ಲೇಔಟ್, ಬೆಂಗಳೂರು - ೫೬೦ ೧೦೨

# ಸಾವಿನ ಮನೆಗಳು ಈ ಪರಮಾಣು ಸ್ಥಾವರಗಳು

ಎನ್. ಆರ್. ಪಾಟೀಲ



**ಕ**ಸ.....ಕಸ.....ಕಸ..........

ಬೆಂಗಳೂರು ನಗರಾದ್ಯಂತ ಎರ್ರಾಬಿರ್ರಿಯಾಗಿ ಬಿದ್ದಿದ್ದ ಕಸ ಅಂತರರಾಷ್ಟ್ರೀಯ ಮಟ್ಟದಲ್ಲಿ ಸುದ್ದಿ ಮಾಡಿದ್ದ ಬೆನ್ನಲ್ಲೇ ಈಗ ಇನ್ನೊಂದು ಕಸ ಸುದ್ದಿ ಮಾಡುತ್ತಲಿದೆ. ಅದೇ ಪರಮಾಣು ಕಸ. ಈಗ ತಮಿಳುನಾಡಿನ ಕೂಡಂಕುಳಂನಲ್ಲಿ ಸ್ಥಾಪಿಸಲಿರುವ ಅಣುಸ್ಥಾವರದ ಪರಮಾಣು ಕಸವನ್ನು ಕರ್ನಾಟಕದ ಬಂಗಾರದ ಭೂಮಿ ಕೋಲಾರದಲ್ಲಿ ತುಂಬಿಸಿಡಲು ಪ್ರಯತ್ನ ನಡೆಸಿದ್ದು ತೀವ್ರ ಪ್ರತಿಭಟನೆಗೊಳಗಾಗಿದೆ. ಪರಮಾಣು ಕಸ ಪರಮಾಣು ಬಾಂಬಿಗಿಂತಲೂ ಭಯಾನಕವಾದುದು. ಪರಮಾಣು ಬಾಂಬ್ ಜನ-ಜೀವನವನ್ನು ಕ್ಷಣಮಾತ್ರದಲ್ಲಿ ನಿರ್ನಾಮ ಮಾಡಿದರೆ, ಆ ಬಾಂಬ್ ತಯಾರಿಕಾ ಪ್ರಕ್ರಿಯೆಯಲ್ಲಿ ಹೊರಬರುವ ಪರಮಾಣು ಕಸ ಸುಮಾರು ೧.೨೦ ಲಕ್ಷ ವರ್ಷಗಳಿಂದ ೨ ಲಕ್ಷ ವರ್ಷಗಳವರೆಗೆ ತನ್ನ ಸಂಪರ್ಕಕ್ಕೆ ಬಂದವರೆಲ್ಲರನ್ನೂ ತನ್ನ ವಿಕಿರಣಗಳ ಮೂಲಕ ಅವರಿಗೆ ಗೊತ್ತಿಲ್ಲದಂತೇ ನಿಧಾನವಾಗಿ ಕೊಲ್ಲುತ್ತಲೇ ಇರುತ್ತದೆ! ಅಂದರೆ ಪರಮಾಣು ತ್ಯಾಜ್ಯ ತನ್ನ ವಿಕಿರಣ ಶಕ್ತಿ ಕಳೆದುಕೊಳ್ಳಲು ಲಕ್ಷ ಲಕ್ಷ ವರ್ಷಗಳು ಬೇಕು! ಅಷ್ಟು ವರ್ಷಗಳವರೆಗೆ ಅದರ ವಿಕಿರಣಗಳನ್ನು ಯಶಸ್ವಿಯಾಗಿ ತಡೆಹಿಡಿಯುವ ಯಾವುದೇ ಪ್ರಯತ್ನಗಳು ಇನ್ನೂ ಫಲ ನೀಡಿಲ್ಲ. ವಿದ್ಯುತ್‌ಗಾಗಿ ನಿರ್ಮಿಸಿರುವ ಅಣುಸ್ಥಾವರಗಳದೂ ಇದೇ ಭಯಾನಕ ರೂಪ. ಅವು ಬೆಳಕು ನೀಡುವುದು ಎಷ್ಟು ಸತ್ಯವೋ ಅವು 'ಸರಣಿ ಕೊಲೆಯ ತಾಣಗಳು' ಎಂಬುದೂ ಅಷ್ಟೇ ಸತ್ಯ. ಅದನ್ನು ಅರಿತೇ 'ಪ್ರಾಣ ಬಿಟ್ಟೇವು. ಆದರೆ ಇಲ್ಲಿ ಪರಮಾಣು ಕಸ ಸುರಿಯಲು ಬಿಡೆವು' ಎನ್ನುತ್ತಿದ್ದಾರೆ ಕೋಲಾರದ ಜನ. ಪರಮಾಣು ಕಸ ವಿಲೇವಾರಿಯ ಸುರಕ್ಷತೆಯ ಅವಶ್ಯಕತೆಯನ್ನು ಕುರಿತು ಇನ್ನೊಮ್ಮೆ ಚರ್ಚೆಗಳು ನಡೆಯಲು ಇದು ಸಕಾಲ.

**ಸಾವಿನ ಮನೆಗಳು**

ಅಣುಸ್ಥಾವರಗಳ ಸ್ಥಾಪನೆ ಆಯಾ ದೇಶಗಳ ಪ್ರತಿಷ್ಠೆಯ ವಿಷಯವಾದ ಕಾಲವೊಂದಿತ್ತು. ದೇಶದ ಪ್ರಗತಿಗೆ ಪೂರಕ ಎಂದೇ ಭಾವಿಸಲಾಗಿದ್ದ ಈ ಸ್ಥಾವರಗಳು 'ಸಾವಿನ ಮನೆಗಳು' ಎಂಬುದು ತಿಳಿದಾಗ ತುಂಬ ತಡವಾಗಿತ್ತು. ಅಣುಸ್ಥಾವರಗಳ ಬಗೆಗೆ ಹೇಳುವಾಗ ಮೊದಲು ನೆನಪಾಗುವ ದೇಶ ಅಮೆರಿಕ. ೧೯೩೦ರಲ್ಲೇ ಅಣುಸ್ಥಾವರಗಳನ್ನು ಸ್ಥಾಪಿಸಿದ ಅಮೆರಿಕ, ವಿಕಿರಣ ಧಾತು ಯುರೇನಿಯಮ್ ಅದಿರನ್ನು ಪರಿಷ್ಕರಿಸಿ ಅದನ್ನು ಬಾಂಬನ್ನಾಗಿ ಪರಿವರ್ತಿಸುವ ಕಾರ್ಯದಲ್ಲಿ ತನ್ನ ಅಣುಸ್ಥಾವರಗಳನ್ನು ತೊಡಗಿಸಿತು. ಈ ಕ್ರಿಯೆಯಲ್ಲಿ ಹೊರಡುವ ವಿಕಿರಣಗಳು ಅಣುಸ್ಥಾವರದ ಸುತ್ತಮುತ್ತಲಿನ ಜನರಿಗೆ ಮಾರಕವಾಗಿ ಪರಿಣಮಿಸಿದವು. ಅಲ್ಲಿಯ ಜನ ಸುಲಭವಾಗಿ ಕ್ಯಾನ್ಸರ್ ರೋಗಕ್ಕೆ ಬಲಿಯಾಗತೊಡಗಿದರು. ಇದು ಅಣುಸ್ಥಾವರದ ವಿನಾಶಕ ರೂಪವಾದರೆ, ಅಣುಶಕ್ತಿ ಉತ್ಪಾದನೆಯಲ್ಲಿ ಉಳಿಯುವ ವಿಕಿರಣಯುಕ್ತ ಪರಮಾಣು ತ್ಯಾಜ್ಯ ತನ್ನ ಸುತ್ತಮುತ್ತಲಿನ ಅದೆಷ್ಟೋ ಮುಗ್ಧ ಜನರನ್ನು ಸಾಯಿಸಿದೆ-ಸಾಯಿಸುತ್ತಿದೆ ಎಂಬುದು ತುಂಬ ತಡವಾಗಿ ಮೂರು ದಶಕಗಳ ನಂತರ ೧೯೯೦ರಲ್ಲಿ ತಿಳಿದುಬಂತು. ಮೂರು ದಶಕಗಳ ಉದ್ದಕ್ಕೂ ಸತತವಾಗಿ ಹೊರಹಾಕಿದ ತ್ಯಾಜ್ಯಗಳು ಹೊರಸೂಸುವ ವಿಕಿರಣಗಳಿಂದ ಸುತ್ತಲಿನ ಸಸ್ಯ ಸಂಪತ್ತು, ಜಲರಾಶಿಯೂ ಮಲಿನಗೊಂಡಿತ್ತು. ಆಗ 'ಟೈಮ್ಸ್' ಪತ್ರಿಕೆ ಹೀಗೆ ಬರೆಯಿತು : 'ಅಣುಸ್ಥಾವರಗಳಿಗೆ ಅಣ್ವಸ್ತ್ರಗಳನ್ನು ತಯಾರಿಸುವುದೇ ಮುಖ್ಯಗುರಿ. ಪ್ರಜೆಗಳ ಆರೋಗ್ಯದತ್ತ ಕಿಂಚಿತ್ತೂ ಗಮನವಿಲ್ಲ. ಈಗ ಅಮೆರಿಕದ ನದಿ-ಕೊಳ್ಳಗಳಿಗೆ ಅಪಾರ ಪ್ರಮಾಣದಲ್ಲಿ ವಿಕಿರಣಯುಕ್ತ ವಿಷಕಾರಿ ತ್ಯಾಜ್ಯ ಸೇರುತ್ತಲಿದ್ದು ಹಲವಾರು ಜನರು ಕ್ಯಾನ್ಸರ್ ಹಾಗೂ ಅಂಗವಿಕಲತೆಗೆ ಬಲಿಯಾಗಿದ್ದಾರೆ. ಮುಂದಿನ ಪೀಳಿಗೆಯ ಮೇಲೂ ಇದು ದುಷ್ಪರಿಣಾಮ ಬೀರುತ್ತದೆ.' ಇದು ಕೇವಲ ಅಮೆರಿಕಾದ ಅಣುಸ್ಥಾವರಗಳ ಸಮಸ್ಯೆಯಲ್ಲ. ಜಗತ್ತಿನ ಎಲ್ಲ ದೇಶಗಳ ಪರಮಾಣು ಸ್ಥಾವರಗಳಿಂದ ಹಾಗೂ ಅದರ ತ್ಯಾಜ್ಯದಿಂದ ಹೊರಡುವ ವಿಕಿರಣಗಳು ಸಾವಿನ ಸರಮಾಲೆಯನ್ನೇ ಸೃಷ್ಟಿಸುತ್ತಲಿವೆ. ಅಮೆರಿಕಾದ 'ಹಾನ್‌ಫರ್ಡ್' ಪರಮಾಣು ಸ್ಥಾವರದ ಬಳಿ ಹಾದುಹೋಗುವ ಹಾದಿಗೆ ಅಲ್ಲಿಯ ಜನರು 'ಸಾವಿನ ಹಾದಿ' ಎಂದೇ ಹೆಸರಿಟ್ಟಿದ್ದಾರೆ.

ಈಗ 'ಅಣುಸ್ಥಾವರಗಳು ಸುರಕ್ಷಿತ' ಎಂಬ ಮಾತೇ ಹಾಸ್ಯಾಸ್ಪದವಾಗಿದೆ. ಈ ಸ್ಥಾವರಗಳು ಹೊರಹಾಕುವ ವಿಕಿರಣಗಳು ತಮ್ಮ ಸುತ್ತಲಿನ ೨೦-೨೫ ಮೈಲು ವಿಸ್ತಾರದ ಜನರಿಗೆ ಭಯಾನಕ ಬದುಕು ನೀಡಿವೆ. ಬ್ರಿಟನ್ನಿನ 'ಸೆಲ್ಲಾಫಿಲ್' ಅಣುಸ್ಥಾವರ ಸಾವಿನ ಸರಮಾಲೆಯನ್ನೇ ಸೃಷ್ಟಿಸಿದೆ. ಈ ಸ್ಥಾವರದ ವಿಕಿರಣಗಳನ್ನು ಕುಡಿದು ಇಡೀ ಐರಿಷ್ ಸಮುದ್ರವೇ ವಿಷಮಯವಾಗಿದೆ. ಅಣುಸ್ಥಾವರಗಳು ಎಂತಹ ಭಯಾನಕ ದುರಂತಗಳನ್ನು ಸೃಷ್ಟಿಸುತ್ತವೆ ಎಂಬುದಕ್ಕೆ ರಷ್ಯಾದ ಚೆರ್ನೋಬಿಲ್ ಅಣುಸ್ಥಾವರದ ದುರಂತ ಒಂದು ಉತ್ತಮ ಉದಾಹರಣೆ. ಈ ಸ್ಥಾವರ ಸ್ಫೋಟಗೊಂಡಾಗ ಸಾವಿರಾರು ಮೈಲು ದೂರದಲ್ಲಿರುವ ಸ್ವೀಡನ್ ಕೂಡ ತೊಂದರೆಗೊಳಗಾಗಿತ್ತು. ಅಂದರೆ ಪರಮಾಣು ಸ್ಥಾವರಗಳು ಹಾಗೂ ಅವುಗಳ ತ್ಯಾಜ್ಯಗಳು ಎಲ್ಲಿಯೇ ದುರಂತವನ್ನು ಸೃಷ್ಟಿಸಿದರೂ ಅದು ನಮ್ಮನ್ನು ಪೊರೆಯುತ್ತಿರುವ ಭೂಮಂಡಲಕ್ಕೇ ಹಾನಿಕರ ಎಂಬುದನ್ನು ಮರೆಯಬಾರದು. ವಿಜ್ಞಾನಿಗಳು ಹೇಳುವಂತೆ ಪರಮಾಣು ವಿದ್ಯುತ್ ಉತ್ಪಾದನೆಯಲ್ಲಿ ಕಾರ್ಯನಿರತರಾದವರು ಮತ್ತು ಅದರ ಸುತ್ತಮುತ್ತಲಿನ ಜನ ಹಾಗೂ ಅದರ ತ್ಯಾಜ್ಯವನ್ನು ಸಂಗ್ರಹಿಸಿಟ್ಟ ತಾಣದ ಸುತ್ತಲಿನ ಜನರು ಪರಮಾಣು ವಿಕಿರಣಗಳಿಂದ ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ. ವೈಜ್ಞಾನಿಕ ಸತ್ಯವೆಂದರೆ ತ್ಯಾಜ್ಯದ ಗುಣಲಕ್ಷಣವೇ ವಿಕಿರಣಗಳನ್ನು ಹೊರಸೂಸುವುದು! ಈ ಪ್ರಕ್ರಿಯೆ, ಇದು ಸಹಸ್ರಾರು ವರ್ಷಗಳವರೆಗೆ ಕ್ರಿಯಾಶೀಲವಾಗಿರುತ್ತದೆ. ಪ್ರತಿಯೊಂದು ಯುರೇನಿಯಂ ಅಥವಾ ಪ್ಲುಟೋನಿಯಂ ಪರಮಾಣುವನ್ನು ವಿಭಜಿಸಿದಾಗಲೂ ಅಗಾಧ ಶಕ್ತಿ ಬಿಡುಗಡೆ ಆಗುತ್ತದೆ ಅದರೊಂದಿಗೆ ಪರಮಾಣು ಕಸವೂ ಹೊರಬರುತ್ತದೆ. ಮಾನವರಲ್ಲಿ ೫೦೦೦ ಮಿಲಿ ಆರ್.ಇ.ಎಮ್. ವಿಕಿರಣಗಳನ್ನು ತಾಳಿಕೊಳ್ಳುವ ಶಕ್ತಿಯಿದೆ. ಆದರೆ ಅಣುಸ್ಥಾವರ ಹಾಗೂ ಪರಮಾಣು ಕಸ ಹೊರಸೂಸುವ ವಿಕಿರಣಗಳು ಇದಕ್ಕಿಂತಲೂ ತುಂಬ ತುಂಬ ಹೆಚ್ಚು. ಇನ್ನೊಂದು ಭಯಾನಕ ಸಂಗತಿ ಎಂದರೆ ಈ ವಿಕಿರಣಗಳನ್ನು ಇಲ್ಲದಂತೆ ಮಾಡುವ, ಇಲ್ಲವೆ ಕಡಿಮೆ ಮಾಡುವ ಯಾವುದೇ ರಾಸಾಯನಿಕ ಪ್ರಕ್ರಿಯೆ ಇಂದಿಗೂ ಯಶಸ್ವಿಯಾಗಿಲ್ಲ. ವಿಕಿರಣ ಸೋರದಂತೆ ತಡೆಹಿಡಿಯುವ ಯಾವುದೇ ಕೃತಕ ವ್ಯವಸ್ಥೆಯ ನಿರ್ಮಾಣ, ಅಣುಸ್ಥಾವರಗಳು ಆರಂಭವಾಗಿ ೬೩ ವರ್ಷಗಳು ಮುಗಿಯುತ್ತ ಬಂದರೂ ಇನ್ನೂ ಸಾಧ್ಯವಾಗಿಲ್ಲ. ಅಂಥದೇ ಮತ್ತೊಂದು ಭಯಾನಕ ಸಂಗತಿಯೆಂದರೆ ಪರಮಾಣು ಕಸವು ಬೇರಾವುದೇ ರಾಸಾಯನಿಕ ತ್ಯಾಜ್ಯಕ್ಕಿಂತ ಭಿನ್ನವಾಗಿದ್ದು ಹೆಚ್ಚು ಅಪಾಯಕಾರಿಯಾಗಿದೆ.

'ಅಣು ತ್ಯಾಜ್ಯಗಳ ವಿಕಿರಣಗಳಿಂದ ಮೂಳೆ, ರಕ್ತದ ಕ್ಯಾನ್ಸರ್ ಉಂಟಾಗುತ್ತದೆ. ಜೊತೆಗೆ ಅವು ಆನುವಂಶಿಕವಾದ ಕಾಯಿಲೆಗಳನ್ನು ಹರಡುವಷ್ಟು ವಿನಾಶಕಾರಿ. ನಾವು ತಾಂತ್ರಿಕವಾಗಿ ಅಣು ವಿಕಿರಣಗಳ ಪರಿಣಾಮಗಳನ್ನು ಸಮರ್ಥವಾಗಿ ಎದುರಿಸುವಷ್ಟು ಮುಂದುವರಿದಿಲ್ಲ.' ಎನ್ನುತ್ತಾರೆ ಚಿತ್ರನಟ-ಪರಿಸರವಾದಿ ಸುರೇಶ ಹೆಬ್ಳೀಕರ್. ಹೌದು! ಈ ವಿಕಿರಣಗಳು ಮನುಕುಲದ ಮೇಲೆ ಎರಡು ತೆರನಾದ ಹಾನಿ ಉಂಟುಮಾಡುತ್ತವೆ. ಒಂದು ಶಾರೀರಿಕ ಹಾನಿಯಾದರೆ, ಇನ್ನೊಂದು ಆನುವಂಶಿಕ ಹಾನಿ. ಪರಮಾಣು ತ್ಯಾಜ್ಯ ವಿಕಿರಣಗಳು ದೇಹ ಸೇರಿ

ಅಲ್ಲಿಯ ಜೀವಾಣುಗಳನ್ನು ನಾಶಮಾಡಿ ದೇಹವನ್ನು ರೋಗಗಳ ಗೂಡಾಗಿಸುತ್ತವೆ. ಈ ವಿಕಿರಣಗಳ ಪರಿಣಾಮ ಒಮ್ಮೆ ನಮ್ಮ ದೇಹದ ಮೇಲಾದರೆ ಅವು ನಮ್ಮಿಂದ ಜನಿಸುವ ಭವಿಷ್ಯತ್ತಿನ ಪೀಳಿಗೆಯಲ್ಲಿ ಸುಮಾರು ೫ ತಲೆಮಾರುಗಳ ವರೆಗೆ ಇರುತ್ತದೆ ಎನ್ನುತ್ತಾರೆ ತಜ್ಞರು.

**ಬೃಹತ್ ಸಮಸ್ಯೆ**

ಜಗತ್ತಿನಲ್ಲಿ ಅಣುಸ್ಥಾವರಗಳ ಸ್ಥಾಪನೆ ಆದಾಗಿನಿಂದಲೂ ಪರಮಾಣು ತ್ಯಾಜ್ಯ ವಿಲೇವಾರಿ ಒಂದು ಬೃಹತ್ ಸಮಸ್ಯೆಯಾಗಿಯೇ ಉಳಿದುಕೊಂಡು ಬಂದಿದೆ. ಪರಮಾಣು ಸ್ಥಾವರಗಳು ಆರಂಭವಾದಾಗಿನಿಂದಲೂ ಪರಮಾಣು ಕಸವನ್ನು ಭೂ ಒಡಲಲ್ಲಿ ಅಡಗಿಸಿಡುವ ಪ್ರಯತ್ನಗಳು ಆಗುತ್ತಿವೆಯಾದರೂ ವಾಸ್ತವದಲ್ಲಿ ಅದು ಇದುವರೆವಿಗೂ ಯಾವುದೇ ದೇಶಕ್ಕೂ ಸಾಧ್ಯವಾಗಿಲ್ಲ. ಅಂದಿನಿಂದಲೂ ಆಯಾ ದೇಶಗಳು ತಂತಮ್ಮ ಅಣು ಕಸವನ್ನು ಕಂಟೇನರ್‌ಗಳಲ್ಲಿ ತುಂಬಿ ತಾವೇ ನಿರ್ಮಿಸಿದ ನೀರಿನ ಕೊಳಗಳಲ್ಲೋ, ಇಲ್ಲವೆ ಸಮುದ್ರದ ನೀರಿನಲ್ಲೋ ಅಡಗಿಸಿಟ್ಟಿವೆ. ಈಗ ಬಹುತೇಕ ವಿಜ್ಞಾನಿಗಳು ಒಪ್ಪಿರುವ ಪ್ರಕಾರ ವಿಶೇಷವಾಗಿ ನಿರ್ಮಿಸಲಾದ ಕಬ್ಬಿಣದ ಪೆಟ್ಟಿಗೆಗಳಲ್ಲಿ ಪರಮಾಣು ತ್ಯಾಜ್ಯವನ್ನು ಸಂಗ್ರಹಿಸಿ, ಭೂಮಿಯೊಳಗೆ ಆಳವಾದ ತೂತು ಕೊರೆದು ಆ ಪೆಟ್ಟಿಗೆಗಳನ್ನು ಇರಿಸಬಹುದು. ಆದರೆ ಭಯಾನಕ ಸಂಗತಿಯೆಂದರೆ ಭೂಮಿಯೊಳಗಡೆ ಈ ಕೃತಕ ವ್ಯವಸ್ಥೆ ಯಾವ ತೆರನಾಗಿ ವರ್ತಿಸುತ್ತದೆ ಎಂಬುದೇ ವಿಜ್ಞಾನಿಗಳಿಗೆ ಇನ್ನೂ ತಿಳಿದುಬಂದಿಲ್ಲ. ಹಾಗೂ ಭೂಮಿಯೊಳಗೆ ನೀರಿನ ಹಾಗೂ ಮಣ್ಣಿನ ಸಂಪರ್ಕವಾದರೂ ಸಹಸ್ರ ಸಹಸ್ರ ವರ್ಷಗಳವರೆಗೆ ತುಕ್ಕು ಹಿಡಿಯದೆ ತನ್ನ ಗಟ್ಟಿತನವನ್ನು ಉಳಿಸಿಕೊಂಡು ಬರುವ ಕಬ್ಬಿಣ ನಮ್ಮಲ್ಲಿದೆಯೇ ? ಎಂಬುದೇ ಪ್ರಶ್ನೆ. ಭೂಮಿಯ ಅಂತರಾಳದೊಳಗೆ ಪರಮಾಣು ಕಸದ ವಿಕಿರಣಗಳು ಹೊರಹೊಮ್ಮಿದರೆ ಅವು ಅಂತರ್ಜಲದೊಂದಿಗೆ ಸೇರಿ ಮನುಕುಲಕ್ಕೆ ಮರಣ ಮೃದಂಗವಾಗುವುದರಲ್ಲಿ ಸಂದೇಹವೇ ಇಲ್ಲ.

ಜಗತ್ತಿನ ಮುಂದುವರಿದ ದೇಶಗಳಲ್ಲೂ ಅಣುತ್ಯಾಜ್ಯ ವಿಲೇವಾರಿ ದೊಡ್ಡ ಸಮಸ್ಯೆಯೇ ಆಗಿದೆ. ಈ ಸಮಸ್ಯೆಯನ್ನು ಈ ದೇಶಗಳು ಈಗ ಹೇಗೆ ನಿರ್ವಹಿಸುತ್ತಿವೆ ಎಂಬುದನ್ನು ನೋಡೋಣ ಬನ್ನಿ :

- ✶ ಅಮೆರಿಕ – ಇದನ್ನು ಜಗತ್ತಿನ ಮುಂದುವರೆದ ದೇಶ ಎನ್ನುತ್ತಾರೆ. ಅಮೆರಿಕದಲ್ಲೂ ಅಣುತ್ಯಾಜ್ಯ ವಿಸರ್ಜನೆಗೆ ಶಾಶ್ವತ ಸ್ಥಳವಿಲ್ಲ! ೭೫,೦೦೦ ಮೆಟ್ರಿಕ್ ಟನ್ ಪರಮಾಣು ತ್ಯಾಜ್ಯ ಅಮೆರಿಕಾದಲ್ಲಿದ್ದು ೩೯ ರಾಜ್ಯಗಳ ೧೨೨ ತಾಣಗಳಲ್ಲಿ ಇಡಲಾಗಿದೆ. ಇಲ್ಲಿ ೧೦೪ ಕಮರ್ಷಿಯಲ್ ರಿಯಾಕ್ಟರ್‌ಗಳಿದ್ದು, ಪ್ರತಿವರ್ಷ ೨೦೦೦ ಮೆಟ್ರಿಕ್ ಟನ್ ಅಣುತ್ಯಾಜ್ಯ ಬಿಡುಗಡೆ ಆಗುತ್ತಲಿದೆ. ನೇವಾಡ್ ರಾಜ್ಯದ ಯುಕೋ ಪರ್ವತ ಪ್ರದೇಶದಲ್ಲಿ ವಿಸರ್ಜಿಸಲು ಮುಂದಾದಾಗ ಜನ ಪ್ರತಿಭಟಿಸಿದ ಹಿನ್ನೆಲೆಯಲ್ಲಿ ಆ ಯೋಜನೆಯನ್ನು ಕೈ ಬಿಡಲಾಯಿತು. ಭೂಮಿಯ ಅಂತರಾಳದಲ್ಲಿಡುವ ಪ್ರಯತ್ನಗಳು ನಡೆದಿವೆಯಾದರೂ ಪೂರ್ತಿಯಾಗಿಲ್ಲ.
- ✶ ರಷ್ಯಾ-ಅಣುತ್ಯಾಜ್ಯವಿರುವ ಕಂಟೇನರ್‌ಗಳನ್ನು ಜಲಾಂತರ್ಗಾಮಿ ನೌಕೆಗಳಲ್ಲಿರಿಸಿ ಆರ್ಕಟಿಕ್ ಹಾಗೂ ಪೆಸಿಫಿಕ್ ಸಾಗರದಲ್ಲಿ ಬಿಡಲಾಗಿದೆ. ಈ ಕಂಟೇನರ್‌ಗಳ ನಿರ್ವಹಣೆ ಸರಿಯಾಗಿ ಮಾಡದೇ ಇರುವುದರಿಂದ ಅವು ತುಕ್ಕು ಹಿಡಿದು ಅಣುತ್ಯಾಜ್ಯ ಹೊರಸೂಸಿ ಸಮುದ್ರದ ನೀರನ್ನು ವಿಷವನ್ನಾಗಿಸುತ್ತದೆ ಎಂದು ವಿಜ್ಞಾನಿಗಳು ಎಚ್ಚರಿಸಿದ್ದಾರೆ.
- ✶ ಫ್ರಾನ್ಸ್-ಅಣುತ್ಯಾಜ್ಯವನ್ನು ನೆಲದಡಿ ಸಂಗ್ರಹಿಸಿಡುವ ಕಾರ್ಯದಲ್ಲಿ ದಾಪುಗಾಲಿಕ್ಕುತ್ತಿರುವ ದೇಶಗಳಲ್ಲಿ ಫ್ರಾನ್ಸ್ ಮುಂದಿದೆ. ಬ್ಯುರ್ ಪಟ್ಟಣದ ಬಳಿ ೧೩೦ ಶತಕೋಟಿ ಡಾಲರ್ ವೆಚ್ಚದಲ್ಲಿ ೩೫ ಕಿ.ಮೀ. ಚದರಡಿ ಪ್ರದೇಶದಲ್ಲಿ ಸುಮಾರು ಅರ್ಧ ಕಿ.ಮೀ. ಒಳಗೆ ಪರಮಾಣು ತ್ಯಾಜ್ಯ ಸಂಗ್ರಹಿಸಿಡುವ ಜಗತ್ತಿನ ಅತಿ ದೊಡ್ಡ ಪ್ರಯೋಗಾಲಯ ೨೦೧೫ರ ವೇಳೆಗೆ ಪೂರ್ಣಗೊಳ್ಳಲಿದೆ.
- ✶ ಜಪಾನ್-೫೫ ಪರಮಾಣು ರಿಯಾಕ್ಟರ್‌ಗಳಿವೆ. ಫ್ರಾನ್ಸ್ ಮಾದರಿಯಲ್ಲೇ ಅಣುತ್ಯಾಜ್ಯವನ್ನು ನೆಲದಡಿ ಹೂಳಿಡಲು ಶಾಶ್ವತ ಯೋಜನೆ ಹಮ್ಮಿಕೊಂಡಿದೆ. ನೆಲದ ಹುಡುಕಾಟ ನಡೆದಿದೆ. ಜನರ ಪ್ರತಿಭಟನೆಯಿಂದಾಗಿ ಯೋಜನೆ ಕಾರ್ಯಗತಗೊಂಡಿಲ್ಲ.
- ✶ ಬ್ರಿಟನ್ - ಈ ರಾಷ್ಟ್ರ ಅಣುತ್ಯಾಜ್ಯವನ್ನು ನೆಲದಡಿ ಹೂಳಿಡುವ ಯೋಜನೆ ಹಾಕಿಕೊಂಡಿದೆ. ಇನ್ನೂ ಕಾರ್ಯಗತಗೊಂಡಿಲ್ಲ.
- ✶ ಚೀನಾ-ಇಲ್ಲಿ ಪರಮಾಣು ರಿಯಾಕ್ಟರ್‌ಗಳ ಸಮೀಪದಲ್ಲೇ ನೀರಿನ ಕೊಳಗಳನ್ನು ನಿರ್ಮಿಸಿ ಅದರಡಿಯಲ್ಲಿ ಅಣುತ್ಯಾಜ್ಯವನ್ನು ಸಂಗ್ರಹಿಸಿಡಲಾಗುತ್ತದೆ. ಅಣು ತ್ಯಾಜ್ಯವನ್ನು ಮರುಸಂಸ್ಕರಿಸುವ ವಿಧಾನವನ್ನು ಅಳವಡಿಸಿಕೊಳ್ಳಲಾಗಿದೆ. ಗನ್ಸು ಪ್ರಾಂತ್ಯದ ಗೋಬಿ ಮರುಭೂಮಿಯಡಿಯಲ್ಲಿ ಶಾಶ್ವತ ತ್ಯಾಜ್ಯ ಸಂಗ್ರಹಿಸಿಡುವ ಯೋಜನೆ ಆರಂಭವಾಗಿದೆ.

ಅಂದರೆ, ಅಣುಸ್ಥಾವರ ನಿರ್ಮಿಸಿರುವ ಜಗತ್ತಿನ ಯಾವುದೇ ದೇಶ ಅಣುತ್ಯಾಜ್ಯವನ್ನು ಯಶಸ್ವಿಯಾಗಿ ಸಂಗ್ರಹಿಸಿಡುವ ಕಾರ್ಯವನ್ನು ಪರಿಪೂರ್ಣಗೊಳಿಸಿಲ್ಲ. ಅರ್ಥಾತ್ ಪರಮಾಣು ಕಸ ನಿರಂತರವಾಗಿ ಜಗತ್ತಿನ ನೀರು, ನೆಲ, ವಾಯುವನ್ನು ತನ್ನ ವಿಕಿರಣಗಳಿಂದ ವಿಷಮಯಗೊಳಿಸುತ್ತಲೇ ಇದೆ. ಅದನ್ನು ಜನರು ತಮಗರಿವಿಲ್ಲದಂತೆ ಸೇವಿಸುತ್ತಿದ್ದಾರೆ. ಇದು ಆರಂಭದಲ್ಲಿ ಯಾರಿಗೂ ಗೊತ್ತಾಗುವುದೇ ಇಲ್ಲ. ಅಮೆರಿಕಾದ ಹಾನ್‌ಫರ್ಡ್ ಅಣುಸ್ಥಾವರದಿಂದ ಸುಮಾರು ೫,೩೦,೦೦೦ ಕ್ಯೂರಿಗಳಷ್ಟು ವಿಕರಣಯುಕ್ತ ಅಯೋಡಿನ್ ಸುತ್ತಮುತ್ತ ೧೭ ಮೈಲು ಹರಡಿದ್ದರೂ ಅದು ಗೊತ್ತಾದುದು ಜನರು ಸಾವಿನ ದವಡೆಗೆ ಸಿಲುಕಿದಾಗ !

**ಮನದ ಮಾತು**

ಪ್ರಿಯ ಓದುಗ, ಅಣುತ್ಯಾಜ್ಯ ಇತರ ತ್ಯಾಜ್ಯಗಳಂತಲ್ಲ. ಅದು ಎಲ್ಲ ತ್ಯಾಜ್ಯಗಳಿಗಿಂತಲೂ ಅಪಾಯಕಾರಿಯಾಗಿದ್ದರಿಂದಲೇ ಜಗತ್ತಿನಾದ್ಯಂತ ಪರಮಾಣು ತ್ಯಾಜ್ಯವನ್ನು ರಕ್ಷಿಸಿಡಲು ಸಾಧ್ಯತೆ ಇರುವ ಪ್ರದೇಶಗಳ ಜನರಿಂದ ಪ್ರತಿಭಟನೆಗೊಳಗಾಗುತ್ತದೆ. ಸತ್ಯದ ಸಂಗತಿಯೆಂದರೆ ಪರಮಾಣು ತ್ಯಾಜ್ಯವನ್ನು ಯಾವುದೇ ಪ್ರದೇಶದಲ್ಲಾಗಲಿ ಅನಿರ್ದಿಷ್ಟ ಸಮಯದವರೆಗೆ ಇರಿಸಿಕೊಳ್ಳುವುದು ತುಂಬ ಅಪಾಯಕಾರಿ. ಜತೆಗೆ ಅದನ್ನು ಇತರೆಡೆ ಸಾಗಿಸುವಾಗಲೂ ಅವಘಡಗಳು ಸಂಭವಿಸಬಹುದು ಎನ್ನುತ್ತಾರೆ ವಿಜ್ಞಾನಿಗಳು. ಎಲ್ಲ ದೇಶಗಳೂ ಪರಮಾಣು ತ್ಯಾಜ್ಯವನ್ನು ಭೂಮಿಯಡಿ ಹುದುಗಿಸಿಡುವುದೇ ಸುರಕ್ಷಿತ ಎಂದು ಒಪ್ಪಿಕೊಂಡು ಸ್ಥಳದ ಹುಡುಕಾಟದಲ್ಲಿ ತೊಡಗಿವೆ. ಹಾಗೂ ಅಲ್ಲಿಯ ಜನರಿಗೆ ಅರಿವು ಮೂಡಿಸಿ, ಅವರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳಲಾಗುತ್ತಿದೆ. ಆದರೆ ನಮ್ಮ ದೇಶದಲ್ಲಿ ಪರಮಾಣು ಶಕ್ತಿ ಇಲಾಖೆ ಸಾರ್ವಜನಿಕರನ್ನು ಅಣುಕಸ ಸಂಗ್ರಹಿಸಿ ಇಡುವಲ್ಲಿ ಅವರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳುತ್ತಿಲ್ಲ ಎಂಬುದಕ್ಕೆ ಹಿಂದೆಯೂ ಉದಾಹರಣೆಗಳಿವೆ. ೧೯೭೭ರ ಮಾರ್ಚ್ ತಿಂಗಳಲ್ಲಿ ರಾಜಸ್ತಾನದ ಪೋಖ್ರಾನ್ ಹತ್ತಿರದ ಸಣವಾಡ ಗ್ರಾಮದಲ್ಲಿ ನೆಲ ಅಗೆಯುವ ಕಾರ್ಯ ಆರಂಭವಾಗಿತ್ತು. 'ಖನಿಜ ಪರಿಶೋಧನೆ ಕಾರ್ಪೊರೇಶನ್ ಅಮೂಲ್ಯ ಹರಳುಗಳಿಗಾಗಿ ಅಗೆಯುತ್ತಿದೆ' ಎಂದು ಸುಳ್ಳು ಹೇಳಲಾಗಿತ್ತು. ನಂತರ ಪರಿಸರವಾದಿಗಳಿಂದ ಸತ್ಯ ಗೊತ್ತಾದಾಗ ಅಲ್ಲಿಯ ಜನರು ತೀವ್ರವಾಗಿ ಪ್ರತಿಭಟಿಸಿದ್ದರಿಂದ ಅಗೆಯುವ ಕಾರ್ಯ ಸ್ಥಗಿತಗೊಂಡಿತು. ವಿಚಿತ್ರವೆಂದರೆ ರಾಜಸ್ತಾನದ ಮುಖ್ಯಮಂತ್ರಿಗೂ ಈ ವಿಷಯ ಗೊತ್ತಿರಲಿಲ್ಲ. ಈಗ ಕರ್ನಾಟಕದಲ್ಲೂ ಹೀಗೇ ಮಾಡಲಾಗಿದೆ. ಕೋಲಾರದಲ್ಲಿ ಅಣುಕಸ ಸುರಿಯುವ ವಿಷಯ ನನಗೆ ಗೊತ್ತೇ ಇಲ್ಲವೆಂದು ಮಾನ್ಯ ಮುಖ್ಯಮಂತ್ರಿ ಜಗದೀಶ ಶೆಟ್ಟರ್ ಬಹಿರಂಗ ಹೇಳಿಕೆ ನೀಡಿದ್ದಾರೆ. ಇನ್ನೂ ವಿಚಿತ್ರವೆಂದರೆ ಕೇಂದ್ರ ಸರಕಾರ, 'ಕೆ.ಜಿ.ಎಫ್.ನಲ್ಲಿ ಅಣುತ್ಯಾಜ್ಯ ಸಂಗ್ರಹಿಸಿಡುವ ನಿರ್ಧಾರವನ್ನು ಕೈ ಬಿಡಲಾಗಿದೆ' ಎಂದು ಹೇಳಿದೆಯಾದರೂ ಪರಮಾಣು ಘಟಕವನ್ನು ಪ್ರತಿನಿಧಿಸುತ್ತಿರುವ ಭಾರತದ ಅಟಾರ್ನಿ ಜನರಲ್ ಸುಪ್ರೀಂ ಕೋರ್ಟ್‌ಗೆ ಅಫೀಡವಿಟ್ ಸಲ್ಲಿಸಿದ್ದಾರೆ. ಕೋಲಾರದ ಜನತೆಗೆ ತಿಳಿಸದೆ, ಅವರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳದೆ ಇರುವ ಸರಕಾರದ ಈ ನಡೆ ನಿಜಕ್ಕೂ ಖಂಡನೀಯ ಹಾಗೂ ಅನ್ಯಾಯದ ಪರಮಾವಧಿ ಎನ್ನುತ್ತಿದ್ದಾರೆ ಪರಿಸರವಾದಿಗಳು. ಹಾಗೆಯೇ ದೇಶದಲ್ಲಿ ವಿದ್ಯುತ್ ಅಭಾವ ಇರುವುದನ್ನೂ ಅಲ್ಲಗಳೆಯಲಾಗದು. ದೇಶದ ಪ್ರಗತಿಗೆ ವಿದ್ಯುತ್ ಬೇಕೇಬೇಕು. ಆದರೆ ಆ ಪ್ರಗತಿಯನ್ನು ಅನುಭವಿಸಬೇಕಾದ ನಾಗರಿಕರನ್ನೇ ಬಲಿ ತೆಗೆದುಕೊಳ್ಳತೊಡಗಿದರೆ ಯಾರಿಗಾಗಿ ಈ ಪ್ರಗತಿ ? ಇನ್ನು ಚಿನ್ನದ ಗಣಿ ಕೆ.ಜಿ.ಎಫ್.ನ ಬಗೆಗೆ ಹೇಳಬೇಕೆಂದರೆ ಈಗಾಗಲೇ ಕಾರಣಾಂತರಗಳಿಂದ ಗಣಿ ಕೆಲಸ ನಿಂತುಹೋಗಿದ್ದು, ಅಲ್ಲಿಯ ಕಾರ್ಮಿಕರಿಗೆ ದಯನೀಯ ಸ್ಥಿತಿ ಬಂದೊದಗಿದೆ. ಜತೆಗೆ ಅಲ್ಲಿನ ವಿಷದ ಸಯನೈಡ್ ಗುಡ್ಡಗಳ ಧೂಳು ಜನರ ಆರೋಗ್ಯಕ್ಕೆ ಕುತ್ತಾಗುತ್ತಲಿದೆ. ಈಗ ಅಲ್ಲಿ ಪರಮಾಣು ತ್ಯಾಜ್ಯ ಸುರಿದರೆ ಮುಂದೊಂದು ದಿನ ಕೆ.ಜಿ.ಎಫ್.ನಲ್ಲಿ ಸ್ಮಶಾನ ಮೌನ ಆವರಿಸೀತು, ಎಚ್ಚರ ! ಈಗ ಅಲ್ಲಿಯ ಜನರಿಗೆ ಬೇಕಾಗಿರುವುದು ಚಿನ್ನದ ಗಣಿ ಕೆಲಸದ ಆರಂಭ ಅಷ್ಟೆ. ಇದರತ್ತ ಸರಕಾರ ಗಮನ ಹರಿಸುವುದರಲ್ಲಿ ಮಾನವತೆಯಿದೆ. ಕೊನೆಯಲ್ಲಿ ಈ ಲೇಖನದಾರಂಭದಿಂದಲೂ ನನ್ನ ಮನಸ್ಸಿಗೆ ವೇದನೆ ನೀಡುತ್ತಿರುವ ವಿಷಯವೊಂದನ್ನು ನಿಮ್ಮೊಂದಿಗೆ ಹಂಚಿಕೊಳ್ಳುವಾಸೆ – ''ಅಣುಸ್ಥಾವರಗಳನ್ನು ನಿರ್ಮಿಸಿ ಅವುಗಳಿಂದ ಶಕ್ತಿ-ಬೆಳಕು ಪಡೆಯುತ್ತಿರುವ ನಮಗೆ ಅದನ್ನು ಬಳಸಲಾಗದೆ ಇರುವ ಭಾವೀ ಪೀಳಿಗೆಯನ್ನು ವಿಷವರ್ತುಲದಲ್ಲಿ ತಳ್ಳುತ್ತಿರುವ ವೇದನಾಮಯ ಅನುಭವವಾಗುತ್ತಿದೆ.''

**ಎನ್. ಆರ್. ಪಾಟೀಲ**
ಹಿಂಡಲಗಾ, ಬೆಳಗಾವಿ

೧೯೪೩ರಲ್ಲಿ ಜನಿಸಿದ ಟೆರಿ ಈಗಲ್‌ಟನ್ ಮೂಲತಃ ಐರ್ಲೆಂಡಿನ ಒಂದು ಕುಟುಂಬದವನು. ಆದರೆ ಹುಟ್ಟಿದ್ದು, ವಿದ್ಯಾಭ್ಯಾಸ ಪಡೆದಿದ್ದು ಮತ್ತು ಕೆಲಸ ಮಾಡಿದ್ದು ಇಂಗ್ಲೆಂಡಿನಲ್ಲಿ. ಕೇಂಬ್ರಿಜ್, ಆಕ್ಸ್‌ಫರ್ಡ್, ಮ್ಯಾಂಚೆಸ್ಟರ್ ಮತ್ತು ಲೆಸ್ಟರ್ ವಿಶ್ವವಿದ್ಯಾನಿಲಯಗಳೊಡನೆ ಅವನದು ಐವತ್ತಕ್ಕೂ ಹೆಚ್ಚು ವರ್ಷಗಳ ಸಂಬಂಧ. ವ್ಯಾಸಂಗ ಕೇಂಬ್ರಿಜ್‌ನಲ್ಲಿ, ಆದರೆ ಪ್ರಾಧ್ಯಾಪಕನಾಗಿದ್ದುದು ಲೆಸ್ಟರ್‌ನಲ್ಲೇ ಹೆಚ್ಚು. ಬೇರೆ ಎರಡು ವಿಶ್ವವಿದ್ಯಾನಿಲಯಗಳಲ್ಲೂ ಬೋಧನೆ ಮತ್ತು ಸಂಶೋಧನೆ ನಡೆಸಿದ್ದಾನೆ. ಸಾಹಿತ್ಯ, ಇತಿಹಾಸ ಮತ್ತು ತತ್ತ್ವಶಾಸ್ತ್ರ ಅವನ ಆಸಕ್ತಿಯ ಕ್ಷೇತ್ರಗಳು. ಸಾಹಿತ್ಯ ಮೀಮಾಂಸೆ ಮತ್ತು ವಿಮರ್ಶೆಯಲ್ಲಿ ಆತನ ಕೃಷಿ ಅತ್ಯಂತ ಮೌಲಿಕವಾದ್ದು. ಅದಕ್ಕೆ ವಿಶೇಷ ಮಾನ್ಯತೆ ಲಭ್ಯವಾಗಿದೆ. ಮಾರ್ಕ್ಸ್‌ವಾದಿ ಸಿದ್ಧಾಂತದ ಬಗೆಗಿನ ಅವನ ತಿಳಿವು ಕೇವಲ ಅಧ್ಯಯನದಿಂದ ಬಂದಿದ್ದಲ್ಲ, ಅವನೊಬ್ಬ ಖ್ಯಾತ ಸಂಘಟಕ ಮತ್ತು ಹೋರಾಟಗಾರ ಕೂಡ. ಅಮೆರಿಕಾದಲ್ಲಿ ಇರುವ ಯೇಲ್ ವಿಶ್ವವಿದ್ಯಾನಿಲಯ ೨೦೧೧ರಲ್ಲಿ ''ಮಾರ್ಕ್ಸ್ ಹೇಳಿದ್ದು ಏಕೆ ಸರಿ ?'' ಎಂಬ ಅವನ ೨೪೦ ಪುಟಗಳ ಪುಸ್ತಕವನ್ನು ಪ್ರಕಟಿಸಿತು. ಮಾರ್ಕ್ಸ್‌ವಾದವನ್ನು ಖಂಡಿಸುವವರು ಸಾಮಾನ್ಯವಾಗಿ ಎತ್ತುತ್ತಲೇ ಬಂದಿರುವ ಆಕ್ಷೇಪಗಳನ್ನು ಪರೀಕ್ಷಿಸಿ ಸತ್ವಯುತವಾದ ವಿಮರ್ಶೆ ಮಾಡುವುದು ಅವನ ಉದ್ದೇಶ. ಈ ಪುಸ್ತಕವನ್ನು ಅನುಸರಿಸಿ ಡಾ|| ಜಿ. ರಾಮಕೃಷ್ಣ ಅವರು ಸಂಗ್ರಹ ರೂಪದಲ್ಲಿ ಮಾರ್ಕ್ಸ್‌ವಾದದ ಬಗೆಗಿನ ಪ್ರತಿಪಾದನೆಯನ್ನು ಪರಿಚಯಿಸಿದ್ದಾರೆ. ಇದು ಹತ್ತನೆಯ ಕಂತು.

# ಹಿಂಸೆಯ ಮೀಮಾಂಸೆ : ಮಾರ್ಕ್ಸ್‌ವಾದ ನಿರಪರಾಧಿ

**ಮಾ**ರ್ಕ್ಸ್‌ವಾದವು ಕ್ರಾಂತಿಯನ್ನು ಪುರಸ್ಕರಿಸುತ್ತದೆ. ಹಾಗೆಂದೊಡನೆ ಕೆಲವರು ಹೌಹಾರುತ್ತಾರೆ. ಏಕೆಂದರೆ, ಕ್ರಾಂತಿಯೆಂದರೆ ಅವರಿಗೆ ಹಿಂಸೆ, ಅಸ್ತವ್ಯಸ್ತತೆ, ಎಂಬ ಭೀತಿ ತರುತ್ತದೆ. ಸಮಾಜ ಸುಧಾರಣೆಯು ಶಾಂತಿಯುತವಾಗಿ ಕ್ರಮೇಣ ಜಾರಿಗೆ ಬಂದರೆ ಎಷ್ಟು ಚೆನ್ನ ಎಂಬುದು ಅವರ ಭಾವನೆ. ಆದರೆ ಅವರ ಭೀತಿಗೇನೂ ಕಾರಣವಿಲ್ಲ. ಇತಿಹಾಸದಲ್ಲಿ ಎಲ್ಲ ಸುಧಾರಣೆಗಳೂ ಶಾಂತಿಯುತವಾಗಿ ಜರುಗಿಲ್ಲ. ಬುಡಕಟ್ಟುಗಳು ನಾಶವಾಗಿ ಪ್ರಭುತ್ವಗಳು ಅಸ್ತಿತ್ವಕ್ಕೆ ಬಂದ ಬುದ್ಧಪೂರ್ವ ಯುಗವಾಗಲಿ, ಬುದ್ಧೋತ್ತರ ಅಶೋಕನ ಕಾಲವಾಗಲಿ, ಗುಪ್ತರ 'ಸುವರ್ಣ ಯುಗ'ವಾಗಲಿ, ಬಸವಣ್ಣನ ಕಲ್ಯಾಣ ಕ್ರಾಂತಿಯಾಗಲಿ, ೧೮೫೭ರ ಪ್ರಥಮ ಸ್ವಾತಂತ್ರ್ಯ ಹೋರಾಟವಾಗಲಿ ಅತ್ಯಂತ ಶಾಂತಿಯುತವಾಗಿರಲಿಲ್ಲ. ಅಮೆರಿಕಾದ ಮೂಲನಿವಾಸಿಗಳ ಹತ್ಯೆ, ಕ್ರಾಮ್‌ವೆಲ್ಲನು ಐರ್ಲೆಂಡಿನ ಮೇಲೆ ದಾಳಿ ನಡೆಸಿ ಉಂಟುಮಾಡಿದ ಸನ್ನಿವೇಶ, ದಕ್ಷಿಣ ಅಮೆರಿಕಾದಲ್ಲಿ ಸ್ಪೇನ್ ಹುಟ್ಟುಹಾಕಿದ ಗಲಭೆ, ರೋಮನ್ ಕ್ಯಾಥಲಿಕ್ ಚರ್ಚ್ ಯೂರೋಪಿನಲ್ಲಿ ತಂದ ಬದಲಾವಣೆಗಳು, ಮುಂತಾದುವನ್ನು ನೆನೆಯಬಹುದು. ಒಂದೊಂದು ಸುಧಾರಣೆಯೂ ಹಿಂಸೆ ಮತ್ತು ಸಾಮಾಜಿಕ ಸಂಘರ್ಷಗಳಿಗೆ ಎಡೆಮಾಡಿಕೊಟ್ಟಿತು. ಇದರ ಜೊತೆ ಹೋಲಿಸಿದರೆ ಎಷ್ಟೋ ಕ್ರಾಂತಿಗಳು ಶಾಂತಿಯುತವಾಗಿ ನಡೆದಿವೆ. ೧೯೧೬ರ ಐರ್ಲೆಂಡಿನಲ್ಲಿ ಈಸ್ಟರ್ ದಂಗೆ ನಡೆದಾಗ ಸತ್ತವರು ಬೆರಳೆಣಿಕೆಯಷ್ಟು ಮಾತ್ರ, ಆದರೆ ಅದು ಆ ದೇಶಕ್ಕೆ ಭಾಗಶಃ ಸ್ವಾತಂತ್ರ್ಯ ಗಳಿಸಿಕೊಟ್ಟಿತು. ೧೯೧೭ರ ರಷ್ಯದ ಬಾಲ್ಶೆವಿಕ್ ಕ್ರಾಂತಿಯಲ್ಲಿ 'ರಕ್ತದೋಕುಳಿ' ಆಶ್ಚರ್ಯವೆನಿಸುವಷ್ಟು ಕಡಿಮೆ ಪ್ರಮಾಣದ್ದು. ಮಾಸ್ಕೋದಲ್ಲಿ ಪ್ರಮುಖ ಸ್ಥಳಗಳನ್ನು ವಶಪಡಿಸಿಕೊಂಡಾಗ ಬಾಲ್ಶೆವಿಕರು ಗುಂಡು ಹಾರಿಸುವ ಸಂದರ್ಭವೇ ಬರಲಿಲ್ಲ. ಐಸಾಕ್ ಡಾಯ್‌ಶರ್ ಹೇಳುವಂತೆ ''ಝಾರನ ಸರ್ಕಾರವನ್ನು ಸ್ವಲ್ಪ ನೂಕಿದರು, ಅದು ಬಿದ್ದುಹೋಯಿತು.'' ಕ್ರಾಂತಿಗೆ ಜನರ ಬೆಂಬಲ ಅಷ್ಟು ಅಗಾಧವಾಗಿತ್ತು. ಸೋವಿಯೆತ್ ಒಕ್ಕೂಟವು ಎಪ್ಪತ್ತು ವರ್ಷಗಳ ನಂತರ ಕುಸಿದುಬಿದ್ದಾಗಲೂ ರಕ್ತದ ಹೊಳೆ ಹರಿಯಲಿಲ್ಲ. ಬಾಲ್ಶೆವಿಕ್ ಕ್ರಾಂತಿಯ ನಂತರ ಜೀವನ ಬಹಳ ಅಸ್ತವ್ಯಸ್ತವಾಯಿತು, ಕೊಲೆಗಳಾದವು, ನಿಜ. ಅದಕ್ಕೆ ಕ್ರಾಂತಿಯು ಕಾರಣವಾಗಿರಲಿಲ್ಲ; ಬದಲಾಗಿ ಕ್ರಾಂತಿಯು ಉಂಟುಮಾಡಿದ್ದ ಸಾಮಾಜಿಕ ಬದಲಾವಣೆಯನ್ನು ಬುಡಮೇಲು ಮಾಡ ಹೊರಟವರು ಹಿಂಸೆಯನ್ನು ಪ್ರಚೋದಿಸಿದ್ದರು. ಬ್ರಿಟನ್, ಫ್ರಾನ್ಸ್, ಮುಂತಾದ ಹದಿನಾಲ್ಕು ಸರ್ಕಾರಗಳು ಕ್ರಾಂತಿಯನ್ನು ಹೊಸಕಿಹಾಕಲು ತಮ್ಮ ಸೈನ್ಯದ ತುಕಡಿಗಳನ್ನು ರವಾನಿಸಿದ್ದರು. ಆಗ್ಗೆ ಚರ್ಚಿಲ್ ಹೇಳಿದ್ದ, ''ಬಾಲ್ಶೆವಿಕ್ ಮಗುವನ್ನು ತೊಟ್ಟಿಲಲ್ಲೇ ಕತ್ತುಹಿಚುಕಿ ಸಾಯಿಸಬೇಕು,'' ಎಂದು.

ಹಿಂಸೆ ಯಾವ ಪ್ರಮಾಣದ್ದು ಎಂಬುದು ಕ್ರಾಂತಿಯ ಲಕ್ಷಣದ ಸೂಚಕವಲ್ಲವೆಂಬುದು ಮಾರ್ಕ್ಸ್‌ವಾದದ ನಿಶ್ಚಿತ ಅಭಿಪ್ರಾಯ. ಕ್ರಾಂತಿಯು ಥಟಕ್ಕನೆ ಎಲ್ಲವನ್ನೂ ಸರಿಪಡಿಸಿಬಿಡುವುದೂ ಇಲ್ಲ. ಫ್ರಾನ್ಸಿನ ೧೭೮೯ರ ಕ್ರಾಂತಿಯ ಮಾರನೆಯ ದಿನ ಅಲ್ಲಿಯ ಜನರಿಗೆ ಹಾಲು-ಜೇನಿನ ಹೊಳೆ ಹರಿಯಲಿಲ್ಲ, ರಷ್ಯದ ೧೯೧೭ರ ಕ್ರಾಂತಿಯ ನಂತರ ಅಲ್ಲಿಯ ಮಾರುಕಟ್ಟೆಯು ಸಂಪದ್ಭರಿತವಾಗಿ ಕಂಗೊಳಿಸಲಿಲ್ಲ. ಊಳಿಗಮಾನ್ಯ ವ್ಯವಸ್ಥೆಯು ಇಂಗ್ಲೆಂಡಿನಲ್ಲಿ ಬಲವಾದ ಪೆಟ್ಟು ತಿಂದಾಗ ರೈತರ ಜೀವನ ಕೂಡಲೆ

ಡಾ|| ಜಿ. ರಾಮಕೃಷ್ಣ



ಹಸನಾಗಲಿಲ್ಲ ಕೂಡ. ರಷ್ಯದಲ್ಲಿ ಖಾಸಗಿ ಒಡೆತನವು ಕ್ರಾಂತಿಯ ನಂತರ ಸಾಕಷ್ಟು ದೀರ್ಘಕಾಲ ಜಾರಿಯಲ್ಲಿತ್ತು. ಅದನ್ನು ಕ್ರಮೇಣ ಕಡಿಮೆಗೊಳಿಸುವ ಯತ್ನ ನಡೆಯಿತು, ಅಷ್ಟೆ. ಸಾಮೂಹಿಕ ಕೃಷಿಕ್ಷೇತ್ರಗಳ ರಚನೆಯ ಸಂದರ್ಭದಲ್ಲೂ ರೈತರನ್ನು ಏಕಾಏಕಿ ಬಲವಂತವಾಗಿ ಉಚ್ಚಾಟಿಸಲಿಲ್ಲ. ರೈತರ ಮನವೊಲಿಸಿ ಕ್ರಮೇಣ ತರಲಾದ ಬದಲಾವಣೆ ಅದು. ಕ್ರಾಂತಿಗಳು ಚಿಟಿಕೆ ಹೊಡೆದಂತೆ ಕ್ಷಣಮಾತ್ರದಲ್ಲಿ ಸಂಭವಿಸುವುದಿಲ್ಲ. ಹಲವು ಶತಮಾನಗಳೇ ಬೇಕಾಗಬಹುದು. ಬ್ರಿಟನ್ನಿನ ಮಧ್ಯಮ ವರ್ಗಗಳು ಊಳಿಗಮಾನ್ಯ ವ್ಯವಸ್ಥೆಯನ್ನು ಹೊರದೂಡಲು ಶತಮಾನಗಳೇ ಬೇಕಾದುವು. ರಾಜಕೀಯ ಅಧಿಕಾರವನ್ನು ಅಲ್ಪಕಾಲದಲ್ಲಿ ಸೆಳೆದುಕೊಳ್ಳಲು ಸಾಧ್ಯ, ಆದರೆ ಆಚರಣೆಗಳು, ಸಂಬಂಧಗಳು, ಸಂಸ್ಥೆಗಳು, ಭಾವನೆಗಳು, ಸಮಾಜದಲ್ಲಿ ಮಾಸಿಹೋಗಿ ಹೊಸ ಪದ್ಧತಿಗಳು ಅಸ್ತಿತ್ವಕ್ಕೆ ಬರಲು ಎಷ್ಟೋ ಕಾಲ ಹಿಡಿಯುತ್ತದೆ. ಒಂದು ಆಜ್ಞೆ ಹೊರಡಿಸಿ ಉದ್ಯಮವನ್ನು ಸರ್ಕಾರವು ಸ್ವಾಧೀನಪಡಿಸಿಕೊಳ್ಳಬಹುದು, ಆದರೆ ಅಲ್ಲಿಯ ಕೆಲಸಗಾರರ ಮನೋಭಾವವು ಅವರ ಅಜ್ಜಂದಿರ ಮನೋಭಾವದಂತೆ ಇರದೆ ಭಿನ್ನವಾಗಿರಬೇಕೆಂದು ಶಾಸನ ಹೊರಡಿಸಲಾಗುವುದಿಲ್ಲ. ಅದಕ್ಕೆ ದೀರ್ಘಕಾಲೀನ ಶಿಕ್ಷಣ, ಸಾಂಸ್ಕೃತಿಕ ಬದಲಾವಣೆ, ಅಗತ್ಯ.




ಅದೆಲ್ಲಾ ಬರೀ ಮಾತು, ಅಂತಹ ಬದಲಾವಣೆಗಳೇನೂ ಉಂಟಾಗುವುದಿಲ್ಲ, ಎನ್ನುವವರು ತಮ್ಮನ್ನು ತಾವು ಒಮ್ಮೆ ನೋಡಿಕೊಳ್ಳಬೇಕು. ೧೯೭೦ರ ಭಾರತವು ೨೦೧೩ರಲ್ಲಿ ಹಾಗೆಯೇ ಉಳಿದಿದೆಯೆ? ಅತ್ಯಾಚಾರಗಳು ಈಗಲೂ ನಡೆಯುತ್ತವೆ, ನಿಜ; ಆದರೆ ಸಾಮಾಜಿಕ ದೃಷ್ಟಿಯು ಸ್ಥಗಿತವಾಗಿ ಉಳಿದಿಲ್ಲ. ಸ್ವಾತಂತ್ರ್ಯಾನಂತರ ಏನೂ ಬದಲಾವಣೆಗಳೇ ಆಗಿಲ್ಲವೆಂದು ಕೆಲವರಿಗೆ ತೋರಿದರೆ ಅದಕ್ಕೆ ಕಾರಣ ಅದು ಅವರ ಪರಿವೆಗೆ ಬಂದಿಲ್ಲದಿರುವುದು. ೧೯೯೦ರ ದಶಕದ ಜಾಗತೀಕರಣದಿಂದ ಕೂಡ ಯಾವ ಬದಲಾವಣೆಯೂ ಆಗಿಲ್ಲವೆನ್ನುವವರೂ ಇದ್ದಾರೆ. ಒಂದು ಯಶಸ್ವೀ ಕ್ರಾಂತಿಯು ತನ್ನ ಚಿಹ್ನೆಗಳನ್ನು ಬೇಗನೆ ಅಳಿಸಿಹಾಕಿಬಿಡುತ್ತದೆ, ಅದೇ ಅದರ ಯಶಸ್ಸಿನ ಗುರುತು; ಬದಲಾವಣೆ ತರಲು ನಡೆದ ಹೋರಾಟವು ತೀರಾ ಸಹಜವಾಗಿದ್ದಿತೆಂಬ ಭಾವನೆ ಉಂಟು ಮಾಡುತ್ತದೆ. ಒಂದು ಮಗುವಿನ ಜನನವಿದ್ದಂತೆ ಅದು. ನಮ್ಮ ಹುಟ್ಟಿನ ಆತಂಕ ಎಷ್ಟು ಕಾಲ ಬಾಧಿಸೀತು! ವ್ಯಕ್ತಿಗಳದ್ದಾಗಲಿ, ರಾಜಕೀಯ ಪ್ರಭುತ್ವಗಳದ್ದಾಗಲಿ ಉಗಮವು ಸಾಮಾನ್ಯವಾಗಿ ಆಘಾತದಂತೆ ತೋರಬಹುದು. ತನ್ನ ''ಬಂಡವಾಳ'' ಎಂಬ ಕೃತಿಯಲ್ಲಿ ಮಾರ್ಕ್ಸ್ ಆಧುನಿಕ ಬ್ರಿಟನ್ನಿನ ಪ್ರಭುತ್ವವು ಎಷ್ಟು ಘೋರವಾಗಿ ಅವತರಿಸಿತು ಎಂಬುದನ್ನು ವಿವರಿಸಿದ್ದಾನೆ. ರೈತರು ನಿರ್ಗತಿಕರಾದರು, ನಗರಗಳಿಗೆ ಬಂದು ಬಡಕಾರ್ಮಿಕರಾದರು; ಬಂಡವಾಳಶಾಹಿಯು ನೆಲೆಗೊಂಡಿದ್ದು ಹಾಗೆ. ''ತನ್ನ ಶರೀರದ ಒಂದೊಂದು ರಂಧ್ರದಿಂದಲೂ ರಕ್ತ ಮತ್ತು ಕೊಳಕನ್ನು ಸುರಿಸುತ್ತಾ'' ಅಸ್ತಿತ್ವಕ್ಕೆ ಬಂದಿದ್ದು ಅದು. ಬಲವಂತವಾಗಿ ರಷ್ಯದ ರೈತಾಪಿಗಳನ್ನು ನಗರೀಕರಣಕ್ಕೆ ತಳ್ಳುವ ಸ್ಟಾಲಿನ್ನನ ಪ್ರಯತ್ನವು ಮಾರ್ಕ್ಸ್‌ಗೆ ನಡುಕ ಉಂಟುಮಾಡಿಬಿಡುತ್ತಿತ್ತು. ರಾಜಕೀಯ ಪ್ರಭುತ್ವಗಳು ಕ್ರಾಂತಿ, ಆಕ್ರಮಣ, ಸ್ಥಳೀಯರನ್ನು ತಳ್ಳಿ ನೆಲೆಗೊಳ್ಳುವುದು, ಜನಾಂಗ ಹತ್ಯೆ ಅಥವಾ (ಅಮೆರಿಕಾದಲ್ಲಿ ನಡೆದಂತೆ) ಸ್ಥಳೀಯರ ಹತ್ಯೆ, ಹೀಗೆ ಪ್ರಕ್ಷುಬ್ಧ ಹಿನ್ನೆಲೆಯಿಂದ ಬಂದಿರುವುದುಂಟು. ಅವುಗಳ ನೆನಪನ್ನು ಜನರಲ್ಲಿ ಅಳಿಸಿಹೋಗುವಂತೆ ಮಾಡುವುದು ಪ್ರಭುತ್ವಗಳ ಗೆಲುವಿನ ಸೂಚನೆ! ಇಪ್ಪತ್ತನೆಯ ಶತಮಾನದಲ್ಲಿ ಅಮೆರಿಕಾವು ಮೆಕ್ಸಿಕೋದ ಟೆಕ್ಸಾಸ್, ಅರಿಝೋನ, ನ್ಯೂ ಮೆಕ್ಸಿಕೊ, ಮುಂತಾದ ಭಾಗಗಳನ್ನು ಬಲಾತ್ಕಾರದಿಂದ ವಶಪಡಿಸಿಕೊಂಡಿತೆಂದು ಅಲ್ಲಿಯ ನಿವಾಸಿಗಳು ಇಂದು ನೆನಪಿಸಿಕೊಳ್ಳುತ್ತಾರೆಯೆ? ಇಸ್ರೇಲ್, ಉತ್ತರ ಐರ್ಲೆಂಡ್, ಮುಂತಾದೆಡೆಗಳಲ್ಲಿ ಸಂಘರ್ಷವಿನ್ನೂ ಕೊನೆಗೊಂಡಿಲ್ಲವಲ್ಲವೆ?

ಒಂದಲ್ಲ ಒಂದು ರೀತಿಯ ಕ್ರಾಂತಿಯ ಪರಿಣಾಮವಾಗಿ ಅಸ್ತಿತ್ವಕ್ಕೆ ಬಂದಿರುವ ದೇಶಗಳಿವೆ, ಪ್ರಭುತ್ವಗಳಿವೆ. ಇಂಗ್ಲೆಂಡ್ ಸಹ ಅದಕ್ಕೆ ಒಂದು ಉದಾಹರಣೆ. ಸಂಪ್ರದಾಯವಾದಿಗಳ ಪ್ರಕಾರ ಎಲ್ಲ ಕ್ರಾಂತಿಗಳೂ ಹುಸಿಯಾದವು, ಎಲ್ಲಾ ಅಪಜಯಕ್ಕೆ ಈಡಾಗುವಂಥವು; ಆದರೆ ಅದು ನಿಜವಲ್ಲ ಎಂಬುದು ಇಂಗ್ಲೆಂಡಿನ ಇತಿಹಾಸದಿಂದ ಸಾಬೀತಾಗಿದೆ. ಕ್ರಾಂತಿಯ ನಂತರ ಮತ್ತೆ ಪೂರ್ವಸ್ಥಿತಿ ಅನಿವಾರ್ಯ ಎನ್ನುವವರಿಗೂ ಆ ದೇಶ ಉತ್ತರ ನೀಡುತ್ತದೆ. ಹದಿನೆಂಟನೆಯ ಶತಮಾನಕ್ಕೆ ಮುಂಚಿನ ಮತ್ತು ನಂತರದ ಇಂಗ್ಲೆಂಡ್ ಅದಕ್ಕೆ ನಿದರ್ಶನವಾಗಿದೆ. ಮೊದಲಿಗಿಂತಲೂ ಇಂದಿನ ಸಂದರ್ಭ ಕ್ರೂರವಾಗೇನೂ ಇಲ್ಲ ಮತ್ತು ಕ್ರಾಂತಿಯ ನಂತರದ ಇಂಗ್ಲೆಂಡ್ ಜನ ತಮ್ಮ ಮಕ್ಕಳನ್ನು ತಿಂದು ಹಾಕುತ್ತಿಲ್ಲ! ಫ್ರಾನ್ಸ್ ಮತ್ತು ಜರ್ಮನಿಗಳ ಪರಿಸ್ಥಿತಿಯೂ ಅದೇ. ೧೭೮೯ರ ಫ್ರಾನ್ಸ್ ಕ್ರಾಂತಿಯ ನಂತರ ಮತ್ತೆ ಅಲ್ಲಿ ಊಳಿಗಮಾನ್ಯ ಪ್ರಭುತ್ವ ಚೇತರಿಸಿಕೊಳ್ಳಲಿಲ್ಲ; ಅಂತೆಯೇ, ಜರ್ಮನಿಯ ಭಾರಿ ಜಮೀನ್ದಾರರ ಆಳ್ವಿಕೆಯು ಒಮ್ಮೆ ಕೊನೆಗೊಂಡಿದ್ದು ಮತ್ತೆ ಹಿಂದಿರುಗಿಲ್ಲ. ಬ್ರಿಟನ್ನಿನಲ್ಲಿ ಊಳಿಗಮಾನ್ಯ ವ್ಯವಸ್ಥೆಯ ಅವಶೇಷಗಳು ಸಾಕಷ್ಟು ವಿಜೃಂಭಿಸುತ್ತಿವೆ: ಅಲ್ಲಿಯ ಹೌಸ್ ಆಫ್ ಲಾರ್ಡ್ಸ್, ಮಹಾರಾಣಿ, ಪಾರ್ಲಿಮೆಂಟಿನ ಕೆಲವು ಪದ್ಧತಿಗಳು, ಇತ್ಯಾದಿ. ಆಳುವ ವರ್ಗದ ಭಾಗವಾದ ಮಧ್ಯಮ ವರ್ಗಕ್ಕೆ ಅವುಗಳಿಂದ ಕೆಲವು ಅನುಕೂಲಗಳಿರುವುದರಿಂದ ಅವು ಉಳಿದಿವೆ, ಅಷ್ಟೆ. ರಾಜಮನೆತನದ ತಥಾಕಥಿತ ವೈಭವವು ಜನರ ಮನಸ್ಸನ್ನು ಆಕ್ರಮಿಸಿ ಆಳುವ ವರ್ಗಕ್ಕೆ ಪ್ರಯೋಜನ ಕಲ್ಪಿಸಿಕೊಟ್ಟಿದೆ. ಅದಕ್ಕೇ ರಾಜಮನೆತನದ ಸಕಲ ಚಟುವಟಿಕೆಗಳೂ ಕುತೂಹಲ ಮೂಡಿಸುತ್ತವೆ, ಮಾಧ್ಯಮಗಳಿಗೆ ರಸವತ್ತಾದ ಕತೆಗಳು ಸಿಗುತ್ತಿವೆ. ಆದರೆ ಅಲ್ಲಿಯ ರಾಜಕುಮಾರರ ಕಮಂಗಿತನಗಳೆಲ್ಲಾ ಜನತೆಗೆ ರಂಜನೆ ನೀಡುವ ದಿನಗಳು ಬಹಳ ಉಳಿದಿಲ್ಲ.

ಪಾಶ್ಚಿಮಾತ್ಯ ದೇಶಗಳ ಜನ ಸಾಮಾನ್ಯವಾಗಿ ಕ್ರಾಂತಿಗೆ ವಿರೋಧಿಗಳೆಂದು ತೋರಿಸಿಕೊಳ್ಳುವುದು ಇಂದಿನ ಸತ್ಯ. ಅದರರ್ಥ, ಅವರು ಕೆಲವು ನಿರ್ದಿಷ್ಟ ಕ್ರಾಂತಿಗಳಿಗೆ ವಿರೋಧಿಗಳು ಎಂದಷ್ಟೇ ಅರ್ಥ, ಏಕೆಂದರೆ ತಮ್ಮದೇ ಕ್ರಾಂತಿಗಳನ್ನು ಅವರು ಪೋಷಿಸಿಕೊಂಡು ಬಂದಿದ್ದಾರೆ. ಹೋಟೇಲಿನಲ್ಲಿ ತಿಂಡಿ ತಿನ್ನುವಾಗ ಬೇರೆ ಗ್ರಾಹಕರ ತಟ್ಟೆಗಳಲ್ಲಿರುವ ತಿಂಡಿ ಹೆಚ್ಚು ಆಕರ್ಷಕವಂತೆ; ಹಾಗೆ, ಯೂರೋಪಿನ ದೇಶಗಳಿಗೆ ಬೇರೆ ದೇಶಗಳ ಕ್ರಾಂತಿಗಳು ಅದೇಕೋ ಕೆಲವೇಳೆ ರುಚಿಸುತ್ತವೆ. ಈ ಜನಗಳಲ್ಲಿ ಯಾರಾದರೂ ಅಮೆರಿಕಾದ ೧೭೭೬ರ ಘಟನೆಯನ್ನು ವಿರೋಧಿಸುವವರಿದ್ದಾರೆಯೆ? ಆ ವರ್ಷ ಇಂಗ್ಲೆಂಡಿನ ಪ್ರಭುತ್ವವು ಅಮೆರಿಕಾದಲ್ಲಿ ಪರಿಸಮಾಪ್ತಿಗೊಂಡಿತು. ಅದು ಅಮೆರಿಕಾದ ಕ್ರಾಂತಿಯುಗ. ಅಂತೆಯೇ, ಐರ್ಲೆಂಡ್-ಭಾರತ-ಮಲಯೇಷ್ಯ-ಕೀನ್ಯ, ಹೀಗೆ ಹಲವು ದೇಶಗಳು ರಾಜಕೀಯ ಸ್ವಾತಂತ್ರ್ಯ ಪಡೆಯಲು ವಸಾಹತುಶಾಹಿಯನ್ನು ಒದ್ದೋಡಿಸಿದಾಗ ಯೂರೋಪಿನ ಬಹುತೇಕ ದೇಶಗಳು ವ್ಯಥಿಸಲಿಲ್ಲ. ಹೋಗಲಿ, ಸೋವಿಯೆತ್ ಒಕ್ಕೂಟ ಮತ್ತು ಅದರ ಮಿತ್ರ ರಾಷ್ಟ್ರಗಳು ಎರಡು ದಶಕಗಳ ಹಿಂದೆ ಪತನಗೊಂಡಾಗ ವ್ಯಥಿಸಿದರೆ? ಅಂತಹ ಕ್ರಾಂತಿಗಳೇಕೆ ಈ ಪಾಶ್ಚಿಮಾತ್ಯ ದೇಶಗಳಿಗೆ ಆಪ್ಯಾಯಮಾನವಾಗಿವೆ? ಸ್ಪಾರ್ಟಕಸ್ ನೇತೃತ್ವದಲ್ಲಿ ಗುಲಾಮರು ದಂಗೆಯೆದ್ದು ಗುಲಾಮಿ ಪದ್ಧತಿಯನ್ನು ನಾಶಮಾಡಿದ್ದನ್ನು ಇಂದಿನ ಇಟಲಿ ಇತಿಹಾಸದ ಒಂದು ಅನಾಹುತವೆಂದು ಭಾವಿಸುವುದಿಲ್ಲ. ಈ ಎಲ್ಲಾ ಕ್ರಾಂತಿ ಸಂದರ್ಭಗಳಲ್ಲೂ ಹಿಂಸೆ ಇದ್ದುದು ವಾಸ್ತವ ಸತ್ಯ. ರಷ್ಯದ ಬಾಲ್ಶೆವಿಕ್ ಕ್ರಾಂತಿಯ ಸಂದರ್ಭದ ಹಿಂಸೆಗಿಂತಲೂ ಹತ್ತುಪಟ್ಟು, ನೂರುಪಟ್ಟು, ಹೆಚ್ಚು ಹಿಂಸೆ ನಡೆದಿದ್ದ ಸಂದರ್ಭಗಳು ಏಕೆ ಟೀಕೆಗೆ ಗುರಿಯಾಗುವುದಿಲ್ಲ? ಅವನ್ನೆಲ್ಲಾ ರಮಣೀಯವೆಂದು ಬಗೆಯುವ ಮಂದಿ ''ಬಾಲ್ಶೆವಿಕ್ ಕ್ರಾಂತಿಯು ಸಮಾಜವಾದಿ ಕ್ರಾಂತಿಯಾದ್ದರಿಂದ ನಾವದನ್ನು ವಿರೋಧಿಸುತ್ತೇವೆ'' ಎಂದೇಕೆ ಪ್ರಾಮಾಣಿಕವಾಗಿ ಒಪ್ಪಬಾರದು? ಅವರಿಗೆ ಕ್ರಾಂತಿ ಸ್ವಾಗತಾರ್ಹ, ಆದರೆ ಅದು ಬೂರ್ಷ್ವಾ ಕ್ರಾಂತಿಯಾಗಿರಬೇಕು, ಸಮಾಜವಾದಿ ಕ್ರಾಂತಿಯಾಗಿರಬಾರದು! ಅಂದರೆ, ಅದು ವರ್ಗದ ಪ್ರಶ್ನೆ ಎಂದರ್ಥ. ಆಳುವ ವರ್ಗವು ದುಡಿಯುವ ವರ್ಗವಾಗಿರದೆ ಬಂಡವಳಿಗ ವರ್ಗವಾಗಿದ್ದರೆ ಅವರಿಗೆ ಅಭ್ಯಂತರವಿಲ್ಲ; ಆದರೆ ಹೊ ಚಿ ಮಿನ್ಹ್, ಕ್ಯಾಸ್ಟ್ರೋ, ಚಾವೇಝ್, ಲುಮುಂಬ, ಅಲೆಂಡೆ ಮತ್ತು ಅವರೆಲ್ಲಾ ಪ್ರತಿನಿಧಿಸುವ ವರ್ಗವು ಕ್ರಾಂತಿಯ ಮೂಲಕ ಆಳುವ ವರ್ಗಬಾರದು, ಅಷ್ಟೆ!

ಹಿಂಸೆಯನ್ನು ಸರ್ವಥಾ ವಿರೋಧಿಸುವ ಶಾಂತಿಪ್ರಿಯರ ಒಂದು ಸಣ್ಣ ಗುಂಪಿರುತ್ತದೆ, ಆ ಗುಂಪಿನವರ ಧೈರ್ಯ ಮತ್ತು ತತ್ವಬದ್ಧತೆ ಪ್ರಶಂಸಾರ್ಹವಾದ್ದು. ಬರ್ಟ್ರಂಡ್ ರಸೆಲ್

ಅಂಥವರು ಮೊದಲ ಮಹಾಯುದ್ಧದಲ್ಲಿ ತಮ್ಮ ದೇಶದ ಪಾತ್ರವನ್ನು ವಿರೋಧಿಸಿ ಕಾರಾಗೃಹಗಳಿಗೆ ಹೋಗಿದ್ದರು. ಈ ವಿಧದ ಶಾಂತಿಪ್ರಿಯರು ವಿರೋಧಿಸುವುದು ಕೇವಲ ಹಿಂಸೆಯನ್ನಲ್ಲ, ಹಿಂಸೆಯನ್ನು ಸಾರ್ವತ್ರಿಕವಾಗಿ ಎಲ್ಲರೂ ವಿರೋಧಿಸುತ್ತಾರೆ, ಯಾರೋ ಕ್ರೂರಿಗಳನ್ನು ಬಿಟ್ಟು. ಅಂತಹ ಕ್ರೂರಿಗಳ ವಿಕೃತ ಮನಸ್ಸಿನ ಕತೆಯೇ ಬೇರೆ. ಶಾಂತಿಪ್ರಿಯರು ''ಯುದ್ಧವು ಅಸಹ್ಯ'' ಎಂದು ಲಪಲಪಿಸುತ್ತಿದ್ದರೆ ಅಂಥವರ ಜೊತೆ ವಾದ ಮಾಡುವುದು ವ್ಯರ್ಥ; ಏಕೆಂದರೆ ಯುದ್ಧವು ಅಸಹ್ಯವೆಂದು ಎಲ್ಲರೂ ಹೇಳುತ್ತಾರೆ. ಹಾಗಿದ್ದರೆ ಯಾವ ಶಾಂತಿಪ್ರಿಯರ ಜೊತೆ ವಾದವು ಅರ್ಥವತ್ತಾಗಿರುತ್ತದೆ ? ಯಾರು ಹಿಂಸೆಯನ್ನು, ಅಂದರೆ ಎಲ್ಲ ವಿಧದ ಹಿಂಸೆಗಳನ್ನು, ವಿರೋಧಿಸುತ್ತಾರೋ ಅಂಥವರ ಜೊತೆ. ಇರಾಕ್, ಕ್ಯೂಬ, ಅಂಗೋಲ, ವಿಯೆಟ್ನಾಂ, ಚಿಲಿ, ಮುಂತಾದ ದೇಶಗಳ ಮೇಲೆ ವಿವಿಧ ಕಾಲಘಟ್ಟಗಳಲ್ಲಿ ಅಮೆರಿಕಾ ಹರಿಬಿಟ್ಟ ಹಿಂಸೆಯನ್ನು ಮನ್ನಾ ಮಾಡಿ ''ಸೋವಿಯೆತ್ ಒಕ್ಕೂಟದ ಪ್ರಭುತ್ವವು ಜನತೆಯನ್ನು ಹಿಂಸಿಸುತ್ತಿತ್ತು'' ಅಥವಾ ''ಚೀನಾ ಪ್ರಭುತ್ವವು ತನ್ನ ನಾಗರಿಕರನ್ನು ಹಿಂಸಿಸುತ್ತಿದೆ'' ಎಂದು ಅರಚುತ್ತಿದ್ದರೆ ಅದರ ಹಿಂದೆ ಎಂಥದೋ ಕೆಟ್ಟ ಹುನ್ನಾರವಿದೆಯೆಂಬುದನ್ನು ಹೇಳಬೇಕಾಗುತ್ತದೆ. ''ಶುದ್ಧ ಶಾಂತಿಪ್ರಿಯರು'' ಒಬ್ಬ ಕೊಲೆಗಾರನ ತಲೆಯನ್ನು ಜಜ್ಜಲು ಒಪ್ಪಿಯಾರು, ಆದರೆ ಪುಡಿ ಪುಡಿ ಮಾಡಲು ಒಪ್ಪುವುದಿಲ್ಲ. ಆ ಕೊಲೆಗಾರ ಒಂದು ಮಕ್ಕಳ ಶಾಲೆಗೆ ನುಗ್ಗಿ ಬಂದೂಕಿನಿಂದ ಮಕ್ಕಳನ್ನು ಕೊಲ್ಲುವಂಥವನಾದರೆ ? ಅಥವಾ, ಚೌಡಯ್ಯ ಸ್ಮಾರಕ ಭವನಕ್ಕೆ ನುಗ್ಗಿ ಅಲ್ಲಿ ಸಂಗೀತ ಕೇಳುತ್ತಿರುವವರನ್ನು ಗುಂಡಿಟ್ಟು ಕೊಂದರೆ ? ಆಗಲೂ ''ಶಾಂತಿಪ್ರಿಯರು'' ತುಟಿ ಎರಡು ಮಾಡದೆ ಇರುತ್ತಾರೆಯೆ ? ಹಾಗೆ ಮಾಡಿದರೆ ಅದು ಅನೀತಿಯೇ ಸರಿ. ಆತ್ಯಂತಿಕ ಮತ್ತು ಅಸಾಧಾರಣ ಸಂದರ್ಭಗಳಲ್ಲಿ 'ಹಿಂಸೆ' ಮಾನ್ಯತೆ ಪಡೆಯುತ್ತದೆ. ವಿಶ್ವಸಂಸ್ಥೆಯ ಒಡಂಬಡಿಕೆಯಲ್ಲೂ ಅದುಂಟು. ಆದ್ದರಿಂದ ಯಾವುದು ''ಆತ್ಯಂತಿಕ ಮತ್ತು ಅಸಾಧಾರಣ'' ಸಂದರ್ಭ ಎನ್ನುವುದು ಪ್ರಶ್ನೆ. ಪ್ಯಾಲಿಸ್ಟೈನಿನ ಜನರನ್ನು ಇಸ್ರೇಲ್ ಕೊಲ್ಲುವುದು ಅಂತಹ ಸಂದರ್ಭದಲ್ಲೆ? ಅಥವಾ, ಅಫ್ಘಾನಿಸ್ತಾನದ ಹಳ್ಳಿಗಳ ಮೇಲೆ ಒಬಾಮ ಡ್ರೋನ್‌ಗಳಿಂದ ಬಾಂಬು ಸುರಿಸುವುದು ಅಂತಹ ಸಂದರ್ಭವೊ ? ಇಲ್ಲವೆ, ಇನ್ನು ಸಹಿಸಲು ಸಾಧ್ಯವಿಲ್ಲವೆಂಬ ರೀತಿಯ ದೌರ್ಜನ್ಯಕ್ಕೆ ಗುರಿಯಾದ ಒಬ್ಬ ದಲಿತನು ಭಾರತದ ಯಾವುದೋ ಹಳ್ಳಿಯಲ್ಲಿ ಸಿಡಿದೆದ್ದರೆ ಮಾತ್ರ ಅದು ''ಹಿಂಸೆ'' ಎನಿಸಿಕೊಳ್ಳುತ್ತದೆಯೆ ? ಹಾಗಿದ್ದರೆ ಯಾವಾಗ 'ಹಿಂಸೆ' ಮಾನ್ಯತೆಗೆ ಅರ್ಹವಾಗುತ್ತದೆ ? ಮೊದಲಿಗೆ, ಅದು ಸ್ವ-ರಕ್ಷಣೆಗಾಗಿರಬೇಕು, ಬೇರೆಲ್ಲ ಕ್ರಮಗಳೂ ಯತ್ನಿಸಲಾಗಿದ್ದು, ಪೂರ್ತಿ ಸೋತಾಗಿನ ಕಡೆಯ ಕ್ರಮವಾಗಿರಬೇಕು, ಯಾವುದೋ ದೊಡ್ಡ ಪಾತಕದ ನಿವಾರಣೆಗಾಗಿರಬೇಕು, ಸರಿತೂಕದ ಪ್ರಮಾಣದ್ದಾಗಿರಬೇಕು, ಗೆಲುವಿಗೆ ಸಮರ್ಥ ಸಾಧನವೆಂದು ಸಾಬೀತಾಗಿರಬೇಕು, ಅಮಾಯಕ ಜನರ ಕೊಲೆಗೆ ಕಾರಣವಾಗಿರಕೂಡದು, ಇತ್ಯಾದಿ ಷರತ್ತುಗಳನ್ನು ಅಂಗೀಕರಿಸುವ ಸಂದರ್ಭಗಳಲ್ಲಿ ಅದು ಮಾನ್ಯವಾದೀತೆಂದು ತೋರುತ್ತದೆ.

ಮಾರ್ಕ್ಸ್‌ವಾದವು ತನ್ನ ಸೀಮಿತ ಅವಧಿಯಲ್ಲಿ ರಕ್ತಪಾತಕ್ಕೆ ಕಾರಣವಾಗಿಯೇ ಇಲ್ಲವೆಂದು ಹೇಳಿದರೆ ಅದು ಅಸತ್ಯ. ಮಾರ್ಕ್ಸ್‌ವಾದದ ಹೆಸರಿನಲ್ಲಿ, ಆ ವಾದವನ್ನು


ಬರ್ಟ್ರಾಂಡ್ ರಸೆಲ್

ತಮ್ಮ ಮನಬಂದಂತೆ ಅರ್ಥೈಸಿಕೊಂಡು, ರಕ್ತ ಚೆಲ್ಲಿರುವವರ ಸಂಖ್ಯೆ ಅದಕ್ಕಿಂತಲೂ ಹೆಚ್ಚು. ಮಾರ್ಕ್ಸ್‌ವಾದದ ವಿರೋಧಿಗಳು ಮಾರ್ಕ್ಸ್‌ಗೆ ಮುಂಚೆ ಮತ್ತು ನಂತರ ರಕ್ತದ ಕೋಡಿ ಹರಿಸಿರುವುದು ಚರಿತ್ರೆಯ ಪುಟಗಳಲ್ಲಿ ಕಣ್ಣಲ್ಲಿ ರಕ್ತ ಬರಿಸುವಷ್ಟು ಅಗಾಧವಾಗಿದೆ. ಒಬ್ಬ ಸ್ಟಾಲಿನ್ ಇದ್ದರೆ, ಹತ್ತು ಪೋಲ್ ಪೋಟ್‌ಗಳಿದ್ದಾರೆ ಮತ್ತು ನೂರು ಜಾರ್ಜ್ ಬುಷ್‌ಗಳಿದ್ದಾರೆ. ಮಾರ್ಕ್ಸ್‌ವಾದಿಗಳೆಲ್ಲ ಸ್ಟಾಲಿನ್ನನ ಕೃತ್ಯಗಳನ್ನೆಲ್ಲ ಮನ್ನಿಸುವುದಿಲ್ಲ ಮತ್ತು ಆತನ ಬೇರೆ ಅಪಾರ ಸಾಧನೆಗಳನ್ನು ತಳ್ಳಿಹಾಕುವುದೂ ಇಲ್ಲ. ಆದರೆ ಮಾರ್ಕ್ಸ್‌ವಾದಿಗಳಲ್ಲದವರಲ್ಲಿ ನೂರಾರು ಮಂದಿ ಜರ್ಮನಿಯ ಡ್ರೆಸ್ಡೆನ್ ಮತ್ತು ಜಪಾನಿನ ಹಿರೋಶಿಮಾ ಧ್ವಂಸ ಮಾಡಿದ್ದನ್ನು ಬಲವಾಗಿ ಸಮರ್ಥಿಸುವವರಿದ್ದಾರೆ. ಮೊನ್ನೆ ಮೊನ್ನೆ ಭಾರತಕ್ಕೆ ಬಂದಿದ್ದ ಬ್ರಿಟಿಷ್ ಪ್ರಧಾನಿ ಜಲಿಯನ್‌ವಾಲಾ ಬಾಗ್ ಹತ್ಯೆಗಾಗಿ ಕ್ಷಮೆ ಕೇಳಲು ಸಹ ನಿರಾಕರಿಸಿದ ಎಂಬ ವರದಿ ಬಂದಿದ್ದಿತು. ಅಮೆರಿಕಾದ ಯಾವ ಅಧ್ಯಕ್ಷನೂ ಈವರೆಗೆ ಹಿರೋಶಿಮಾ-ನಾಗಸಾಕಿಗಳ ಮೇಲೆ ಸುರಿಸಲಾದ ಪರಮಾಣು ಬಾಂಬ್ ಸಂಬಂಧವಾಗಿ ಒಮ್ಮೆಯಾದರೂ ವಿಷಾದಿಸಿಲ್ಲ. ಬದಲಾಗಿ ಅದನ್ನು ಸಮರ್ಥಿಸಲು ವಿಚಿತ್ರವಾದ ಸುಳ್ಳು ತರ್ಕ ಬೆಳೆಸಿದ್ದಾರೆ : ''ಬಾಂಬ್ ಹಾಕಿರದಿದ್ದರೆ ಯುದ್ಧ ಮುಂದುವರಿದು ಈಗ ಸತ್ತದ್ದಕ್ಕಿಂತ ಹೆಚ್ಚು ಜನ ಸಾಯುತ್ತಿದ್ದರು. ಈಗ ಎರಡು ನಗರಗಳಲ್ಲಿ ಜನ ಮಡಿದರು. ಬಾಂಬ್ ಹಾಕಿರದಿದ್ದರೆ ನೂರಾರು ನಗರಗಳಲ್ಲಿ ಜನ ಮೃತ್ಯುವಿಗೆ ನೂಕಲ್ಪಡುತ್ತಿದ್ದರು,'' ಎಂದು. ಮಾನವ ಹೃದಯ ಇಷ್ಟು ಬರ್ಬರವಾಗಿರಲು ಸಾಧ್ಯವೇ ಎಂದು ಬೇಕಾದರೆ ಮೂಗಿನ ಮೇಲೆ ಬೆರಳಿಟ್ಟುಕೊಳ್ಳಿ !

ಇದಕ್ಕೆ ಭಿನ್ನವಾಗಿ ಸ್ವತಃ ಮಾರ್ಕ್ಸ್‌ವಾದಿಗಳನೇಕರು ಸ್ಟಾಲಿನ್ನನಂತಹ ವ್ಯಕ್ತಿಗಳು ಸೃಷ್ಟಿಸಿದ ಜನವಿರೋಧಿ ಸನ್ನಿವೇಶಗಳನ್ನು ಎತ್ತಿ ತೋರಿಸಿದ್ದಾರೆ, ವಿರೋಧ ವ್ಯಕ್ತಪಡಿಸಿದ್ದಾರೆ, ಅಂತಹ ಕೃತ್ಯಗಳು ಮರುಕಳಿಸದಿರಲು ಸಾಂಸ್ಥಿಕ ಪರ್ಯಾಯಗಳ ಹುಡುಕಾಟ ನಡೆಸಿದ್ದಾರೆ. ಆದರೆ ಬಂಡವಾಳಶಾಹಿಯ ರಕ್ತದಾಹವನ್ನು ವರ್ಣಿಸಲು ಮುಂದೆ ಬಂದಿರುವ ಬಂಡವಾಳಶಾಹಿ ಸಮರ್ಥಕರು ಯಾರಾದರೂ ಕಂಡುಬಂದಿದ್ದಾರೆಯೆ ? ಮೊದಲ ಮಹಾಯುದ್ಧದಲ್ಲಿ ಸಾಮ್ರಾಜ್ಯಗಳ ಲಾಲಸೆ ಇದ್ದ ದೇಶಗಳ ಸರ್ಕಾರಗಳು ತಮ್ಮ ಮತ್ತು ಇತರ ದೇಶಗಳ ಎಷ್ಟು ಸೈನಿಕರು ಮತ್ತು ದುಡಿಯುವ ಜನರನ್ನು ಮೃತ್ಯುಕೂಪಕ್ಕೆ ತಳ್ಳಿದವು ? ಎರಡನೆಯ ಮಹಾಯುದ್ಧದ ಪಾತಕಗಳಿಗೆ ನಾಂದಿ ಹಾಡಿದ್ದು ಹಿಟ್ಲರನನ್ನು ಚೆನ್ನಾಗಿ ಉಬ್ಬಿಸಿ, ಕೊಬ್ಬಿಸಿ, ಪೋಷಿಸಿದ ಬಂಡವಾಳಶಾಹಿ ರಾಷ್ಟ್ರಗಳ ಸರ್ಕಾರಗಳು ಮತ್ತು ಆ ಸರ್ಕಾರಗಳ ಮಾನವ ವಿರೋಧಿ ನೀತಿಗಳು ಎಂಬುದರಲ್ಲಿ ಸಂದೇಹವೇನಾದರೂ ಉಂಟೆ ? ಜನರ ಸ್ವಾತಂತ್ರ್ಯಹರಣ, ಮಾನವ ಹಕ್ಕುಗಳ ಉಲ್ಲಂಘನೆ ಎಂದೊಡನೆ ಕಮ್ಯುನಿಸ್ಟ್ ದೇಶಗಳತ್ತ ಬೊಟ್ಟುಮಾಡಿ ತೋರಿಸುವ ಧೂರ್ತತನ ರೂಢಿಯಲ್ಲಿದೆ. ಬರ್ಟ್ರಾಂಡ್ ರಸೆಲ್‌ನಂಥವರು ಕೂಡ ೧೯೨೦ರ ದಶಕದಲ್ಲಿ ದೌರ್ಜನ್ಯ ಎಂದೊಡನೆ ಲೆನಿನ್ನನ ರಷ್ಯದ ಉದಾಹರಣೆ ನೀಡುತ್ತಿದ್ದರೇ ವಿನಾ ವಸಾಹತು ದೇಶಗಳಲ್ಲಿ ಸತತವಾಗಿ ನಡೆಯುತ್ತಿದ್ದ ತೀವ್ರ ಹಿಂಸೆ ಮತ್ತು ಹತ್ಯೆಗಳ ಮಾತನ್ನಾಡುತ್ತಿರಲಿಲ್ಲ. ಲೆನಿನ್ನನ ರಷ್ಯಕ್ಕೆ ಆಗ ವಯಸ್ಸು ೧೦ ವರ್ಷಕ್ಕೂ ಕಮ್ಮಿ, ವಸಾಹತುಶಾಹಿಯ ವಯಸ್ಸು ನೂರಕ್ಕೂ ಮೀರಿತ್ತು. ಬಂಡವಾಳಶಾಹಿಯು ಮಾರ್ಕ್ಸ್‌ವಾದವನ್ನು ಹೀಯಾಳಿಸುತ್ತಿದ್ದಾಗ ವಸಾಹತು ದೇಶಗಳ ಕೆಲವು ಮಹಾ ವಿದ್ವಾಂಸರು ತಾವೂ ಅಪಸ್ವರ ಎತ್ತುವುದರಲ್ಲಿ ಹಿಂದೆ ಬೀಳಲಿಲ್ಲ. ಈಗಿನ ಸನ್ನಿವೇಶವು ಅದಕ್ಕಿಂತಲೂ ಬಹಳ ಭಿನ್ನವಲ್ಲ.

ಬಂಡವಾಳಶಾಹಿಯು ಜಾಗತಿಕ ಯುದ್ಧಗಳನ್ನು ದೊಡ್ಡ ಮತ್ತು ಚಿಕ್ಕ ಪ್ರಮಾಣಗಳಲ್ಲಿ ನಡೆಸುತ್ತಲೇ ಬಂದಿದೆ. ಜನಾಂಗ ಹತ್ಯೆ, ಕ್ಷಾಮ ಮತ್ತು ಸಂಪತ್ತಿನ ಲೂಟಿ ನಿರಂತರವಾಗಿ ಸಾಗಿದೆ. ಮಾರ್ಕ್ಸ್‌ವಾದವು ಅಂಕುಡೊಂಕು ಹಾದಿ ಹಿಡಿದಾಗ ಒಬ್ಬ ಸ್ಟಾಲಿನ್ ಬಂದಿರಬಹುದು; ಬಂಡವಾಳಶಾಹಿಯು ಯಾವಾಗಲೂ ಅಂಕುಡೊಂಕು ಹಾದಿಯಲ್ಲೇ ಸಾಗಿ ಬಂದಿದೆ, ಹಿಟ್ಲರ್ - ಮುಸ್ಸೋಲಿನಿಯಂತಹ ಹತ್ತಾರು ದೈತ್ಯರನ್ನು ಹೆತ್ತಿದೆ. ೧೮೪೦ರ ದಶಕದಲ್ಲಿ ಐರ್ಲೆಂಡಿನಲ್ಲಿ ಕ್ಷಾಮ ಭೀಕರವಾಗಿತ್ತು, ಸತ್ತವರ ಸಂಖ್ಯೆ ಹತ್ತು ಲಕ್ಷ. ಕ್ಷಾಮಕ್ಕೆ ಕಾರಣ ಬ್ರಿಟನ್ ಆ ದೇಶದ ಮೇಲೆ ಹೇರಿದ ಮುಕ್ತ ಮಾರುಕಟ್ಟೆಯ ಸೂತ್ರ, ಯಾವ ಬೆಳೆ ಬೆಳೆಯಬೇಕೆಂದು ನಿಗದಿಗೊಳಿಸಿದ ಕಾನೂನು. ಇಂತಹ ನೂರು ಸನ್ನಿವೇಶಗಳನ್ನು ವಿಶ್ವದ ಹಲವು ರಾಷ್ಟ್ರಗಳ ಸಂದರ್ಭದಲ್ಲಿ ಹೆಸರಿಸಬಹುದು. ಭಾರತದಲ್ಲಿ ಧಾತು-ಈಶ್ವರ ಕ್ಷಾಮ ಎಂದು ಕುಪ್ರಸಿದ್ಧವಾಗಿರುವುದನ್ನು ನೆನೆಯೋಣ; ಅದಕ್ಕೆ ಸಂಪೂರ್ಣವಾಗಿ ಬ್ರಿಟನ್ನಿನ ವಸಾಹತು ದರ್ಪ ಮತ್ತು ಲೂಟಿ ಕಾರಣವಾಗಿತ್ತು. ಯಾವುದು ಭೀಕರ ಹಿಂಸೆ ಎಂಬ ತುಲನೆ ಅನಗತ್ಯ, ಆದರೆ ಹಿಂಸೆ ಹುಟ್ಟಿಕೊಳ್ಳುವುದು ಹೇಗೆ ಎಂಬುದು ಆಲೋಚಿಸಬೇಕಾದ ಸಂಗತಿ. ಹವಾ ನಿಯಂತ್ರಿತ ಕೋಣೆಗಳಲ್ಲಿ ಕೂತು ವಿಚಾರಗೋಷ್ಠಿಯಲ್ಲಿ ಚರ್ಚಿಸಿಬಿಟ್ಟರೆ ಇದು ತೀರ್ಮಾನವಾಗುವುದಿಲ್ಲ; ಬದಲಾಗಿ, ದಲಿತರ ಹಟ್ಟಿಗಳಲ್ಲಿ, ಆತ್ಮಹತ್ಯೆಗೆ ಶರಣಾಗುವ ರೈತರ ಊರು-ಕೇರಿಗಳಲ್ಲಿ, ಕೃಷಿ ಭೂಮಿಯಿಂದ ನಿರ್ವಸಿತರಾಗುವ ಜಗತ್‌ಸಿಂಗ್‌ಪುರದಂತಹ ಸ್ಥಳಗಳಲ್ಲಿ, ಪರಮಾಣು ಸ್ಥಾವರಗಳನ್ನು ಬಲವಂತವಾಗಿ ಹೇರಿಸಿಕೊಳ್ಳುವ ದಾಭೋಳ್ ಸುತ್ತಮುತ್ತಲ ಊರುಗಳಲ್ಲಿ ತೀರ್ಮಾನವಾಗುತ್ತದೆ. ವಿಶ್ವದ ಪ್ರತಿಯೊಂದು ದೇಶದಲ್ಲೂ ಹಿಂಸೆಯ ಮೀಮಾಂಸೆಗೆ ಇವೇ ಮಾಪಕಗಳು, ಪರಿಕರಗಳು.

ಮಾರ್ಕ್ಸ್ ತನ್ನ 'ಬಂಡವಾಳ' ಎಂಬ ಗ್ರಂಥದಲ್ಲಿ ಬ್ರಿಟನ್ನಿನ ರೈತರನ್ನು ಭೂಮಿಯಿಂದ ಉಚ್ಚಾಟಿಸಿದ ಪ್ರಸಂಗವನ್ನು ಕುರಿತು ಬರೆಯುವಾಗ ಉದ್ವೇಗಕ್ಕೆ ಒಳಗಾಗುತ್ತಾನೆ, ಬಂಡವಾಳವು ತನ್ನ ದೇಹದ ಪ್ರತಿಯೊಂದು ರಂಧ್ರದಿಂದಲೂ ಜಿನುಗುವ ರಕ್ತದಿಂದ ಪೂರ್ತಿ ರಕ್ತಮಯವಾಗಿದೆ ಎಂದು

ನೊಂದುಕೊಳ್ಳುತ್ತಾನೆ. ಈಗ ಬ್ರಿಟನ್ನಿನ ಗ್ರಾಮಾಂತರ ಪ್ರದೇಶಗಳಲ್ಲಿ ಹಸಿರೋ ಹಸಿರು, ಶಾಂತಿಯೋ ಶಾಂತಿ, ಎಂದು ಸ್ತುತಿಸುವ ವಿದ್ವಾಂಸರಿದ್ದಾರೆ. ರಾಜಕುಮಾರ ಚಾರ್ಲ್ಸ್‌ಗೆ ಎಷ್ಟು ಅಗಾಧವಾದ ಭೂಮಿಯ ಆಸ್ತಿ ಉಂಟೆಂದು ಬಣ್ಣಿಸುವವರಿದ್ದಾರೆ; ಆದರೆ ಆ ಹಸಿರಿನ ಹಿಂದೆ ಹದಿನೆಂಟನೆಯ ಶತಮಾನದ ರೈತ ಸಮುದಾಯದ ರಕ್ತದ ಚಾರ್ಲ್ಸ್‌ರಾಜ ಸಾಗರವಿದೆ, ಅದು ಅಚ್ಚಗೆಂಪಿನ ರಕ್ತ. ಕ್ಯೂಬದ ಕ್ರಾಂತಿಯ ಬಗ್ಗೆ ಕಣ್ಣೀರು ಸುರಿಸುವ ವಿದ್ವಾಂಸರು ಮತ್ತು ರಾಜಕಾರಣಿಗಳು ಇದನ್ನು ಮನಗಾಣಬೇಕು. ಬ್ರಿಟನ್ ಸುರಿಸಿದ ರೈತರ ರಕ್ತದೊಡನೆ ಹೋಲಿಸಿದರೆ ಕ್ಯೂಬದ ಕ್ರಾಂತಿಯು ಒಂದು ಚಿಕ್ಕ ಔತಣಕೂಟ ಎನ್ನಬೇಕು!

ಸಿದ್ಧಾಂತದ ಪ್ರಶ್ನೆ ಬಂದರೆ ಮಾರ್ಕ್ಸ್‌ವಾದವು ಬಂಡವಾಳಶಾಹಿಗೆ ಅಂತರ್ಗತವಾದ ವೈರುಧ್ಯದ ಸ್ವರೂಪವನ್ನು ಪರಿಗಣಿಸುತ್ತದೆ. ಅದು ಒಂದು ಹಂತದಲ್ಲಿ ವರ್ಗ ಸಂಘರ್ಷ, ಇನ್ನೊಂದು ಹಂತದಲ್ಲಿ ವರ್ಗ ಸಂಘರ್ಷದ ಉನ್ನತ ಹಂತವಾದ ಮಹಾಯುದ್ಧ. ಬಂಡವಾಳಶಾಹಿ ರಾಷ್ಟ್ರಗಳು ಬೇರೆ ರಾಷ್ಟ್ರಗಳ ಸಂಪತ್ತನ್ನು ದೋಚುವುದಕ್ಕಾಗಿ, ಅಲ್ಲಿಯ ಸಂಪನ್ಮೂಲಗಳನ್ನು ಸ್ವಾಧೀನಪಡಿಸಿಕೊಳ್ಳಲು ಆರಂಭಿಸುವ ಯುದ್ಧಗಳು ಮಹಾಯುದ್ಧಗಳಾಗುತ್ತವೆ. ಸಂಪತ್ತು ಚರ್ಚಿಲ್-ಟ್ರೂಮನ್‌ರದ್ದಾಗಬೇಕೋ, ಹಿಟ್ಲರನದ್ದಾಗಬೇಕೋ ಎಂಬುದು ಪ್ರಶ್ನೆ; ಆಯಾ ದೇಶಗಳ ಜನರದ್ದಾಗಬೇಕೆಂದು ಎರಡು ಬಣಗಳೂ ಹೇಳಲಿಲ್ಲ, ಹೇಳುವುದಿಲ್ಲ. ಹಾಗೆಂದು ಹೇಳಿ, ಅದಕ್ಕಾಗಿ ಪಣತೊಟ್ಟು ಸೆಣಸುವುದು ಮಾರ್ಕ್ಸ್‌ವಾದ. ಹಾಗಿದ್ದರೆ ಯಾವುದು ಹಿಂಸೆ ಮತ್ತು ಯಾವುದು ಹಿಂಸೆಯ ನಿರೋಧಕ ಶಕ್ತಿ? ಅಂತರರಾಷ್ಟ್ರೀಯ ಸಮಾಜವಾದಿ ಚಳುವಳಿಯು ಯಾವತ್ತೂ ಶಾಂತಿಯ ಗುರಿಯನ್ನು ಸಾಧಿಸಲು ಬದ್ಧವಾಗಿಯೇ ಇದೆ. ಬಾಲ್ಶೆವಿಕರು ಅಧಿಕಾರಕ್ಕೆ ಬಂದನಂತರ ರಷ್ಯದಲ್ಲಿ ಅವರು ಮೊದಲು ಮಾಡಿದ ಕೆಲಸ ಮೊದಲ ಮಹಾಯುದ್ಧದಿಂದ ಹಿಂದೆ ಸರಿದಿದ್ದು ಎಂಬ ನೆನಪಿರಲಿ. ಅದನ್ನು ಬೆಂಬಲಿಸಿದ ರೋಸಾ ಲುಕ್ಸೆಂಬರ್ಗ್ ಮತ್ತು ಕಾರ್ಲ್ಸ್ ಲೀಬ್‌ನೆಖ್ಟ್ ಎಂಬ ಮಾರ್ಕ್ಸ್‌ವಾದಿಗಳನ್ನು ಜರ್ಮನಿಯ ಬರ್ಲಿನ್ನಿನಲ್ಲಿ ಕೊಂದುಹಾಕಿದ್ದು ಬಂಡವಾಳಶಾಹಿಯ ಭಂಟರು. ವಿಶ್ವದ ದುಡಿಯುವ ವರ್ಗದ ಚಳುವಳಿಯು ಹಿಂಸೆಯನ್ನು ಪ್ರಚೋದಿಸಲು ಕ್ರಮ ಕೈಗೊಂಡಿಲ್ಲ, ಅದನ್ನು ಪೂರ್ತಿ ಹತ್ತಿಕ್ಕಲು ಕ್ರಮ ಕೈಗೊಂಡಿದೆ, ಅದಕ್ಕೆ ಬದ್ಧವಾಗಿದೆ.

ಮಾರ್ಕ್ಸ್‌ವಾದಿಗಳು ಅನವಶ್ಯಕ ಸಾಹಸಿಗತನವನ್ನು ಯಾವಾಗಲೂ ವಿರೋಧಿಸಿದ್ದಾರೆ. ಬಂಡವಾಳಶಾಹಿ ಪ್ರಭುತ್ವದ ವಿರುದ್ಧ ಸೆಣಸುವಾಗ ಕ್ರಾಂತಿಕಾರಿಗಳನ್ನು ಬಲಿಪೀಠಕ್ಕೆ ಕಳಿಸುವ ಇರಾದೆ ಅವರಿಗಿಲ್ಲ. ಬಾಲ್ಶೆವಿಕ್ ಕ್ರಾಂತಿಯನ್ನು ಯಾರೋ ಗುಟ್ಟಾಗಿ ಮಾಡಿದ್ದಲ್ಲ, ಚುನಾಯಿತ ಪ್ರತಿನಿಧಿಗಳು ಮತ್ತು ಸೋವಿಯೆತ್‌ಗಳಲ್ಲಿ ಸಂಘಟಿತರಾಗಿದ್ದ ಸಾರ್ವಜನಿಕರು ಮಾಡಿದ್ದು. ತೋರಿಕೆಯ ಧೀರತನ ಮಾರ್ಕ್ಸ್‌ಗೆ ಹಿಡಿಸಿರಲಿಲ್ಲ, ಕ್ರಾಂತಿಗೆ ಪೂರ್ವಭಾವಿಯಾಗಿ ಕೆಲವು ಭೌತಿಕ ಸನ್ನಿವೇಶಗಳು ಕೂಡಿಬಂದಿರಬೇಕೆಂಬುದು ಅವನ ಷರತ್ತು. ಧೈರ್ಯ ಮತ್ತು ಸಾಹಸ ಇದ್ದರೆ ಸಾಕು, ಕ್ರಾಂತಿ ಸುನಿಶ್ಚಿತ, ಎಂಬುದು ಅವನ ಸೂತ್ರವಲ್ಲ. ಆಳುವ ವರ್ಗವು ಬಲಹೀನವಾಗಿ ಒಡೆದ ಮನೆಯಾಗಿದ್ದರೆ, ಬಂಡವಾಳಶಾಹಿಯು ತೀವ್ರ ಮುಗ್ಗಟ್ಟಿನಲ್ಲಿ ಸಿಲುಕಿದ್ದರೆ, ಸಮಾಜವಾದಿ ಶಕ್ತಿಗಳು ಬಲಯುತವಾಗಿದ್ದರೆ ಮತ್ತು ಸುಸಂಘಟಿತವಾಗಿದ್ದರೆ ಹೆಚ್ಚು ಸುಗಮ; ಬಂಡವಾಳಶಾಹಿ ಸರ್ಕಾರವು ಉಲ್ಲಾಸದಿಂದ ನೆಲೆಸಿದ್ದು ಸಮಾಜವಾದಿ ಶಕ್ತಿಯು ಅಂಜುಬುರುಕ ಸ್ಥಿತಿಯಲ್ಲಿದ್ದರೆ ಕ್ರಾಂತಿಗೆ ಸಮಯ ಪಕ್ವವಾಗಿಲ್ಲವೆಂದರ್ಥ. ಮಾರ್ಕ್ಸ್‌ನ ದೃಷ್ಟಿಯಲ್ಲಿ ಭೌತವಾದಿ ಸಿದ್ಧಾಂತಕ್ಕೂ ಕ್ರಾಂತಿಕಾರಿ ಹೋರಾಟ (ಅಥವಾ 'ಹಿಂಸೆ')ಕ್ಕೂ ಸಂಬಂಧವಿದೆ. ಚರಿತ್ರೆಯಲ್ಲಿ ಜನಸಮುದಾಯದ ಹೋರಾಟಗಳು ಶಾಂತಿಯುತವಾಗಿಯೇ ನಡೆದಿವೆ. ಚೈತನ್ಯ ಮಹಾಪ್ರಭು ಬಂಗಾಳದ ನವದ್ವೀಪದಿಂದ ಪುರಿಯವರೆಗೆ ರೈತರೊಡಗೂಡಿ ಬಂದಾಗ ಅಚ್ಚಳಿಯದ ಶಾಂತಿ ಇತ್ತು. ಬ್ರಿಟನ್ನಿನಲ್ಲಿ ಚಾರ್ಟಿಸ್ಟರು ಪಾರ್ಲಿಮೆಂಟಿಗೆ ಮನವಿ ಸಲ್ಲಿಸ ಹೊರಟಾಗಿನಿಂದ ೧೯೩೦ರ ಹಸಿವಿನ ಮೆರವಣಿಗೆಗಳವರೆಗೆ ಚಳುವಳಿಗಳು ಯಾವಾಗಲೂ ಶಾಂತಿಯುತವೇ ಆಗಿದ್ದವು. ದುಡಿಯುವ ವರ್ಗದ ಚಳುವಳಿಗಳನ್ನು ಸಿಟ್ಟಿಗೆಬ್ಬಿಸಿದಾಗ ಮಾತ್ರ ಸನ್ನಿವೇಶ ಬೇರೆ ಇದ್ದಿರಬಹುದು, ಅಷ್ಟೆ. ಮಹಿಳೆಯರಿಗೆ ಮತದಾನದ ಹಕ್ಕಿಲ್ಲದಿದ್ದಾಗ (೧೯೦೦ರ ದಶಕ) ನಡೆದ ಭಾರಿ ಚಳುವಳಿಯು ಶಾಂತಿಯನ್ನು ಕದಡಲಿಲ್ಲ. ಅದಕ್ಕೆ ಭಿನ್ನವಾಗಿ ಆಳುವ ವರ್ಗವು ಯಥೇಚ್ಛವಾಗಿ ಲಾಠಿ-ಗುಂಡುಗಳನ್ನು ಬಳಸಿದೆ. ಉದಾಹರಣೆಗೆ, ರೈತನಾಯಕ ಥಾಮಸ್ ಮುನ್‌ಜ಼ರ್‌ನನ್ನು ಜರ್ಮನಿಯಲ್ಲಿ ಗುಂಡಿಕ್ಕಿ ಕೊಂದಿದ್ದರು. ಮುನ್‌ಜ಼ರ್ ಒಬ್ಬ ಕ್ರೈಸ್ತ ಪಾದ್ರಿಯಾಗಿದ್ದ. ದುಡಿಯುವ ವರ್ಗದ ಬಳಿ ಮದ್ದು-ಗುಂಡುಗಳಿಲ್ಲ; ಅದಿರುವುದು ಬಂಡವಾಳಶಾಹಿ ಪ್ರಭುತ್ವದ ಬಳಿ. ಜರ್ಮನಿಯ ತತ್ತ್ವಶಾಸ್ತ್ರಜ್ಞ ವಾಲ್ಟರ್ ಬೆಂಜಮಿನ್ ಹೇಳಿದ್ದಂತೆ ಕ್ರಾಂತಿಯು ಎರ್ರಾಬಿರ್ರಿ ಓಡುವ ರೈಲಲ್ಲ; ಅದು ತುರ್ತು ಬ್ರೇಕ್‌ಗಳನ್ನು ಹಾಕುತ್ತಲೇ ಚಲಿಸುತ್ತದೆ. ಎಗ್ಗಿಲ್ಲದೆ ಹೇಗೆಂದರೆ ಹಾಗೆ ನುಗ್ಗುವುದು ಬಂಡವಾಳಶಾಹಿಯ ರೈಲು ಮಾತ್ರ! ಏಕೆಂದರೆ, ಅದರ ಮಾರುಕಟ್ಟೆ ಶಕ್ತಿಗಳು ಅನಿಯಂತ್ರಿತ. ಈ ದುಷ್ಟ ಪ್ರಾಣಿಗೆ ಮೂಗುದಾರ ಹಾಕಲೆಣಿಸುವುದು ಸಮಾಜವಾದ; ಅದು ಸಮುದಾಯದ ನಿಯಂತ್ರಣದಲ್ಲಿರುತ್ತದೆ.

ಸಮಾಜವಾದಿ ಕ್ರಾಂತಿಗಳು ಹಿಂಸಾಯುತವಾಗಿದ್ದರೆ ಅದಕ್ಕೆ ಆಸ್ತಿವಂತ ವರ್ಗವು ತನ್ನ ಕಪಿಮುಷ್ಟಿಯನ್ನು ಸಡಿಲಗೊಳಿಸದಿರುವುದು ಕಾರಣ. ಹಾಗಿದ್ದಾಗಲೂ ಶಕ್ತಿ ಪ್ರದರ್ಶನವನ್ನು ಕನಿಷ್ಠ ಮಟ್ಟಕ್ಕಿಳಿಸಲು ಸಾಧ್ಯ. ಚೀಣಾದ ೧೯೪೯ರ ಕ್ರಾಂತಿಗೆ ಮುನ್ನ ಚಿಯಾಂಗ್ ಕೈ-ಶೇಕ್ ಲಕ್ಷಗಟ್ಟಲೆ ಕಮ್ಯುನಿಸ್ಟರನ್ನು ಕೊಂದ, ಆದರೆ ಕಮ್ಯುನಿಸ್ಟರು ಯಾರನ್ನಾದರೂ ಹಾಗೆ ಕೊಂದ ವರದಿಗಳಿವೆಯೆ? ಮಾರ್ಕ್ಸ್‌ವಾದಕ್ಕೆ ಕ್ರಾಂತಿಯೆಂದರೆ ಪ್ರಭುತ್ವವನ್ನು ಕ್ಷಿಪ್ರ ಕ್ರಾಂತಿಯಿಂದ ಸೆಳೆದುಕೊಳ್ಳುವುದಲ್ಲ. ಪ್ರಭುತ್ವಕ್ಕೆ ಮಣ್ಣು ಮುಕ್ಕಿಸುವುದಷ್ಟೇ ಕ್ರಾಂತಿಯ ಆಶಯವಲ್ಲ. ಚಿಲಿಯ ಪಿನೋಶೆಯ ಮಾರ್ಗವು ಮಾರ್ಕ್ಸ್‌ವಾದಿ ಅಲೆಂಡೆಯ ಮಾರ್ಗವಲ್ಲ! ಒಂದು ಸಾಮಾಜಿಕ ವರ್ಗವನ್ನು ಬದಿಗೆ ಸರಿಸಿ ಬೇರೊಂದು ವರ್ಗವು ಆ ಸ್ಥಾನದಲ್ಲಿ ಅಧಿಕಾರಕ್ಕೆ ಬರುವುದು ನಿಜಾರ್ಥದಲ್ಲಿ ಕ್ರಾಂತಿ; ಅದು ವ್ಯಕ್ತಿಗಳ ಉಚ್ಚಾಟನೆಯ ತಂತ್ರವಲ್ಲ. ಅಂದರೆ, ಬೂರ್ಷ್ವಾ ಅಥವಾ ಬಂಡವಾಳಶಾಹಿ ಮಧ್ಯಮ ವರ್ಗದಿಂದ ಸಂಘಟಿತ ದುಡಿಯುವ ವರ್ಗವು, ತನ್ನ ಬೇರೆ ಮೈತ್ರಿಕೂಟಗಳ ಜೊತೆ ಸೇರಿ, ಅಧಿಕಾರ ಪಡೆಯುವುದು ಸಮಾಜವಾದಿ ಕ್ರಾಂತಿ. ಬಂಡವಾಳಶಾಹಿಯಡಿ ಈ ವರ್ಗವೇ ಬಹುಸಂಖ್ಯಾತವೆಂಬುದು ಮಾರ್ಕ್ಸ್‌ನ ಅಭಿಪ್ರಾಯ. ಅಂದರೆ, ಕ್ರಾಂತಿಯು ಬಹುಸಂಖ್ಯಾತರ ಸಾಮೂಹಿಕ ಕ್ರಿಯೆ, ಯಾವುದೋ ಪೋಕರಿಗಳ ಹುಚ್ಚಾಟವಲ್ಲ. ಸಮಾಜವಾದವು ಜನಪ್ರಿಯ ಸ್ವಯಮಾಡಳಿತದ ಸರ್ಕಾರವಾದ್ದರಿಂದ ನಿಮ್ಮ ಪರವಾಗಿ ಬೇರೆ ಯಾರೋ ಸಮಾಜವಾದಿ ಕ್ರಾಂತಿ ಮಾಡುವುದಿಲ್ಲ, ನಿಮ್ಮ ಪರವಾಗಿ ಬೇರೆ ಯಾರೋ ಒಳ್ಳೆಯ ಹಾಕಿ ಆಟಗಾರರಾಗುವುದಿಲ್ಲವಲ್ಲ, ಹಾಗೆ. ಸಾಹಿತಿ ಜಿ. ಕೆ. ಚೆಸ್ಟರ್‌ಟನ್ ಹೇಳಿದ್ದಂತೆ ಜನಪ್ರಿಯ ಸ್ವಯಂ ನಿರ್ಧಾರವು ''ನಾವೇ ಬರೆಯುವ ಪ್ರೇಮಪತ್ರಗಳಿದ್ದಂತೆ, ನಮ್ಮ ಮೂಗು ನಾವೇ ಒರೆಸಿಕೊಳ್ಳುವಂತೆ. ಅವನ್ನು ನಾವೆಷ್ಟೇ ಕಳಪೆಯಾಗಿ ಮಾಡಿದರೂ ಸರಿ, ನಾವೇ ಮಾಡಿಕೊಳ್ಳಬೇಕಷ್ಟೆ.'' ಯೋಜನಾ ಆಯೋಗದ ಅಧ್ಯಕ್ಷ ಅಹ್ಲುವಾಲಿಯ ಸಹ ಅವನ್ನು ತಾನೇ ಮಾಡಿಕೊಳ್ಳಬೇಕು. ಹತ್ತು ಮಂದಿ ಪಿತೂರಿಗಾರರು ಸೇರಿ ಕ್ರಾಂತಿ ಮಾಡಿ ಜನಕ್ಕೆ ಅಧಿಕಾರವನ್ನು ಹಸ್ತಾಂತರಿಸುವುದಿಲ್ಲ, ಹೊರಗೆಲ್ಲೋ ನಡೆಸಿ

ಅದನ್ನು ನಮ್ಮ ದೇಶಕ್ಕೆ ರವಾನಿಸಲು ಸಹ ಸಾಧ್ಯವಿಲ್ಲವೆಂದು ಲೆನಿನ್ ಹೇಳುತ್ತಿದ್ದ. ನಿಮ್ಮ ಹೆಸರಿನಲ್ಲಿ ಒಂದು ಪದ್ಯವನ್ನು ಬೇರೆಯವರು ಬರೆದುಕೊಡಬಹುದು, ಉಪ್ಪಿನಕಾಯಿ ತಯಾರಿಸಿಕೊಡಬಹುದು, ಆದರೆ ಕ್ರಾಂತಿ ಮಾಡಲಾಗುವುದಿಲ್ಲ, ಅದನ್ನು ನೀವೇ ಮಾಡಿಕೊಳ್ಳಬೇಕು. ಹಾಗೆ ಮಾಡಿದಾಗ ಅಧಿಕಾರವಿಲ್ಲದಿದ್ದವರಿಗೆ ಅನುಭವ, ವಿಧಾನ, ಸ್ವಯಂಶಕ್ತಿ, ಎಲ್ಲಾ ದೊರೆಯುತ್ತವೆ, ಸಮಾಜದ ಪುನರ್‌ರಚನೆಗೆ ಅನುವು ಮಾಡಿಕೊಡುತ್ತದೆ. ಅಂದರೆ, ಸಮಾಜವಾದಿ ಕ್ರಾಂತಿಗಳು ಸರ್ವಥಾ ಪ್ರಜಾಪ್ರಭುತ್ವದ ಕ್ರಮದಲ್ಲೇ ನಡೆಯ ಬೇಕಾಗುತ್ತವೆ. ಕ್ರಾಂತಿಯಲ್ಲಿ ಪಾಲ್ಗೊಳ್ಳುವ ಜನಸಮೂಹವು ವೃಥಾ ಶಕ್ತಿಯ ದುರುಪಯೋಗವನ್ನು ತಡೆಯುವ ಜನಶಕ್ತಿಯೂ ಆಗಿರುತ್ತದೆ.

ಕ್ರಾಂತಿಗಳು ಪ್ರತಿರೋಧದಿಂದ ಮೂಡುವಂತೆ ಕ್ರಾಂತಿಗಳಿಗೆ ಪ್ರತಿರೋಧವೂ ಇರುವುದು ಅಸಹಜವಲ್ಲ; ಅಧಿಕಾರ ಕಳೆದುಕೊಳ್ಳಲಿರುವ ಸರ್ಕಾರಗಳು ತೀವ್ರ ಭಯೋತ್ಪಾದನೆಯನ್ನು ಹೋರಾಟಗಾರರ ವಿರುದ್ಧ ಹರಿಯಬಿಡುತ್ತವೆ. ಎಷ್ಟೇ ಸರ್ವಾಧಿಕಾರಿ ಮನೋಭಾವದ ಸರ್ಕಾರವಾದರೂ ಸ್ವಲ್ಪಮಟ್ಟಿಗೆ ಆಳ್ವಿಕೆಗೊಳಪಟ್ಟವರ ಒಪ್ಪಿಗೆ ಪಡೆಯಲೇಬೇಕು. ಸದಾ ಅತೃಪ್ತವಾಗಿರುವ ಜನರ ಮೇಲಿನ ಅಧಿಕಾರವು ಸರ್ಕಾರದ ಮೇಲಿನ ಕಪ್ಪು ಮಸಿಯನ್ನು ಸಾಂದ್ರಗೊಳಿಸುತ್ತಾ ಹೋಗುತ್ತದೆ. ಕೆಲವರನ್ನು ಹಿಡಿದು ಜೈಲಿಗೆ ತಳ್ಳಬಹುದು, ಆದರೆ ಎಲ್ಲರನ್ನೂ ತಳ್ಳಲು ಸಾಧ್ಯವೆ? ಒಂದು ಫುಟ್‌ಬಾಲ್ ಕ್ರೀಡಾಂಗಣವನ್ನು ಜೈಲಾಗಿ ಪರಿವರ್ತಿಸಿದ್ದ ಪಿನೋಶೆ ಜನರ ಮನಸ್ಸನ್ನು ಗೆಲ್ಲಲೇ ಇಲ್ಲ, ಹಾಗೇ ನಿಷ್ಕ್ರಮಿಸಿದ. ಪ್ರಜಾಪೀಡಕ ಆಳ್ವಿಕೆಗೆ ಬಹುಕಾಲ ತಾನು ಸ್ಥಿರವಾಗಿರಲಾಗುವುದಿಲ್ಲ, ದಕ್ಷಿಣ ಆಫ್ರಿಕಾದ ವರ್ಣನೀತಿಯು ಕರಾಳ ಮಿಲಿಟರಿಯ ರಕ್ಷಣೆಯಲ್ಲಿದ್ದಾಗ್ಯೂ ಕುಸಿದುಬಿತ್ತು, ಅಮೆರಿಕಾ ಮತ್ತು ಚೀಣಾ ಬೆಂಬಲ ಪಡೆದಿದ್ದ ಪೋಲ್ ಪೋಟ್ ಕಂಬೋಡಿಯಾದಲ್ಲಿ ದ್ರೋಹಿಯೆಂಬ ಹೆಸರು ಪಡೆದು ಕಣ್ಮರೆಯಾದ. ಸ್ಪೇನಿನ ಫ್ರಾಂಕೊ ಮತ್ತು ಪೋರ್ಚುಗಲ್‌ನ ಸಾಲಜ್ಹಾರ್ ಇಂದು ಹೆಸರಿಲ್ಲದ ಸೈತಾನರಾಗಿಹೋಗಿದ್ದಾರೆ.

ಹಾಗಿದ್ದರೆ ಮಾರ್ಕ್ಸ್‌ವಾದಿಗಳು ಸದಾ ಕ್ರಾಂತಿಗೇ ಏಕೆ ಒತ್ತುಕೊಡಬೇಕು, ಪಾರ್ಲಿಮೆಂಟರಿ ಪ್ರಜಾಪ್ರಭುತ್ವ ಮತ್ತು ಸಾಮಾಜಿಕ ಸುಧಾರಣೆಗಳಿಂದ ತೃಪ್ತರಾಗಬಹುದಲ್ಲ? ಇದಕ್ಕೆ ಹಲವು ಉತ್ತರಗಳಿವೆ. ಮೊದಲನೆಯದಾಗಿ, ಮಾರ್ಕ್ಸ್‌ವಾದವು ಪಾರ್ಲಿಮೆಂಟರಿ ಪ್ರಜಾಪ್ರಭುತ್ವ ವನ್ನೆಂದೂ ಸಾರಾಸಗಟಾಗಿ ನಿರಾಕರಿಸಿಲ್ಲ; ಕೆಲವು ತೀವ್ರಗಾಮಿ ವಾಮಪಂಥೀಯರು ಅಂತಹ ಮಾತುಗಳನ್ನಾಡುತ್ತಾರೆ, ಅಷ್ಟೆ. ಬಾಲ್ಶೆವಿಕರು ರಷ್ಯದಲ್ಲಿ ಅಧಿಕಾರಕ್ಕೆ ಬಂದಾಗ ಮರಣದಂಡನೆ ವಿಧಿಸುವುದನ್ನು ನಿಷೇಧಿಸಿದರು. ಅದು ಕ್ರಾಂತಿಯು ತಂದ ಸುಧಾರಣೆ; ಕ್ರಾಂತಿಯು ಸುಧಾರಣೆಗಳ ವಿರೋಧಿಯಲ್ಲ, ಆದರೆ ಸುಧಾರಣೆಯ ತಂತ್ರವನ್ನು ರಾಜಕೀಯ ಅಸ್ತ್ರವನ್ನಾಗಿಸಿಕೊಂಡು, ತಾನು ಜೀವಂತವಾಗಿ ಉಳಿಯಲು ಆಗೊಂದು ಈಗೊಂದು ತುತ್ತನ್ನು ಜನರ ಬಾಯಿಗೆಸೆಯುವುದನ್ನು ಕ್ರಾಂತಿಯು ಮನ್ನಿಸುವುದಿಲ್ಲ. ಸಮಾಜವಾದಿ ಪರಿವರ್ತನೆಗೆ ಗುಣಾತ್ಮಕ ಬದಲಾವಣೆಗಳು ಬೇಕು, ಆದರೆ ಅವು ದಿಢೀರನೆ ಆಗುವಂಥವಲ್ಲ, ಊಳಿಗಮಾನ್ಯ ವ್ಯವಸ್ಥೆಯಾಗಲಿ, ಬಂಡವಾಳಶಾಹಿಯಾಗಲಿ ದಿಢೀರನೆ ನೆಲಕಚ್ಚಿದವೇನು? ಕ್ರಾಂತಿಯ ದಿಕ್ಕನ್ನು ಬದಲಾಯಿಸದೆ ಮುಂದುವರಿಯುವುದು ಅಗತ್ಯ. ಕಡ್ಡಿ ಮುರಿದಂತೆ ಸಾಮಾಜಿಕ ರಚನೆಯನ್ನು ಒಂದೇ ಉಸಿರಿಗೆ ಬದಲಾಯಿಸಲು ಬರುವುದಿಲ್ಲ. ಕ್ರಾಂತಿಯೇ ಮಾರ್ಕ್ಸ್‌ವಾದದ ಗುರಿಯಾದ್ದರಿಂದ ನಾಳೆ ನಗರದಲ್ಲೋ ಹಳ್ಳಿಯಲ್ಲೋ ಒಂದು ಆಸ್ಪತ್ರೆಯನ್ನು ಮುಚ್ಚಿಬಿಟ್ಟರೆ ಅದರ ವಿರುದ್ಧ ಹೋರಾಡುವುದು ನಮ್ಮ ಕೆಲಸವಲ್ಲವೆಂದು ಮಾರ್ಕ್ಸ್‌ವಾದಿಗಳು ತೆಪ್ಪಗೆ ಕೂರಬೇಕೇನು? ಸುಧಾರಣೆ ಬೇಕು, ಅದು ತೀವ್ರಗತಿಯಲ್ಲಿ ಆಗಬೇಕು, ಎನ್ನುತ್ತದೆ ಮಾರ್ಕ್ಸ್‌ವಾದ. ಉತ್ಪಾದನೆಯಲ್ಲಿನ ಸಾಮಾಜಿಕ ಸಂಬಂಧಗಳು ಗುಣಾತ್ಮಕವಾಗಿ ಬದಲಾಗುವಂತಹ ಪ್ರಕ್ರಿಯೆಗೆ ಚಾಲನೆ ಕೊಡಬೇಕು, ಅದು ಮಾರ್ಕ್ಸ್‌ವಾದ. ಕೂಲಿಯನ್ನು ಕೊಡುವಾಗ ಎರಡು ರೂಪಾಯಿ ಹೆಚ್ಚಿಸಿ ನಗೆ ಬೀರುವ ಬಂಡವಳಿಗನು ಬೇಡ, ಬದಲಾಗಿ ಬಂಡವಾಳಶಾಹಿ ವ್ಯವಸ್ಥೆಯು ಸಮಾಜವಾದಿ ವ್ಯವಸ್ಥೆಗೆ ಹಾದಿ ಮಾಡಿಕೊಡಬೇಕು, ಎನ್ನುವುದು ಮಾರ್ಕ್ಸ್‌ವಾದ. ಭೌತಿಕ ಸಂಪನ್ಮೂಲಗಳ ಒಡೆತನವು ಸಮುದಾಯದ್ದಾಗುವುದು ಇದಕ್ಕೆ ಸಾಧನ. ಆಡಳಿತಾರೂಢ ವರ್ಗವು ಅದಕ್ಕೆ ಸಮ್ಮತಿಸದಿದ್ದಾಗಲೇ ಸುಧಾರಣೆಯ ಜಾಗದಲ್ಲಿ ಕ್ರಾಂತಿಯ ಆಯ್ಕೆ ಅಗತ್ಯವಾಗುವುದು. ಸಮಾಜವಾದಿ ಚರಿತ್ರಕಾರ ಆರ್. ಎಚ್. ಟಾನಿ ಅದಕ್ಕೇ ಹೇಳಿದ್ದು, ''ಈರುಳ್ಳಿಯ ಸಿಪ್ಪೆಯನ್ನು ತೆಗೆದು ಒಂದರ ನಂತರ ಇನ್ನೊಂದರಂತೆ ಎಡೆಯುತ್ತಾ ಹೋಗಬಹುದು, ಆದರೆ ಹುಲಿಯ ಮೊನೆಯುಗುರುಗಳನ್ನು ಹಾಗೆ ಎಡೆಯುತ್ತಾ ಹೋಗಲಾಗುವುದಿಲ್ಲ'', ಎಂದು. ಈರುಳ್ಳಿ ಸುಲಿಯುವುದು ಎಂಬ ಉಪಮೆಯು ಸುಧಾರಣೆಯು ಬಹಳ ಸುಗಮವಾದ್ದೆಂಬ ಭಾವನೆ ಮೂಡಿಸಬಹುದು, ಆದರೆ ನಿಜ ಜೀವನದಲ್ಲಿ ಒಂದೊಂದು ಸುಧಾರಣೆಗೂ ತೀವ್ರ ಹೋರಾಟಗಳು ಅಗತ್ಯವಾಗಿರುವುದು ಉದಾರವಾದಿ ಸಮಾಜದ ಲಕ್ಷಣವಾಗಿದೆ. ಸರ್ವರಿಗೂ ಮತದಾನದ ಹಕ್ಕು, ಉಚಿತ ವಿದ್ಯಾಭ್ಯಾಸ, ಪತ್ರಿಕಾ ಸ್ವಾತಂತ್ರ್ಯ, ಕಾರ್ಮಿಕ ಸಂಘಗಳ ರಚನೆ, ಹೀಗೆ ಯಾವುದೂ ಹೋರಾಟವಿಲ್ಲದೆ ದಕ್ಕಿದ್ದಲ್ಲ. ಆಳುವ ವರ್ಗವು ಅವನ್ನೆಲ್ಲಾ ಉಗ್ರವಾಗಿ ವಿರೋಧಿಸಿ, ಕಡೆಗೆ ಗತ್ಯಂತರವಿಲ್ಲದೆ ಮಾನ್ಯ ಮಾಡುತ್ತದೆ, ಅಷ್ಟೆ.

ಪಾರ್ಲಿಮೆಂಟರಿ ಪ್ರಜಾಪ್ರಭುತ್ವವನ್ನು ನಿರಾಕರಿಸಬೇಕೆಂಬ ವ್ರತವೇನೂ ಮಾರ್ಕ್ಸ್‌ವಾದಿ ಗಳಿಗಿಲ್ಲ, ಅದರಿಂದ ಉದ್ದೇಶ ಸಾಧನೆಯಾಗುವುದಾದರೆ ಅದಕ್ಕೆ ಸ್ವಾಗತವಿದೆ. ಆದರೆ ಮಾರ್ಕ್ಸ್‌ವಾದಿಗಳ ಆಕ್ಷೇಪವೇನೆಂದರೆ ಅದು ಪ್ರಜಾಪ್ರಭುತ್ವ ಕ್ರಮದಲ್ಲಿ ಕಾರ್ಯ ನಿರ್ವಹಣೆ ಮಾಡುವುದಿಲ್ಲ ಎಂಬುದು. ಆಗಿರುವುದೇನು? ಅದಕ್ಕೆ ಅರ್ಥಸಚಿವ ಪಿ. ಚಿದಂಬರಂ ಉತ್ತರ ನೀಡಿದ್ದಾರೆ: ''ನಾವು ಚುನಾಯಿತರಾಗಿದ್ದೇವೆ, ಆದ್ದರಿಂದ ನಮಗೆ ಇಷ್ಟಬಂದ ಶಾಸನ ತರುತ್ತೇವೆ; ಅದು ಬೇಡವಾದರೆ ಐದು ವರ್ಷ ಬಾಯಿ ಮುಚ್ಚಿಕೊಂಡಿದ್ದು, ಆಮೇಲೆ ನಮ್ಮನ್ನು ಕೆಳಗಿಳಿಸಿ ನೀವು ಅಧಿಕಾರಕ್ಕೆ ಬಂದು ಅದೇನು ಮಾಡುತ್ತೀರೋ ಮಾಡಿಕೊಳ್ಳಿ.'' ಅಂದರೆ, ಜನತೆಯು ಪಾರ್ಲಿಮೆಂಟ್ ಎಂಬ ಸಂಸ್ಥೆಗೆ ತನ್ನೆಲ್ಲವನ್ನೂ ಧಾರೆಯೆರೆದು ಕೊಟ್ಟು ಬಿಡಬೇಕು, ಆಮೇಲೆ ಅಶಕ್ತವಾಗಿ ಬಳಲುತ್ತಾ ಕೂಡಬೇಕು. ಎರಡನೆಯದಾಗಿ, ಕ್ರಾಂತಿಯು ಪ್ರಜಾಪ್ರಭುತ್ವದ ವಿರೋಧಿ ನೆಲೆಯಲ್ಲಿದೆಯೆಂಬುದೇ ತಪ್ಪು ಕಲ್ಪನೆ. ಅಲ್ಪಸಂಖ್ಯಾತರು ಭೂಗತರಾಗಿದ್ದುಕೊಂಡು ಬಹುಸಂಖ್ಯಾತರ ಸರ್ಕಾರವನ್ನು ಉರುಳಿಸಿಬಿಡುತ್ತಾರೆ, ಪ್ರಜಾಪ್ರಭುತ್ವವನ್ನು ಉತ್ಪಾಟಿಸಿಬಿಡುತ್ತಾರೆ, ಅದೇ ಕ್ರಾಂತಿ, ಎಂದು ಬೂರ್ಷ್ವಾ ವ್ಯವಸ್ಥೆ ಸಮಯ ಸಿಕ್ಕಾಗಲೆಲ್ಲ ತುತ್ತೂರಿ ಊದುತ್ತದೆ. ಯಾರು ಅಲ್ಪಸಂಖ್ಯಾತರು? ಬಂಡವಳಿಗ ವರ್ಗವೋ, ದುಡಿಯುವ ವರ್ಗವೋ? ಸ್ತ್ರೀ-ಪುರುಷರು ತಮ್ಮ ಅಸ್ತಿತ್ವವನ್ನು ತಾವೇ ರೂಪಿಸಿ ಕೊಳ್ಳಲು ಜನತಾ ಪ್ರತಿನಿಧಿ ಮಂಡಲಿಗಳ ಮೂಲಕ ಶಾಸನ ಮಾಡಿಕೊಳ್ಳಲು ಮುಂದಾಗುವುದು ಪ್ರಜಾಪ್ರಭುತ್ವವಲ್ಲದಿದ್ದರೆ ಬೇರಾವುದು ಆ ಹೆಸರಿಗೆ ಅರ್ಹವಾದ್ದು? ರಷ್ಯದಲ್ಲಿ ಬಾಲ್ಶೆವಿಕರು ಕ್ರಾಂತಿಯ ಮೂಲಕ ಅಧಿಕಾರಕ್ಕೆ ಬಂದಾಗ ಜನರ ಬೆಂಬಲವಿಲ್ಲದೆಯೇ ಬಂದಿರಲಿಲ್ಲ ಮತ್ತು ತಮ್ಮದೊಂದೇ ರಾಜಕೀಯ ಪಕ್ಷವಾಗಿರಬೇಕೆಂಬುದರ ಬಗ್ಗೆ ಬಾಲ್ಶೆವಿಕರಲ್ಲಿ ಭಿನ್ನಾಭಿಪ್ರಾಯ ಇತ್ತು. ನಿಜಸಂಗತಿ ಬೇರೆಯೇ ಇದೆ: ಬಂಡವಾಳಶಾಹಿಯಡಿ ಪಾರ್ಲಿಮೆಂಟ್ ಎಂಬುದು ಪ್ರಭುತ್ವದ ಒಂದು ಅಂಗ; ಮತ್ತು ಪ್ರಭುತ್ವವು ವ್ಯವಹಾರದಲ್ಲಿ ತೊಡಗಿದೆ. ಯಾವ ವ್ಯವಹಾರ? ದುಡಿಯುವ ಜನರ ಮೇಲೆ ಬಂಡವಾಳದ ಸಾರ್ವಭೌಮತ್ವವನ್ನು ರಕ್ಷಿಸುವ ವ್ಯವಹಾರ! ಇದನ್ನು ಮಾರ್ಕ್ಸ್‌ವಾದಿಗಳು ಮಾತ್ರವೇ ಹೇಳಿಲ್ಲ, ಕ್ರಿಸ್ಟಫರ್ ಹಿಲ್ ಹದಿನೇಳನೆಯ ಶತಮಾನದ ಬ್ರಿಟನ್ನಿನ ದಾಖಲೆಗಳಿಂದ ಹೇಳಿಕೆಗಳನ್ನು ಆಯ್ದು ಪ್ರಕಟಿಸಿದ್ದಾನೆ. ''ಪಾರ್ಲಿಮೆಂಟ್ ಎಂಬುದು ಆಸ್ತಿವಂತರ ಕೋಟೆ'' ಎಂದು ಆಗ್ಗೆ ಆಗಲೇ ಹೇಳಲಾಗುತ್ತಿತ್ತು. ನಮ್ಮ ಇಂದಿನ ಕತೆಯನ್ನು ಬಿಚ್ಚಿಡುವ ಅಗತ್ಯವಿಲ್ಲ. ನಮ್ಮ ಪಾರ್ಲಿಮೆಂಟ್ ಅಂಬಾನಿ-ವೋಡಫೋನ್-ಪಾಸ್ಕೋ-ವೇದಾಂತ-ನಾರಾಯಣಮೂರ್ತಿ-ವಿಜಯಮಲ್ಯ-ಟಾಟಾ-ಮಿತ್ತಲ್ ಮುಂತಾದವರ ಆಸ್ತಿಯ ಕೋಟೆ; ಆ ಕೋಟೆಯ ರಕ್ಷಕ ಸಿಬ್ಬಂದಿಯಲ್ಲಿ ಮನಮೋಹನ ಸಿಂಗ್-ಚಿದಂಬರಂ-ಆನಂದ ಶರ್ಮ-ಕಪಿಲ್ ಸಿಬಲ್ ಮುಂತಾದವರು ದಂಡನಾಯಕರು. ಜನಸಾಮಾನ್ಯರ ಪ್ರತಿನಿಧಿಯಾಗಿರಬೇಕಾದ ಪಾರ್ಲಿಮೆಂಟ್ ಖಾಸಗಿ ಆಸ್ತಿಯ ಹಿತರಕ್ಷಣೆಗೆ ನಿಂತರೆ ಅದು ಪ್ರಜಾಪ್ರಭುತ್ವ ಹೇಗಾಗುತ್ತದೆ? ಅದು ಯಾರ ಹಿತಾಸಕ್ತಿಗಳನ್ನು ಕಾಯುತ್ತಿದೆ? ಅದನ್ನು ತೀವ್ರವಾಗಿ ಪ್ರಶ್ನಿಸಿದರೆ ಪ್ರಭುತ್ವವು ಮದ್ದು-ಗುಂಡುಗಳನ್ನು ಪ್ರಯೋಗಿಸಿ ಜನರನ್ನು ನಿರಾಶ್ರಿತರನ್ನಾಗಿಸುತ್ತದೆ. ಅದಕ್ಕೆ ಒಡಿಶಾದ ಜಗತ್ಸಿಂಗ್‌ಪುರ ಇಂದಿನ ಒಂದು ನಿದರ್ಶನ. ಪಾಸ್ಕೋ ನಮ್ಮ ಸಂಪತ್ತನ್ನು ಲೂಟಿ ಮಾಡಬೇಕು, ಅದಕ್ಕೋಸ್ಕರ ಪ್ರಭುತ್ವವು





# ಏಕಾದಶಿ

ನನಗೆ

ಬಿಸಿಲೇ

ಬೆಳದಿಂಗಳು

ದಿನದಿನವೂ

ಏಕಾದಶಿ

ದಿನಗಳು !!

**ಪುಂಡಲೀಕ ಪಾಟೀಲ**
'ಶಾಂತಲಾ' ಪ್ಲಾ. ನಂ. ೨೧೮, ಬಾಕ್ಸಯಿಟ್ ರೋಡ
ವಿದ್ಯಾನಗರ, ಅಂಚೆ : ಹಿಂಡಲಗಿ
ಬೆಳಗಾವಿ - ೫೯೧೧೦೮

ಜನತೆಯ ಮೇಲೆ ಲಾಠಿ ಪ್ರಹಾರ ಮಾಡುತ್ತದೆ, ವಿಳೇದೆಲೆ ತೋಟಗಳನ್ನು ನಾಶಮಾಡುತ್ತದೆ, ಪ್ರತಿಭಟನಕಾರರನ್ನು ಚೆನ್ನಾಗಿ ಬಡಿದು ಜೈಲಿಗೆ ತಳ್ಳುತ್ತದೆ. ಬರ್ನಾರ್ಡ್ ಶಾ ಬ್ರಿಟನ್ನಿನ ಪಾರ್ಲಿಮೆಂಟನ್ನು ''ಮಾತಿನ ಚಕ್ಕಂದದ ಅಂಗಡಿ'' ಎಂದು ಕರೆದಿದ್ದ. ಅದು ಸಮಾಜವಾದಿ ವ್ಯವಸ್ಥೆಯನ್ನು ಬರಮಾಡಿಕೊಡುತ್ತದೆಯೆ ? ಸಾಧ್ಯವಾದರೆ ಅದನ್ನು ಬಳಸಿಕೊಳ್ಳಲು ಅಡ್ಡಿಯಿಲ್ಲ, ಆದರೆ ಅದರಿಂದಲೇ ಗುಣಾತ್ಮಕ ಬದಲಾವಣೆಯನ್ನು ನಿರೀಕ್ಷಿಸಲಾಗದೆಂಬುದು ಮಾರ್ಕ್ಸ್‌ವಾದದ ನಿಲುವು.

ಅಮೆರಿಕಾ, ಇಂಗ್ಲೆಂಡ್, ಹಾಲೆಂಡ್ ಮುಂತಾದ ದೇಶಗಳಲ್ಲಿ ಸಮಾಜವಾದಿಗಳು ಪಾರ್ಲಿಮೆಂಟ್ ಪದ್ಧತಿಯ ಮೂಲಕವೇ ಗುಣಾತ್ಮಕ ಬದಲಾವಣೆಗಳನ್ನು ತರಲು ಸಾಧ್ಯವೆಂದು ತನ್ನ ಕಾಲದಲ್ಲಿ ಮಾರ್ಕ್ಸ್ ಬಗೆದಿದ್ದ. ಅವನು ಪಾರ್ಲಿಮೆಂಟ್ ಮತ್ತು ಸಾಮಾಜಿಕ ಸುಧಾರಣೆಯನ್ನು ತಳ್ಳಿಹಾಕಲಿಲ್ಲ. ದುಡಿಯುವ ವರ್ಗದ ಬೆಂಬಲದಿಂದ ಸಮಾಜವಾದವನ್ನು ಪ್ರತಿಪಾದಿಸುವ ಪಕ್ಷವು ಅಧಿಕಾರಕ್ಕೆ ಬರುತ್ತದೆಂದು ಸಹ ಅವನ ನಿರೀಕ್ಷೆಯಾಗಿತ್ತು. ದುಡಿಯುವ ವರ್ಗದ ರಾಜಕೀಯ ಪಕ್ಷಗಳು, ಕಾರ್ಮಿಕ ಸಂಘಗಳು, ಸಾಂಸ್ಕೃತಿಕ ಸಂಸ್ಥೆಗಳು ಮತ್ತು ರಾಜಕೀಯ ಪತ್ರಿಕೆಗಳ ಬಗ್ಗೆ ಮಾರ್ಕ್ಸ್‌ಗೆ ಅಪಾರ ಶ್ರದ್ಧೆ ಇತ್ತು. ಮತದಾನದ ಹಕ್ಕಿನ ವಿಸ್ತರಣೆ ಮತ್ತು ದುಡಿಯುವ ವೇಳೆಯನ್ನು ಕಡಿಮೆಗೊಳಿಸುವುದನ್ನು ಸುಧಾರಣಾ ಕ್ರಮಗಳಿಂದ ಸಾಧಿಸಬಹುದೆಂದು ಅವನು ನಂಬಿದ್ದ. ಜನರಿಗೆಲ್ಲಾ ಮತದಾನದ ಹಕ್ಕು ದೊರೆತರೆ ಸಾಕು, ಬಂಡವಾಳಶಾಹಿ ಆಳ್ವಿಕೆಯು ಅಂತ್ಯವಾಗಿಬಿಡುತ್ತದೆ, ಎಂದು ಸಹ ಒಂದು ಹಂತದಲ್ಲಿ ಅವನು ಭ್ರಮಿಸಿದ್ದ. ಏಂಗೆಲ್ಸ್ ಕೂಡ ಶಾಂತಿಯುತ ಸಾಮಾಜಿಕ ಬದಲಾವಣೆಗಾಗಿ ಶಾಂತಿಯುತ ಕ್ರಾಂತಿಯನ್ನು ನಿರೀಕ್ಷಿಸುತ್ತಿದ್ದ. ಆ ನಿರೀಕ್ಷೆಗಳು ಈವರೆಗೆ ಹುಸಿಯಾಗಿವೆ. ಸಮಾಜವಾದಿ ಕ್ರಾಂತಿಗಳ ಒಂದು ಸಮಸ್ಯೆಯನ್ನು ಗಮನಿಸಿ : ಎಲ್ಲಿ ಅವನ್ನು ಸುಭದ್ರಗೊಳಿಸುವುದು ಕಷ್ಟವೋ ಅಂಥ ಕಡೆಗಳಲ್ಲಿ ಕ್ರಾಂತಿಯಾಗಿಬಿಡುತ್ತದೆ. ಆಫ್ಘಾನಿಸ್ತಾನ, ಅಂಗೋಲ, ನಿಕರಾಗ್ವ, ಅಂತಹ ಕೆಲವು ಉದಾಹರಣೆಗಳು. ಬಾಲ್ಶೆವಿಕ್ ಕ್ರಾಂತಿಯ ಬಗ್ಗೆ ಲೆನಿನ್‌ಗೆ ಸಹ ಇಂತಹ ಚಾರಿತ್ರಿಕ ವ್ಯಂಗ್ಯದ ಅರಿವಾಗಿತ್ತು. ಭೀಕರ ದಮನಕ್ಕೆ ಒಳಗಾದವರು ಕಳೆದುಕೊಳ್ಳುವಂಥದೇನೂ ಇಲ್ಲ, ಆದ್ದರಿಂದ ಕ್ರಾಂತಿ ಮಾಡಲು ಅವರಿಗೆ ಸ್ಫೂರ್ತಿ ಇರುತ್ತದೆ. ಆದರೆ ಹಿಂದುಳಿದ ಸಾಮಾಜಿಕ ಸನ್ನಿವೇಶವೊಂದೇ ಅವರಿಗೆ ಪ್ರೇರಣೆ. ಸಮಾಜವಾದಿ ವ್ಯವಸ್ಥೆಯ ರಚನೆಗೆ ಅವರಲ್ಲಿ ಪರಿಕರಗಳಿರುವುದಿಲ್ಲ. ಪ್ರಭುತ್ವವನ್ನು ಕಿತ್ತೊಗೆಯಬಹುದು, ಆದರೆ ತಮ್ಮ ಪ್ರಭುತ್ವ ಸ್ಥಾಪಿಸಿಕೊಳ್ಳಲು ಅಗತ್ಯವಾದ ಸಂಪನ್ಮೂಲಗಳಿಲ್ಲ. ಆದ್ದರಿಂದ ಬೇಗನೆ ಅವು ಅಯಶಸ್ವಿಯಾಗಿಬಿಡುತ್ತವೆ. ಇತ್ತೀಚಿನ ಈಜಿಪ್ಟಿನ ವಿದ್ಯಮಾನಗಳು ಅದಕ್ಕೊಂದು ಉದಾಹರಣೆ. ''ವಾಲ್ ಸ್ಟ್ರೀಟ್ ವಶಪಡಿಸಿಕೊಳ್ಳೋಣ'' ಎಂಬ ಅಮೆರಿಕಾದ ಕೂಗು ಅದಕ್ಕಿಂತಲೂ ಹೆಚ್ಚು ಶಿಥಿಲವಾದ್ದು. ಒಂದು ದಿನ ಕೂಗಿ ತಣ್ಣಗಾಗುವ ಪರಿಸ್ಥಿತಿ ! ತಮ್ಮ ಸ್ಥಿತಿಯಿಂದ ತೃಪ್ತರಾಗಿರುವವರಿಗೆ ಕ್ರಾಂತಿ ಬೇಕಿಲ್ಲ; ಅಂತೆಯೇ ಯಾವ ಭರವಸೆಯೂ ಇಲ್ಲದವರಿಗೆ ಸಹ. ಇಷ್ಟರಲ್ಲೇ ಹೇಗೋ ನಮ್ಮ ಆಶಯಗಳು ಪೂರೈಕೆಯಾಗುತ್ತವೆಂದು ಬಕಪಕ್ಷಿಗಳಂತೆ ಧ್ಯಾನ ಮಾಡುತ್ತಿರುವವರು ಸಹ ಕ್ರಾಂತಿಯಲ್ಲಿ ಹೆಚ್ಚು ಆಸಕ್ತಿ ತೋರುವುದಿಲ್ಲ.

''ದುಡಿಯುವ ವರ್ಗದ ಬಗ್ಗೆ ಅಷ್ಟೊಂದು ಭರವಸೆ ಇಟ್ಟುಕೊಂಡಿದ್ದೀರಿ, ಆದರೆ ಆ ವರ್ಗಕ್ಕೆ ನಿರಾಸಕ್ತಿ ಇದೆಯಲ್ಲಾ'' ಎಂದು ಮಾರ್ಕ್ಸ್‌ವಾದಿಗಳನ್ನು ಛೇಡಿಸುವುದುಂಟು. ಇಲ್ಲಿ ಒಂದು ವಿಶೇಷವಿದೆ : ಜನಸಾಮಾನ್ಯರು ದಿನೇದಿನೇ ವರದಿಯಾಗುವ ರಾಜಕೀಯ ವಿದ್ಯಮಾನಗಳ ಬಗ್ಗೆ ನಿರಾಸಕ್ತರಿರಬಹುದು, ಆದರೆ ಅವರ ಆಸ್ಪತ್ರೆ ಮುಚ್ಚಿದರೆ, ಅವರ ಕಾರ್ಖಾನೆಯನ್ನು ದೂರದೂರಿಗೆ ಸ್ಥಳಾಂತರಿಸಿದರೆ, ಅಥವಾ ಅವರ ಝೋಪಡಿಗಳನ್ನು ಕೆಡವಿ ಬಹುಮಹಡಿ ಕಟ್ಟಡ ಕಟ್ಟಲು ಬಂದರೆ, ಹಾಗೆ ನಿದ್ರಿಸುತ್ತಿರುತ್ತಾರೆಯೆ ? ನಿರಾಸಕ್ತಿಗೂ ಕಾರಣವುಂಟು : ಇರುವ ವ್ಯವಸ್ಥೆಯಲ್ಲೇ ಅಷ್ಟೋ ಇಷ್ಟೋ ಎಟಕುತ್ತಿದೆಯಲ್ಲಾ, ಕಾಣದ ಭವಿಷ್ಯಕ್ಕೆ ಕೈ ಚಾಚುವುದೇಕೆ ಎಂಬ ಭಾವನೆ. ಅಂತಹ ಭಾವನೆಯನ್ನು ಮೂದಲಿಸಿ ಏನು ಪ್ರಯೋಜನ ! ಒಂದಂತೂ ನಿಜ : ಇರುವ ಸ್ಥಿತಿಯಲ್ಲಿ ಉಸಿರಾಡುವುದೇ ಕಷ್ಟವಾಗಿರುವಾಗ ನಾಳಿನ ಭವ್ಯ ಭವಿಷ್ಯದ ಚಿಂತನೆಯಲ್ಲಿ ತೇಲಾಡಲಾದೀತೆ ? ಅಲ್ಲದೆ ಸಾಮಾಜಿಕ ಪಲ್ಲಟವನ್ನು ಮುಕ್ತವಾಗಿ ಸ್ವಾಗತಿಸುವುದು ಜನಕ್ಕೆ ಕಷ್ಟವೆನಿಸುತ್ತದೆ. ಸಿಹಿಯಾದ ಸಮಾಜವಾದಿ ಹಣ್ಣು ಸಹ ಅವರಿಗೆ ಪ್ರೇರಣೆಯಾಗದೆ ಹೋಗಬಹುದು. ಸಮಾಜದಲ್ಲಿ ಯಥಾಸ್ಥಿತಿಯು ಉಂಟುಮಾಡಿರುವ ಕಾರ್ಪಣ್ಯವು ಘೋರವೆನಿಸಿದಾಗ ತೀವ್ರಗಾಮಿ ಬದಲಾವಣೆಯ ಅನಿಶ್ಚಯವು ಅಷ್ಟಾಗಿ ಬಾಧಿಸುವುದಿಲ್ಲ, ಆಗ ಭವಿಷ್ಯದತ್ತ ನೆಗೆತಕ್ಕೆ ಜನತೆ ಸಿದ್ಧವಾಗುತ್ತದೆ. ಅನ್ಯಮಾರ್ಗವಾದರೂ ಯಾವುದಿದೆ ! ಪರ್ಯಾಯಗಳು ಇಲ್ಲವಾದಾಗ ಕ್ರಾಂತಿಯೊಂದೇ ಭವಿಷ್ಯದ ನಿರ್ಧಾರಕ ಶಕ್ತಿ. ಬಂಡವಾಳಶಾಹಿಯು ಎಷ್ಟು ಕಾಲದಿಂದ ಸ್ವ-ಹಿತದ ಅದ್ಭುತವನ್ನು ಬೋಧಿಸುತ್ತಾ ಬಂದಿದೆ, ನೋಡಿ. ತನ್ನ ಹಿತವೇ ಜನತೆಯ ಹಿತ ಎಂದು ನಂಬಿಸುವಷ್ಟು ಹಾದಿಗಳನ್ನು ಅದು ಕಂಡುಕೊಂಡಿದೆ, ಅದಕ್ಕೆ ಬೇಕಾದ ಹತ್ತಾರು ಅಂಗಗಳನ್ನು ಕಟ್ಟಿಕೊಂಡಿದೆ. ಪಾರ್ಲಿಮೆಂಟು, ನ್ಯಾಯ ವಿತರಣೆಯ ವಿಧಾನ, ಮಾರುಕಟ್ಟೆ, ಮಾಧ್ಯಮ, ಸಾಂಸ್ಕೃತಿಕ ವಲಯ, ಪುರಾಣ-ಪುಣ್ಯಕಥೆ, ಕನ್ನಡಿಯೊಳಗಿನ ಗಂಟು, ಮಣಪ್ಪುರಂನ ಚಿನ್ನ, ಶಬರಿಮಲೈ ಸ್ವಾಮಿ, ಸೌಂದರ್ಯ ಲಹರಿ ಪಠಣ, ಜಾನಪದ ಉತ್ಸವ, ಹೀಗೆ ಅದರ ಸೇವೆಗೆ ನಿರಂತರವಾಗಿ ಕುಶಾಗ್ರಮತಿಗಳು ಬಣ್ಣಬಣ್ಣದ ಆಟಿಕೆಗಳನ್ನು ಸೃಷ್ಟಿಸಿ ಕೊಡುತ್ತಾರೆ. ಅಷ್ಟಾಗಿಯೂ ಬಂಡವಾಳಶಾಹಿಯ ಸ್ವಾರ್ಥವನ್ನು ಗ್ರಹಿಸಿದಾಗ ಸಮುದಾಯದ ಹಿತಕ್ಕಾಗಿ ಬೇರೊಂದು ಹೊಸ ವಿಧಾನದತ್ತ ಹೆಜ್ಜೆ ಹಾಕುವುದು ಅನಿವಾರ್ಯ.

ಸುಧಾರಣೆ ಮತ್ತು ಸಾಮಾಜಿಕ ಪ್ರಜಾಪ್ರಭುತ್ವ ಎಂಬ ಎರಡು ಆಮಿಷಗಳು ಕ್ರಾಂತಿಯನ್ನು ಮುಂದೂಡಬಹುದು. ಮಾರ್ಕ್ಸ್ ಬದುಕಿದ್ದಾಗಲೇ ಅದರ ಛಾಯೆಯನ್ನು ೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಕಂಡಿದ್ದ, ಅದು ಇನ್ನೂ ದೊಡ್ಡ ಪ್ರಮಾಣದಲ್ಲಿ ಬೆಳೆಯುವ ವೇಳೆಗೆ ಅವನು ಗತಿಸಿದ್ದ. ವಸಾಹತುಗಳ ಲೂಟಿಯ ಒಂದು ತುಣುಕನ್ನು ದುಡಿಯುವ ಜನಕ್ಕೆ ಎಸೆಯಲು ೧೮೩೦ರ ನಂತರ ಬ್ರಿಟನ್ನಿನಲ್ಲಿ ಕ್ರಮಗಳು ಜಾರಿಗೆ ಬಂದವು. ಅಂತೆಯೇ ಯೂರೋಪಿನ ಬೇರೆ ದೇಶಗಳಲ್ಲಿ ಸಹ. ವಸಾಹತುಗಳಾಗಿ ಹೋಗಿದ್ದ ದೇಶಗಳಲ್ಲಿ ಶ್ರೀಮಂತ ವರ್ಗ, ನೌಕರಶಾಹಿಯಲ್ಲಿ ಮಧ್ಯಮ ವರ್ಗದವರಾದ ಮಂದಿ, ನೂತನ ಅಕ್ಷರಸ್ಥರ ಸೈನ್ಯ, ಎಲ್ಲವೂ ವಸಾಹತುಶಾಹಿಯ ಭಂಟರಂತೆ ಅದರ ಬೆಂಬಲಕ್ಕೆ ನಿಂತರು. ವರ್ಗಸಮಾಜದಲ್ಲಿ ಆಗಾಗ ಸ್ವಲ್ಪ ತುಣುಕುಗಳನ್ನೆಸೆಯುತ್ತಿದ್ದರೆ ಆಳುವ ವರ್ಗವು ಅಲುಗದೆ ನಿಲ್ಲಬಹುದು. ಆದರೆ ಚಿರವಾಗಿ ಅಲ್ಲ. ದಿನದಿಂದ ದಿನಕ್ಕೆ ದೀನರಾಗುವವರ ಸಂಖ್ಯೆ ಹೆಚ್ಚುತ್ತಲೇ ಇದ್ದಾಗ ಬಂಡವಾಳಶಾಹಿಯು ಸ್ಥಿರವಾಗಿ ಉಳಿಯಲಾರದು, ಹೋರಾಟಗಳನ್ನು ದೀನರು ಸದಾಕಾಲ ಮುಂದೂಡುವುದಿಲ್ಲ. ಇನ್ನೇನೂ ತುಣುಕುಗಳು ಉದುರುತ್ತಿಲ್ಲವಲ್ಲ ಎನಿಸಿದಾಗ ಪರ್ಯಾಯ ವ್ಯವಸ್ಥೆಯೊಂದೇ ದಿಕ್ಕು. ಅದಕ್ಕಾಗಿ ಹೋರಾಡುವುದು ವೈಚಾರಿಕವಾಗಿ ಸರಿಯಾದುದೆಂಬ ಭರವಸೆ ಮೂಡುತ್ತದೆ. ವೈಚಾರಿಕತೆಯು ಬೇರೇನನ್ನು ಮಾಡದಿದ್ದರೂ ಪ್ರಸ್ತುತ ವ್ಯವಸ್ಥೆಯನ್ನು ಯಾವಾಗ ಬುಡಮೇಲು ಮಾಡಬೇಕೆಂಬುದನ್ನು ತಿಳಿಸಿಕೊಡುತ್ತದೆ. ಅಷ್ಟಕ್ಕೂ ಬಂಡವಾಳಶಾಹಿಯ ಮೂಲ ಲಕ್ಷಣವೇ ತನ್ನನ್ನು ತಾನು ಹೂತುಕೊಳ್ಳುವಂಥದು. ಅದರ ಕುಸಿತಕ್ಕೆ ಹೊರಗಿನಿಂದ ದೊಡ್ಡ ಗುದ್ದು ಬೇಕಿಲ್ಲ, ತನ್ನ ವೈರುಧ್ಯಗಳ ಹೆಣಭಾರದಿಂದ ಕುಸಿಯಲು ಅದು ಸ್ವತಃ ಸಮರ್ಥವಾಗಿದೆ. ಈಚಿನ ವರ್ಷಗಳಲ್ಲಿ ಅದರ ಸೂಚನೆ ಸಾಕಷ್ಟು ಸಿಕ್ಕಿದೆ. ಇನ್ನೇನು ಕೊನೆಯುಸಿರೆಳೆಯುತ್ತಿದೆ ಎನ್ನುವ ವೇಳೆಗೆ ಒಂದಿಷ್ಟು ಆಮ್ಲಜನಕ ಹೀರಿಕೊಂಡಿದೆ. ಅದರ ವಿನಾಶದ ಸಂದರ್ಭದ ಬರ್ಬರತೆಯು ಅತಿಕ್ರೂರವಾಗಿರುತ್ತದೆ. ಸಮಾಜವಾದವನ್ನು ಹೀಯಾಳಿಸುವವರು ಆ ಬರ್ಬರತೆ ಕಂಡು ದಂಗಾಗಿ ಹೋಗುತ್ತಾರೆ. ಆಗ ಸಂಘಟಿತ ರಾಜಕೀಯ ಶಕ್ತಿಯೊಂದು ಮುಂದೆ ಬಂದು ಸಮಾಜವನ್ನು ಕೈ ಹಿಡಿದು ನಡೆಸಬೇಕು. ಬಂಡವಾಳಶಾಹಿಯ ವಿನಾಶದಿಂದ ಪೆಟ್ಟು ತಿನ್ನುವವರು ಕಡಿಮೆ, ಹೊಸ ವ್ಯವಸ್ಥೆಯಿಂದ ನೆಮ್ಮದಿ ಪಡೆಯುವವರು ಹೆಚ್ಚು. ಬಂಡವಾಳಶಾಹಿಯ ಅವಶೇಷಗಳಲ್ಲಿ ಹೊಸ ವ್ಯವಸ್ಥೆಯನ್ನು ಚಿಗುರಿಸುವುದು ಮಹಾಜನತೆಯ ಹಿಗ್ಗಿನ ಕೆಲಸ. ಹಿಂಸೆ ಎಲ್ಲಿಯದು ಮತ್ತು ಯಾರದು ಎನ್ನುವುದಕ್ಕೆ ಆಗ ವ್ಯಾಖ್ಯಾನಗಳು ಅಪ್ರಸ್ತುತ.

**ಡಾ|| ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧,
೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ
ಬೆಂಗಳೂರು - ೫೬೦ ೦೮೫

# ಅಪ್ಪಾಸಾಹೇಬ ಅಲಿಬಾದಿ ಇವರ 'ವಚನಾಮೃತ'ದಲ್ಲಿ ನಾನು ಕೈಗೊಂಡ ಮಧುವ್ರತ ವಿಹಾರ

ಕಾವ್ಯ ಪ್ರಪಂಚದಲ್ಲಿ ಸಾಮಾನ್ಯವಾಗಿ, ಭಾವಗೀತ, ಭಕ್ತಿಗೀತೆಗಳು, ಭಾವನಾತ್ಮಕ ವಾದವುಗಳು. ಮತ್ತೆ ಕೆಲವು ವರ್ಣನಾತ್ಮಕಗಳು, ವಿಡಂಬನಾತ್ಮಕಗಳು ಇತ್ಯಾದಿ ಇತ್ಯಾದಿ. ಹಲವು ಆತ್ಮಪರವಾದ ಅಧ್ಯಾತ್ಮಪರ ಅಪರೋಕ್ಷಾನುಭೂತಿ ರೂಪೀ ಆವಿರ್ಭಾವ ದ್ಯೋತಕಗಳು ಶಿವ-ಜೀವರ ಐಕ್ಯಾನುಸಂಧಾನ ಸ್ವರೂಪಿ ಅಭಿವ್ಯಕ್ತಿಗಳು. ಇಂತಹ ವಚನ ಸಂದರ್ಭದಲ್ಲಿ ಈ ವಚನ ಕವಿ ಪ್ರತಿ ಹೆಜ್ಜೆಯಲ್ಲೂ ಓದುಗನನ್ನು ಚಿಂತನೆಗೆ ಹಚ್ಚುತ್ತಾನೆ; ವಚನದ ಆಂತರ್ಯದೆಡೆಗೆ ಸೆಳೆದೊಯ್ಯುತ್ತಾನೆ. ಈ ಗುಣ-ಗೌರವ ಅವನ 'ಸಂಸ್ಕೃತಿ', 'ಸ್ನೇಹ', 'ಲೇಸು', 'ಸಂತನ ದರ್ಶನ', 'ಆತ್ಮಬಲ', 'ವೈದ್ಯನ ಗಂಡ', 'ಸಂಸಾರಿ ಜೀವನ ಅಧಿಕ', 'ಸತ್ಯ', 'ಧರ್ಮ', 'ಋಣ', 'ವಿಶ್ವ ಪ್ರೇಮ' – ಇತ್ಯಾದಿ ವಚನಗಳು ಸಾಕ್ಷೀಕರಿಸಿವೆ. ಬದುಕಿನಲ್ಲಿ 'ಸ್ನೇಹ' ಎಂಬುದು ಒಂದು ಮೌಲಿಕ ವಸ್ತು. ಅದು ಸತ್ಸಂಗದಿಂದ ಮಾತ್ರ ಲಭ್ಯ. ಅದನ್ನು ಕವಿ ತನ್ನ ಹಲವು ನಿದರ್ಶನಗಳೊಡನೆ ಪ್ರದರ್ಶಿಸಿದ್ದಾನೆ.

ಡಾ|| ಸಾ. ಶಿ. ಮರುಳಯ್ಯ

೧

ಬದುಕಿನ ಎಲ್ಲ ಕ್ಷೇತ್ರದಲ್ಲೂ ಬದಲಾವಣೆ ಅನಿವಾರ್ಯ. ಕಾಲಗತಿಯಲ್ಲಿ ಪ್ರತಿಯೊಂದೂ ಬದಲಾಗಲೇಬೇಕು. ಆಂಗ್ಲಕವಿ ಲಾರ್ಡ್ ಟೆನಿಸನ್ ತನ್ನೊಂದು ನೀಳ್ಗವನದಲ್ಲಿ ಈ ನಿತ್ಯಸತ್ಯದ ಕಡೆಗೆ ಜಗತ್ತಿನ ಜನತೆಯ ಗಮನ ಸೆಳೆದಿದ್ದಾನೆ.

ಅಂದರೆ ಹಳೆಯ ಸಂಪ್ರದಾಯ ಅದೆಷ್ಟೇ ಶ್ರೇಷ್ಠವಿದ್ದರೂ ಬದಲಾವಣೆ ಪಡೆದ ಹೊಸ ಪರಂಪರೆಗೆ ತಲೆಬಾಗಲೇಬೇಕು. ತಪ್ಪಿದರೆ, ಅದು ವಿನಾಶಕಾರಿ ಭ್ರಷ್ಟಾಚಾರಕ್ಕೆ ಅವಕಾಶ ಮಾಡಿ ಕೊಟ್ಟಂತಾಗುತ್ತದೆ. ಅಂದರೆ ಮಾನವೀಯತೆ ಮಣ್ಣಾಗುತ್ತೆ, ದೇಶ ಸರ್ವನಾಶವಾಗುತ್ತೆ. ಹೊಸ ನೀರಿಗೆ ಅವಕಾಶ ಕಲ್ಪಿಸಿಕೊಟ್ಟು, ಹಳೇ ನೀರು ಹೋಗಲೇಬೇಕು. ಹಣ್ಣೆಲೆ ಉದುರಲೇ ಬೇಕು ಚಿಗುರಿಗಾಸ್ಪದವಿತ್ತು. ಎಷ್ಟೇ ಶ್ರೇಷ್ಠವೆಂದೆನಿಸಿದ್ದರೂ ನಿಂತ ನೀರು ಕೊಚ್ಚೆ, ಹರಿಯುವ ನದಿ ತೀರ್ಥ! ನಿಂತ ನೀರು ಮಲೆತು ಸೊಳ್ಳೆಗಳು ಹೆಚ್ಚಿ, ಅನೇಕ ಬಗೆಯ ಸಾಂಕ್ರಾಮಿಕ ರೋಗಗಳ ಜನ್ಮಸ್ಥಳವಾಗುತ್ತದೆ. ಆ ಕಾರಣ ಬದುಕಿನ ಎಲ್ಲ ಚಟುವಟಿಕೆಗಳಲ್ಲೂ ಬದಲಾವಣೆ ಅನಿವಾರ್ಯ. ಬದಲಾವಣೆಯೇ ಬೆಳವಣಿಗೆ; ಬದಲಾವಣೆಯೇ ಹಸನಾದ ಬದುಕು.

ಈ ತತ್ತ್ವ ಸಿದ್ಧಾಂತಕ್ಕೆ ಸಾಹಿತ್ಯಕ್ಷೇತ್ರ ಹೊರತಲ್ಲ. ಉದಾಹರಣೆಗೆ : ವಿಶ್ವ ಸಾಹಿತ್ಯಕ್ಕೆ ಕರ್ನಾಟಕ ಕೊಟ್ಟ ಅತ್ಯಮೂಲ್ಯ ಕಾಣಿಕೆ ಎಂಬ ಗೌರವಕ್ಕೆ ಪಾತ್ರವಾದ ಹನ್ನೆರಡನೆಯ ಶತಮಾನದಲ್ಲಿ ಬಸವಾದಿ ಪ್ರಮಥರು ಕೊಟ್ಟ 'ವಚನ ಸಾಹಿತ್ಯ.' ಅಂದು ಅಷ್ಟು ಉಚ್ಛ್ರಾಯ ಸ್ಥಿತಿಗೇರಬೇಕಾದ ಸಂದರ್ಭದಲ್ಲಿ ಅದಕ್ಕೊಂದು ಮೂಲಭೂತ ಉದ್ದೇಶವಿತ್ತು. ಅಸಗೆಟ್ಟ ಸಮಾಜ ಅಸ್ತವ್ಯಸ್ತತೆಯ ಸುಧಾರಣೆ ಅದರ ಆದ್ಯ ಕರ್ತವ್ಯವಾಗಿತ್ತು. ಅಂದಿನ ಸಮಾಜದ ಒಳಿತಿಗಾಗಿ ಮೌಢ್ಯ ಖಂಡನೆ, ಸ್ತ್ರೀ ಸಂವೇದನೆಯ ಉದ್ಘಾಟನೆ, ಅಸ್ಪೃಶ್ಯತಾ ನಿವಾರಣೆ, ದೇಹವೇ ಜಂಗಮ ದೇವಾಲಯವೆಂಬ ಸದ್ಭಾವನೆ ಮೂಡಿಸುವ ಸಂದರ್ಭದಲ್ಲಿ ದೇಗುಲ ನಿರ್ಮಾಣ ಖಂಡನೆ, ಏಕದೇವೋಪಾಸನೆ, ಸ್ವರ್ಗದ ಮೋಹ, ನರಕದ ಭೀತಿಗಳ ಉಚ್ಚಾಟನೆ, ಕಾಯಕ ನಿಷ್ಠೆ ಮತ್ತು ದಾಸೋಹದ ಮಹತ್ವ ಇತ್ಯಾದಿ ಲೋಕಸಂಗ್ರಹ ಕಾರ್ಯ ಅರ್ಥಾತ್ ಲೋಕೋದ್ಧಾರದ ಅನಿವಾರ್ಯತೆ ಅದರ ಮೂಲೋದ್ದೇಶವಾಗಿತ್ತು. ಹನ್ನೆರಡನೆಯ ಶತಮಾನದ ಈ ಧ್ಯೇಯ ಧೋರಣೆಗಳು ಹದಿನೈದನೆಯ ಶತಮಾನದಲ್ಲಿ ಸಂಭಾಷಣೆಯ ಸೌಷ್ಠವದ ನಾಟಕೀಯ ಲಕ್ಷಣ ಪಡೆಯಿತು. ಇದು ಶ್ರೀ ಸಿದ್ಧಲಿಂಗೇಶ್ವರರ ಅನಂತರವೂ ಕೆಂಚ ವೀರಣ್ಣೊಡೆಯ, ಹಲಗೆದೇವ, ಗುಮ್ಮಳಾಪುರದ ಸಿದ್ಧಲಿಂಗ ಮತ್ತು ಗೂಳೂರ ಸಿದ್ಧವೀರಣ್ಣೊಡೆಯರಲ್ಲೂ ಮುಂದುವರಿಯಿತು. ಹದಿನಾರರ ಆದಿಯಲ್ಲಿ ಅವತರಿಸಿದ ಎಡೆಯೂರ ಜಡೆಮುಡಿಯ ವರಸಿದ್ಧಲಿಂಗ ಯತಿಗಳ ಹಸ್ತದಲ್ಲಿ ಅಧ್ಯಾತ್ಮದ ಔನ್ನತ್ಯಕ್ಕೇರಿತು. ಅದು ಜೇವರಿಗಿಯ ಷಣ್ಮುಖ ಸ್ವಾಮಿಗಳವರೆಗೂ ಮುಂದುವರಿಯಿತು. ಇಪ್ಪತ್ತನೆಯ ಶತಮಾನದ ಮಧ್ಯಭಾಗದಲ್ಲಿ ಅದಕ್ಕೆ ಗುರುಬಲ ಬಂದು ತೀ. ನಂ. ಶ್ರೀಕಂಠಯ್ಯ ನವರು, ಎಸ್. ವಿ. ರಂಗಣ್ಣನವರು ಇವರಲ್ಲಿ ಪುನಶ್ಚೇತನಗೊಂಡು ಸಿದ್ಧಯ್ಯ ಪುರಾಣಿಕರ ಸಿದ್ಧಹಸ್ತದಲ್ಲಿ ವಿನೂತನ ಪ್ರತಿಮಾ ಜಗತ್ತನ್ನು ಮೈಗೂಡಿಸಿಕೊಂಡು ತುಂಬ ಜನಪ್ರಿಯತೆ ಗಳಿಸಿಕೊಂಡಿತು. ಅದು 'ಜಚನಿ' ಮೊದಲಾದವರಲ್ಲಿ ಹಲಬಗೆಯ ಬಣ್ಣ ಭಣಿತೆಗಳನ್ನು ಪಡೆದು, ಪ್ರಸ್ತುತದ ಬಹುಪ್ರತಿಭೆಯ ಸಿದ್ಧಪುರುಷ 'ಬಸವ ನೀಲಾಂಬಿಕಾತನಯ' ಅಂಕಿತ ಧರಿಸಿದ ಅಪ್ಪಾಸಾಹೇಬ ಅಲಿಬಾದಿಯವರು ಆಧ್ಯಾತ್ಮಿಕ, ಸಾಮಾಜಿಕ, ರಾಜಕೀಯ ವಿಪ್ಲವದಲ್ಲಿ ಇಪ್ಪತ್ತೊಂದನೆಯ ಶತಮಾನದಲ್ಲಿ ಮಾನವೀಯ ಮೌಲ್ಯಗಳು ನಶಿಸುತ್ತಿರುವ ಈ ಸಂದಿಗ್ಧ ಸಂದರ್ಭದಲ್ಲಿ ಎಚ್ಚರಿಕೆಯ ಘಂಟೆಯನ್ನು ಬಾರಿಸಿ, ಜನತೆಯನ್ನು ಎಬ್ಬಿಸುವ ಕಾಯಕದಲ್ಲಿ ನಿರತರಾಗಿದ್ದಾರೆ. ಈ ಸುತ್ತ್ಯ ಪ್ರಯತ್ನದಿಂದಾಗಿ 'ಬಸವ ನೀಲಾಂಬಿಕಾತನಯ' ಕ್ರಾಂತಿಕಾರಿ ವಚನಕಾರನೆನಿಸಿದ್ದಾನೆ. ತಪ್ಪು ತಿಳಿಯಬಾರದು, 'ಕ್ರಾಂತಿ'ಯ ಅರ್ಥ ಅನರ್ಥಕಾರಿಯಲ್ಲ, ಅದು ಸುಧಾರಣೆಯ ಅಮೃತಸಂಧಿ ಸಂಯೋಜನೆ. ಅವನ 'ವಚನಾಮೃತ'ವೆಂಬ ಆಧುನಿಕ ವಚನ ಸಂಕಲನದಲ್ಲಿ ಸುಧಾರಣೆಯ ರಸಸ್ರೋತಸ್ವಿನಿ ಓತಪ್ರೋತವಾಗಿದೆ. ಅದರ ಭಾವಲೋಕದಲ್ಲಿ ನಾವು-ನೀವು ಮಧುವ್ರತ ಕಾರ್ಯಕ್ಕೆ, ಅಂದರೆ ಹೂವು ಹೂವಿನ ಎದೆಯ ಮೇಲೆ ಕುಳಿತು, ಅದರ ಹೊಂಬಟ್ಟಲಲ್ಲಿರುವ ಮಧುವನ್ನೇ ಹೀರುವ ರಸಕ್ರಿಯೆಗೆ ತೊಡಗೋಣ.

೨

ಅಪ್ಪಾಸಾಹೇಬ ಅಲಿಬಾದಿಯವರ ಪ್ರತಿಭೆಗೆ ಅನಂತ ಮುಖಗಳು, ಅವರ 'ವೀರಭದ್ರ ಸಾಹಸ'ಕ್ಕೆ ಅನಂತ ಬಾಹುಗಳು. 'ಆಡು ಮುಟ್ಟದ ಸೊಪ್ಪಿಲ್ಲ', ಅನ್ನುವಂತೆ. ಅಲಿಬಾದಿ ಕೈಹಾಕದ ಕೆಲಸವಿಲ್ಲ. ಜೀವನದ ಅನೇಕ ಕ್ಷೇತ್ರಗಳ ಅನುಭವ ಅವರಿಗಿದೆ. ಅವರು ತಮ್ಮ ಅನ್ಯಾದೃಶ ಜೀವನಾನುಭವದಲ್ಲಿ ಸಾಮಾಜಿಕ ಜೀವನದ ನೈತಿಕ ಮೌಲ್ಯ ವಿನಾಶ, ರಾಜಕೀಯ ವಿದ್ರೋಹ ಹಾಗೂ ಶೋಷಣೆ, ಭ್ರಷ್ಟಾಚಾರದ ಹಲವು ಮುಖಗಳನ್ನು ಕಂಡು

ಕೆಂಡಾಮಂಡಲವಾಗಿದ್ದಾರೆ. ಅಷ್ಟೇ ಪ್ರಮಾಣದಲ್ಲಿ ಸಕಲವನ್ನೂ ತಮ್ಮ ವಿವೇಚನೆಯ ತ್ರಾಸಿನಲ್ಲಿ ತೂಗಿ ಸಮತೋಲನವನ್ನು ಕಾಪಾಡಲು ಶ್ರಮಿಸಿದ್ದಾರೆ. ಆದರೆ ಅದನ್ನು ಕಾರ್ಯರೂಪಕ್ಕೆ ತರುವೆಡೆಯಲ್ಲಿ ಅವರ ನುಡಿಗುಡುಗಿನಲ್ಲಿ ಸಿಡಿಲಿನ ಆರ್ಭಟವಿದೆ, ಕೊಚ್ಚಿಕೊರೆದು ಹುಚ್ಚೆದ್ದು ಹರಿವ ತುಂಬು ತೊರೆಯ ಸೆಳೆತವಿದೆ. ಅದರಲ್ಲಿ ನಾನು ತಿಳಿದಂತೆ ಹದಿನಾರನೆಯ ಶತಮಾನದ ನಿರ್ದಾಕ್ಷಿಣ್ಯಪರ ನಿಷ್ಠುರವಾದಿ ಕನ್ನಡದ ಪರಿವ್ರಾಜಕ ಆಶುಕವಿ ಸರ್ವಜ್ಞನ ಮನೋಧರ್ಮ ಮೆರೆದಾಡಿದೆ! ಅದಕ್ಕೆ ಯಾರ ಮರ್ಜಿ ಮುಲಾಜಿಗೂ ಮಣಿಯದ ಧಿರೋದಾತ್ತ ಧ್ಯೇಯವಿದೆ. ನನ್ನ ದೃಷ್ಟಿಯಲ್ಲಿ ಕವಿ ಮಿತ್ರ ಅಪ್ಪಾಸಾಹೇಬ ಅಲಿಬಾದಿ 'ಅಭಿನವ ಸರ್ವಜ್ಞ' ಎಂಬ ಕೀರ್ತಿಗೆ ಪಾತ್ರನಾಗಿದ್ದಾನೆ. ಈ ಹೇಳಿಕೆಯನ್ನು ಒಂದು ವಚನವೂ ಸಾಕ್ಷೀಕರಿಸುತ್ತಿದೆ. ಕೇಳಿ :

*ಸರ್ವಜ್ಞ ಕವಿ ಆಳರಸರ ಗುಲಾಮನಾದವನಲ್ಲವಯ್ಯಾ*
*ಅವರ ಹೊಗಳುಭಟ್ಟನಾದವನಲ್ಲವಯ್ಯಾ*
*ಸಮಾಜದ ಓರೆಕೋರೆ ತಿದ್ದುವ, ಸಮಾಜಪರ ಒಲವು*
*ಜೀವಪರ ನಿಲುವು ಉಳ್ಳ ಸತ್ಯನಿಷ್ಠ ಸಮಾಜ ಚಿಂತಕನಾಗಿದ್ದನಯ್ಯಾ*
*ಎಂದ... ಬಸವನೀಲಾಂಬಿಕಾತನಯ !* – (ವಚ : ೪೮)

– ಸರ್ವಜ್ಞನ ಈ ಎಲ್ಲ ಕಲ್ಯಾಣ ಗುಣಗಳೂ ಅಪ್ಪಸಾಹೇಬನಲ್ಲಿ ಮೂರ್ತೀಭವಿಸಿವೆ! ಹಿಂಡನಗಲಿದ ಒಂಟಿಸಲಗ ಸರ್ವಜ್ಞನಂತೆ ಈತನ ವಚನ ರಚನೆಯಲ್ಲಿ ನಿರ್ಭಿಡೆ, ನೈಷ್ಠುರ್ಯಗಳು ನಿತ್ಯ ಗಾಯತ್ರಿಯಾಗಿ, ಹರಳುಗೊಂಡು ನಿಂತಿವೆ. ಆದರೆ ಈ ಕವಿ ತನ್ನ ಸ್ವೋಪಜ್ಞತೆಗೆ (ತನ್ನತನ) ತಿಲಾಂಜಲಿ ಕೊಟ್ಟಿಲ್ಲ. ತನ್ನ ಧ್ಯೇಯಕ್ಕೆ ಪೂರಕ ಪೋಷಕವಾಗಿ ಹಲವು ವಾಗಾಮೃತ ಬಿಂದುಗಳನ್ನು ಭೂರಿ ಎರಚಿದ್ದಾನೆ. ಕೇಳಿ :

*ಅರಿಯದೇ ಮಾಡಿದ ತಪ್ಪು ತಪ್ಪಲ್ಲವಯ್ಯಾ*
*ಅರಿಯದೇ ಮಾಡಿದ ಪಾಪ ಪಾಪವಲ್ಲಯ್ಯಾ*
*ಅನೀತಿಯಿಂದ ಬದುಕೋದು ತಪ್ಪು ನೋಡಯ್ಯಾ*
*ಅರಿತು ಮಾಡುವ ತಪ್ಪು ಘನಘೋರ ಪಾಪ ಕಾಣಯ್ಯಾ*
*ಪುಣ್ಯದ ಬಲವೊಂದೇ ಆತ್ಮಸಾಕ್ಷಾತ್ಕಾರಕ್ಕೆ ನಾಂದಿ ತಿಳಿಯಯ್ಯಾ*
*ಎಂದ. ಬಸವನೀಲಾಂಬಿಕಾತನಯ !* – (ವಚ : ೧೧೬)

– ಇದರಲ್ಲಿ ನಾವು ತಿಳಿಯಲೇಬೇಕಾದ ಒಂದು ಸೂಕ್ಷ್ಮ ಸತ್ಯ ಅಡಗಿದೆ. ಅದು ಬೇರಾವುದೂ ಅಲ್ಲ, ಈ ಪ್ರಾಪಂಚಿಕ ಜೀವನದಲ್ಲಿ ತಪ್ಪು ಮಾಡದ ಅಪ್ಪಗಳೇ ಇಲ್ಲ ಎಂಬ ಕಟುಸತ್ಯ ಅರಿತೋ ಅರಿಯದೆಯೋ ನಾವು ತಪ್ಪು ಮಾಡುತ್ತೇವೆ. ಆದರೆ ನಾವು ಮಾಡಿದ್ದೇ ಸರಿ ಎಂದು ಸಮರ್ಥಿಸಿಕೊಳ್ಳಲು ಹೋಗಬಾರದು. ಅದು ನಾನು ಎಡವಿದ್ದೇ ಸರಿ ಎಂದಂತಾಗುತ್ತದೆ. ಎಡವಿದ ಬೆರಳು ಕೆಲವು ದಿನಗಳಲ್ಲಿ ಸೆಪ್ಟಿಕ್ ಆಗಿ ಅನಾಹುತವನ್ನೆದುರಿಸ ಬೇಕಾಗುತ್ತದೆ. ಆ ಕಾರಣ ತಪ್ಪನ್ನು ತಿದ್ದಿಕೊಳ್ಳುವುದು ಮಾನವನ ಸಹಜ ಧರ್ಮ. ಆಧ್ಯಾತ್ಮಿಕವಾಗಿ ಚಿಂತಿಸಿದಾಗ ಅದು ಸಾವಿರ ಕಿ.ಮೀ. ದೂರ ಪಯಣ ಹೊರಟವನಿಗೆ ಅವನ ಮೊದಲ ಹೆಜ್ಜೆ ಪ್ರಮುಖ ವೆನಿಸಿದಂತೆ ಅವನ ಆತ್ಮಸಾಕ್ಷಾತ್ಕಾರಕ್ಕೂ ಅದು ಮಂಗಲಾಚರಣವಾಗುತ್ತದೆ.

ನಮ್ಮ ಈ ವಚನ ವಾಙ್ಮಯ ವಿಹಾರಿ ಅಧ್ಯಾತ್ಮ ಲೋಕದ ಅಗ್ರಾಹ್ಯ ವಸ್ತುವನ್ನು ವಶವರ್ತಿಯನ್ನಾಗಿ ಮಾಡಿಕೊಳ್ಳಲು ತನ್ನ ಕಲ್ಪನೆಯ ಕೈಚಾಚಿದ್ದರೂ ಅವನು ನಿಂತಿರುವುದು ಇಂದಿನ ವಾಸ್ತವತೆಯ ಭದ್ರ ಬುನಾದಿಯ ಮೇಲೆ, ಹೇಳುತ್ತಾನೆ :

*ಭೂತದಲ್ಲಿ ಭ್ರಮಿಸುವವರ ಕಂಡೆ*
*ಭವಿಷ್ಯತ್ತಿನಲ್ಲಿ ವಿಹರಿಸುವವರ ಕಂಡೆ*
*ವರ್ತಮಾನದಲಿ ಬದುಕುವವರ ಕಾಣೆನೆಂದ*
*ಬಸವನೀಲಾಂಬಿಕಾತನಯ* – (ವಚ : ೧೧೧)

– ಇದೊಂದು ವಿಪರ್ಯಾಸ.

ಹುಟ್ಟದಿರುವ ನಾಳೆ ಸತ್ತಿರುವ ನಿನ್ನೆಯಷ್ಟೇ ನಿಷ್ಫಲ. ಇದನ್ನರಿತ ವಚನಕಾರ ಎಚ್ಚರಿಸುತ್ತಾನೆ : ಸತ್ತಿರುವ ನಿನ್ನೆಯನ್ನು ಮರೆ, ಭರವಸೆಯ ನಾಳೆ ಶೂನ್ಯ. ಅದನ್ನು ದೂರವಿರಿಸು. ನಾಳೆ ನಿನ್ನೆಯಲ್ಲ, ಅದು ಕರಗಿಹೋಗುವ ಮಂಜುಗಡ್ಡೆ! ಅದನ್ನಾವ ಪುರುಷಾರ್ಥ ಸಾಧನೆಗಾಗಿ ನೆನೆಯುತ್ತಾ ಕಾಲ ವ್ಯಯ ಮಾಡುತ್ತೀಯೆ. ನೀನು ಬದುಕುತ್ತಿರುವ ಈ ಕ್ಷಣಕ್ಕೆ, ಇಂದಿನ ವರ್ತಮಾನಕ್ಕೆ ನಾಳೆಯಲ್ಲಲ್ಲ, ಅದ್ಯತನವನ್ನು ಕುರಿತು ಚಿಂತಿಸು. ಈಗ ಏನಾಗಬೇಕಿದೆ, ನಾನೆಷ್ಟು ಆಗುಮಾಡಲು ಸಾಧ್ಯ. ಆಲೋಚಿಸು. ಇಂದಿನ ಸಾಧ್ಯತೆಗಾಗಿ ಬದುಕು. ಅದಕ್ಕೆ ತಕ್ಕಂತೆ ಕಾರ್ಯತತ್ಪರನಾಗು. – ಇದು ಬುದ್ಧದೇವನ ಬೋಧನೆ ಅರಿತು, ಆಚರಿಸು. ಯಾರು ಏನೇ ಹೇಳಲಿ ನಾಳೆ ನಿನ್ನೆಗಿಂತ ಒಳ್ಳೆಯದಾಗಲಾರದು ಎಂದಿದ್ದಾನೆ ಪಬ್ಲಿಯಸ್ ಸೈರಸ್ ಎಂಬಾತ. ಆದರೆ ಪಬ್ಲಿಯಸ್‌ನನ್ನು ಮೆಚ್ಚದ, ನಾವು ಮೇಲೆ ಉದ್ಧೃತಗೊಳಿಸಿದ ಬುದ್ಧದೇವನ ಹಿತವಚನವನ್ನು ಎತ್ತಿ ಹಿಡಿದು, ಶ್ರೀ ಶ್ರೀ ಆನಂದಮೂರ್ತಿ ಎಂಬ ದಾರ್ಶನಿಕರು,

''ನಿನ್ನೆಯನ್ನು ಮರೆಯದಿದ್ದರೆ ನೀನು ಬಹುಬೇಗ ಇಲ್ಲವಾಗುತ್ತೀಯೆ. ಏಕೆಂದರೆ ನಿನಗೆ ನಿನ್ನೆಯನ್ನು ಇಂದಿನೊಡನೆ ಸಮೀಕರಿಸಿಕೊಳ್ಳುವ ಶಕ್ತಿಯಿಲ್ಲ. ಯಾರು ಈಗಾಗಲೇ ಮೋಕ್ಷವನ್ನು ಸಾಧಿಸಿಕೊಂಡಿದ್ದಾರೆ ಅವರ ಶ್ರೀಮಂತ ಚೈತನ್ಯಕ್ಕೆ ಗತಿಸಿದ ಬದುಕಿನ ನೆನಪು ಇರಬಹುದು ಅಥವಾ ಇಲ್ಲದಿರಬಹುದು. ಇದು ಮನಶ್ಶಾಸ್ತ್ರಕ್ಕೆ ಸಂಬಂಧಿಸಿದ, ಮನಸ್ಸು ಮನಸ್ಸುಗಳಿಗೆ ವೇದ್ಯವಾಗುವ ಭಾವಸಂವಹನ ಪ್ರಕ್ರಿಯೆಗೆ ಮಾತ್ರ ಅರ್ಥವಾಗುವಂತಹದು.''

– ಈ ಹೇಳಿಕೆಗಳಿಗೆ ಕಿರೀಟಪ್ರಾಯವಾಗಿ ಜಗದಣ್ಣ ಬಸವಣ್ಣ ಒಂಭೈನೂರು ವರ್ಷಗಳ ಹಿಂದೆಯೇ,

ನಾಳಿನ ದಿನಕಿಂದಿನ ದಿನ ಲೇಸೆಂದು ಹೇಳಿರಯ್ಯಾ (ಹಾಗೆಂದು ಹೇಳಿದರೆ) ಕೂಡಲ ಸಂಗಮದೇವನ ಪೂಜಿಸಿದ ಫಲ ನಿಮ್ಮದಯ್ಯಾ ಎಂದು ಆಶಿಸಿ ಆಶೀರ್ವದಿಸಿದ್ದಾನೆ.

ಕವಿ, ವಚನಕಾರ ಅಲಿಬಾದಿ ತನ್ನ ಚಿಂತನೆಯ ಹೆಜ್ಜೆಗೊಂದು ಸಮರ್ಥನೆಯ ಗೆಜ್ಜೆ ಕಟ್ಟುತ್ತಾನೆ, ರಂಜನೆಯ ರಸಿಕತೆಯ ರಾಗ ಸಂಯೋಜಿಸುತ್ತಾನೆ. ಸಹಜತೆಯ ತಾಳ-ಮೇಳ ಗಳೊಂದಿಗೆ ಸತ್ಯ ಸಾಕ್ಷಾತ್ಕಾರಕ್ಕೆ 'ಓಂಕಾರ' ಬರೆಯುತ್ತಾನೆ. ಓದಿನೋಡಿ ಈ ಕೆಳಗಿನ ವಚನ ಎಷ್ಟು ಸರಳ, ಎಷ್ಟು ಅರ್ಥಗರ್ಭಿತ. ಮಾತಿನ ಮೋಡಿ, ಭಾವದ ಬೆಡಗು, ಓದುಗನ ಚಿತ್ತ ಚೇತೋಹಾರಿ ಸೌಂದರ್ಯದ ಸೊಗಡು ಇವೆಲ್ಲವೂ ಹೇಗೆ ಸಮರಸದಲ್ಲಿ ಸಂಯೋಜನೆ ಗೊಂಡಿವೆ! ಇದಕ್ಕಿಂತ ಸರಳತೆ ಶ್ರೀಮಂತಿಕೆ ಎಲ್ಲಿದೆ ಕಾವ್ಯ ಸರೋಜದಲ್ಲಿ?

*ಬೇಸಗೆಯ ಬಿರುಬಿಸಿಲಿಗೆ ಮಾವಾದರೇನು*
*ಬೇವಾದರೇನು ,*
*ತಂಬೆಲರಿನ ಮರವಾದರೆ ಸಾಕಲ್ಲವೆ ?*
*ಹಸಿದವನಿಗೆ ಹೋಳಿಗೆಯಾದರೇನು...*
*ಹುಗ್ಗಿಯಾದರೇನು,*
*ಹೊಟ್ಟೆ ತುಂಬಿಸುವ ಅನ್ನವಾದರೆ ಸಾಕಲ್ಲವೆ ?*
*ಸತ್ಯಪಥಿಕನಿಗೆ ಯಾರು ಗುರುವಾದರೇನು*
*ಸತ್ಯಪಥವ ತೋರಿಸುವ ಗುರುವಾದರೆ ಸಾಕಲ್ಲವೇನು ?*
*ಎಂದ ಬಸವನೀಲಾಂಬಿಕಾತನಯ* – (ವಚ : ೭೬)

– ಇದು ಕವಿಯ ಕೈ ಲೇಖಣಿಯ ಶ್ರೀಮಂತಿಕೆಯನ್ನು ಮೆರೆದ ವಚನ! ಅಲ್ಲವೆ ? ಸರಳತೆಗೆ ಮತ್ತೊಂದು ವಚನ :

*ಸಿದ್ಧೇಶ್ವರ ಸ್ವಾಮೀಜಿ ಅವರಂತಹ*
*ಸರಳ ಸನ್ಯಾಸಿ, ಅವಿರಳ ಜ್ಞಾನಿ*
*ಸಿಗುವುದು ಅತೀ ವಿರಳ ನೋಡಯ್ಯಾ*
*ಎಂದ ಬಸವನೀಲಾಂಬಿಕಾತನಯ.* – (ವಚ : ೬೯)

ಈ ವಚನದ ಸರಳತೆಯ ಭಾವ ಗರ್ಭದಲ್ಲಿ ಅಮೇಯಜ್ಞಾನ ವಾರ್ಧಿಯ ಭವ್ಯತೆ ದ್ಯುತಿ ವಡೆದು ನಿಂತಿದೆ ಭೂಮಿ ಆಕಾಶ ತುಂಬಿ.

ಬಿಜಾಪುರದ ಜ್ಞಾನಯೋಗಿ ಶ್ರೀ ಸಿದ್ಧೇಶ್ವರ ಸ್ವಾಮೀಜಿಯವರ



## ಅಭಿನಂದನೆಗಳು

**ಡಾ॥ ಎನ್. ಎಸ್. ಲೀಲಾ ಅವರಿಗೆ ಜೀವಮಾನ ಸಾಹಿತ್ಯ ಸಾಧನೆಗಾಗಿ ೨೦೧೨ನೇ ಸಾಲಿನ 'ಜನಪ್ರಿಯ ವಿಜ್ಞಾನ ಸಾಹಿತ್ಯ ವೇದಿಕೆ ಪ್ರಶಸ್ತಿ'ಯನ್ನು ಇತ್ತೀಚೆಗೆ ಗುಲಬರ್ಗಾದಲ್ಲಿ ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ನಡೆಸಿದ ವಿಜ್ಞಾನ ಸಾಹಿತ್ಯ ಸಮ್ಮೇಳನದಲ್ಲಿ ನೀಡಿ ಗೌರವಿಸಲಾಗಿದೆ. ಇವರ ಹಲವಾರು ಕೃತಿಗಳನ್ನು ಪ್ರಕಟಿಸಿದ 'ನವಕರ್ನಾಟಕ' ಮತ್ತು ಲೇಖನಗಳನ್ನು ಪ್ರಕಟಿಸಿದ 'ಹೊಸತು' ಪತ್ರಿಕೆ ಲೇಖಕಿಯನ್ನು ಅಭಿನಂದಿಸುತ್ತದೆ.**

ಅಮೃತೋಪಮ ಶ್ರೀವಾಣಿಯನ್ನು ಕೇಳಿ ಧನ್ಯನಾದ ಈ ವಚನಕಾರ ಕವಿ ಅವರ ಜೀವನದ ಸಾರಳ್ಯ, ಅವರ ಅಂತರಂಗದ ಜ್ಞಾನ ದೀಪ್ತಿ, ಅವರ ಮುಖೋದ್ಭೂತ ಬೋಧಾಮೃತದ ರಸಸ್ರೋತದ ಜೇಂಗೊಡ - ಇವು ಕಲ್ಪನಾತೀತ; ವರ್ಣನಾತೀತ. ಬಣ್ಣಿಸ ಹೊರಟರೆ ಮಾತು ಸೋತು ಹೋಗುತ್ತೆ. 'ಶ್ರೀ ಸಿದ್ದೇಶ್ವರ' ಎಂಬುದೊಂದು ವ್ಯಕ್ತಿಯಲ್ಲ, ಒಂದು ಶಕ್ತಿ, ಮಾತ್ರವಲ್ಲ, ಅದೊಂದು ಮಂತ್ರ! ಕರ್ನಾಟಕದಲ್ಲಿ ಮಾತ್ರವಲ್ಲ, ದೇಶ ವಿದೇಶಗಳಲ್ಲೂ ಅದು ಪಠಣ ಯೋಗ್ಯವೆನಿಸಿದೆ. ಅಂತಹ ಮಹಾನ್ ಚೈತನ್ಯ ಶ್ರೀಯನ್ನು ಒಂದು ಕಿರು ವಚನದಲ್ಲಿ ಸೆರೆಹಿಡಿದಿದ್ದಾನೆ ಬಸವನೀಲಾಂಬಿಕಾತನಯ. ಆದರೂ ಅದೊಂದು ಜ್ಞಾನ ನಿಧಿ. ಕಸ್ತೂರಿ ಕಟ್ಟಿ ಬಟ್ಟೆ, ಮೌಲಿಕವೂ ಅಹುದು, ಅವಿಶ್ರಾಂತ ಪರಿಮಳ ಪೂತವೂ ಅಹುದು.

*ಕಪ್ಪೆ ಚಿಪ್ಪಿನಲಿ ಮುತ್ತಿನ ಮಳೆ ಹನಿಗಳು*
*ಮುತ್ತುಗಳಾಗಿ ಅರಳಿ ನಗುವುದ ಕಂಡೆ!*
*ಗಿಡದಲಿ ಗಿಡ ಹುಟ್ಟುವುದ ಕಂಡೆ!*
*ಬೀಜದಲಿ ವೃಕ್ಷ ಅಡಗಿರುವುದ ಕಂಡೆ!*
*ಲಿಂಗ ಸಂಪರ್ಕವಿಲ್ಲದೆ 'ಕ್ಲೋನಿಂಗ್'*
*ತದ್ರೂಪ ಶಿಶು ಬೆಳೆವುದ ಕಂಡೆ.*
*ಪಿಂಡಾಂಡದಲಿ ಬ್ರಹ್ಮಾಂಡವ ಕಂಡೆ*
*ಬ್ರಹ್ಮಾಂಡದಲಿ ನಿನ್ನನೇ ನಾ ಕಂಡೆನೆಂದ*
*ಬಸವನೀಲಾಂಬಿಕಾತನಯ* –(ವಚ : ೧೧)

- ಅನಾದಿಕಾಲದಿಂದಲೂ ಅವಿಶ್ರಾಂತವಾಗಿ ಚಾಲನೆ ಯಲ್ಲಿರುವ ನೈಸರ್ಗಿಕ ಪ್ರಕ್ರಿಯೆ ಮತ್ತು ಅದರ ಪರಿಣಾಮ, ಆಧ್ಯಾತ್ಮಿಕ ವಲಯದ ಅಪರೋಕ್ಷ ಜ್ಞಾನರೂಪೀ ಅವರ್ಣನೀಯ ಶಿವ ಸಾಕ್ಷಾತ್ಕಾರದ ಆನಂದಾನುಭೂತಿ ಹಾಗೂ ಇಂದಿನ ವೈಜ್ಞಾನಿಕ ಯುಗದ ವಿನೂತನ ಆವಿಷ್ಕಾರದ ಸಫಲತೆ – ಇವೆಲ್ಲವುಗಳ ಕ್ರೋಡೀಕರಣದ ಫಲಪ್ರಾಪ್ತಿ ಈ ವಚನದಲ್ಲಿದೆ.

*ಕೇವಲ ಪ್ರಚಾರದಿಂದ ಧರ್ಮ ಪ್ರಸಾರವಾಗದಯ್ಯಾ*
*ಕೇವಲ ವಿಚಾರದಿಂದ ಧರ್ಮ ಪ್ರಸಾರವಾಗದಯ್ಯಾ*
*ಸ್ವೀಕಾರ ಮಾಡಿ ಆಚಾರಕ್ಕಿಳಿದಾಗ ಧರ್ಮ*
*ಪ್ರಸಾರವಾಗುವುದಯ್ಯಾ*
*ಎಂದ ಬಸವನೀಲಾಂಬಿಕಾತನಯ!* –
(ವಚ : ೬೬)

– ಧರ್ಮಪ್ರಸಾರ ಕುರಿತು 'ಯುಗಧರ್ಮದ ವೈಚಿತ್ರ್ಯದ ಕಡೆಗೆ ನಮ್ಮ ಗಮನ ಸೆಳೆದಿದ್ದಾನೆ 'ಬಸವ ನೀಲಾಂಬಿಕಾತನಯ'. ನಮ್ಮ ರಾಷ್ಟ್ರದಲ್ಲಿ ಹಿಂದಿದ್ದದ್ದು ವಿಚಾರಯುಗ, ಈಗಿನದು ಪ್ರಚಾರ ಯುಗ, ಆದರೆ ಇದು ವಾಸ್ತವವಾಗಿ ಜಂಗು ಹತ್ತಿದ ಕಬ್ಬಿಣದ ತುಂಡುಗಳ ಅವ್ಯವಸ್ಥೆ ಯಲ್ಲಿ ಅನುಷ್ಠಾನರಾಹಿತ್ಯ ರುದ್ರತಾಂಡವ ನಡೆಸುತ್ತಿದೆ, ಬೂಟಾಟಿಕೆಯ ಆಟಾಟೋಪಗಳು ಮೆರೆದಾಡುತ್ತಿವೆ. ಇದರ ಸೈತಿನ ಬಗೆಗೆ ವಚನಕಾರ ಕವಿ ತನ್ನ ಚಿಂತನೆ ಹರಿಸಿದ್ದಾನೆ ಈ ಚುಟುಕು ರೂಪಿ ವಚನದಲ್ಲಿ:

*ಮುಟ್ಟು ಮೈಥುನಗಳಿಂದ ಹುಟ್ಟಿದ ಜೀವಕ್ಕೆ*
*ಮೈಲಿಗೆ ಎಲ್ಲಿಯದೊ ?*
*ಪ್ರಾಣಪಕ್ಷಿ ಹಾರಿಹೋದ ಬಳಿಕ*
*ಸೂತಕವೆಲ್ಲಿಯದೊ ?*
*ದಯವೇ ಧರ್ಮದ ಮೂಲವೆಂದ ಬಳಿಕ*
*ಜೇಹಾದ ಎಲ್ಲಿಯದೊ ?*
*ಎಲ್ಲರೂ ತನ್ನವರೆಂದ ಬಳಿಕ*
*ದ್ವೇಷವೆಲ್ಲಿಯದೊ ?*
*ವಿಶ್ವಮಾನವನಿಗೆ*
*ದೇಶಭಾಷೆಯ ಸೀಮೆ ಎಲ್ಲಿಯದೊ ?*
*ಬಸವನೀಲಾಂಬಿಕಾತನಯನಿಗೆ*
*ನಾನು - ನೀನೆಂಬ ಭೇದವೆಲ್ಲಿಯದೊ ?*
–(ವಚ : ೨)

– ಸರ್ವಸಮತೋಲನದ ಧರ್ಮ ಧ್ವಜವನ್ನು ಎತ್ತಿಹಿಡಿದಿರುವ ಈ ವಚನಕ್ಕೆ ಎತ್ತಿರುವ ಎಲ್ಲ ಪ್ರಶ್ನೆಗಳಿಗೂ ಪರಿಹಾರವನ್ನು ಸೂಚಿಸುವ ಸಾಮರ್ಥ್ಯ ಇದೆ. ದ್ವಂದ್ವದಲ್ಲಿ ಅದ್ವಂದ್ವ, ಸಿದ್ಧಿಯ ಸ್ವಚ್ಛತೆ, ಚಿತ್ರ ಚೈತನ್ಯದ ಚೇತೋಹಾರಿ ಧ್ವನಿತ ಸೌಂದರ್ಯದ ಸ್ವರ್ಗವೂ ಇಲ್ಲಿದೆ. ನಾನು ಬೇರೆ ನೀನು ಬೇರೆ ಎಂಬ ಭೇದಭಾವ ಸಲ್ಲ, ನಾವಿಬ್ಬರೂ ಒಂದೇ ಲೋಹದಿಂದಾದ ನಾಣ್ಯಗಳು. ಪರಮಾತ್ಮನ ಚಿದಂಶವೇ ನಿಮ್ಮಿಬ್ಬರ ಹೃದಯ ಮಂದಿರಗಳಲ್ಲಿ ಅಡಗಿದೆ ಆತ್ಮನ ರೂಪದಲ್ಲಿ ಈ ಅಭೇದ ಸಾಧಿತವಾದರೆ ಸೌಹಾರ್ದಕ್ಕೆ ಕೊರತೆಯಿರುವುದಿಲ್ಲ. ಈ ಅದ್ವೈತ ದರ್ಶನ ಈ ಕವಿಯ ಮನೋಧರ್ಮವಾಗಿದೆ.

ಮುಂದುವರಿದು ಈತ –

*ಕಾಲ್ಗಳೆರಡು ನಡಿಗೆ ಒಂದೆ*
*ಕೈಗಳೆರಡು ದುಡಿಮೆ ಒಂದೆ*
*ಕಂಗಳೆರಡು ನೋಟ ಒಂದೆ*
*ಕಿವಿಗಳೆರಡು ಶ್ರವಣ ಒಂದೆ*
*ಒಂದು ಮೇಲು ಇನ್ನೊಂದು ಕೀಳು ಎನ್ನಲಾದೀತೆ ?*
*ಜೀವಗಳಲಿ ಭೇದ ಭಾವನೆ ಮಾಡಲಾದೀತೆ ?*
*ನಿನ್ನಲ್ಲಿ ನಾನಿರಲು ನನ್ನಲ್ಲಿ ನೀನಿರಲು*
*ದ್ವೈತವನ್ನು ಕಲ್ಪಿಸಲಾದೀತೆ ?* –(ವಚ : ೧೦೦)

– ಅಭೇದ ಕಲ್ಪನೆಯ ಈ ಅದ್ವೈತ ತತ್ತ್ವದಲ್ಲಿ ಆತ್ಮ ಸೌಂದರ್ಯವೂ ಇದೆ, ಕಾವ್ಯ ಸೌಂದರ್ಯವೂ ಇದೆ. ಅಧ್ಯಾತ್ಮ ಶ್ರೀಮಂತಿಕೆಯ ಪರತತ್ವವಿದ್ದು ಆಸ್ತಿಕ ಮಹಾಶಯ ಮೈಮರೆಸುವ, ಅಮೃತೋಪಮ ಆನಂದ ಪ್ರಾಪ್ತಿಸುವ, ಬ್ರಹ್ಮಾನಂದ ಸ್ತರಕ್ಕೆ ಕೊಂಡೊಯ್ಯುವ ವಿಶೇಷಾನುಭೂತಿ ಇಲ್ಲಿದೆ.

ಒಟ್ಟಿನಲ್ಲಿ ಈ ಎರಡೂ ವಚನಗಳಲ್ಲಿ ಸರ್ವ ಸಮಾನತೆಯ ಸ್ವರಮೇಳ ಮಧುರ ಕಂಠಶ್ರೀಯಾಗಿ ಧ್ವನಿಸಿದೆ.

ಕಾವ್ಯ ಪ್ರಪಂಚದಲ್ಲಿ ಸಾಮಾನ್ಯವಾಗಿ, ಭಾವಗೀತ, ಭಕ್ತಿಗೀತೆಗಳು, ಭಾವನಾತ್ಮಕವಾದವುಗಳು. ಮತ್ತೆ ಕೆಲವು ವರ್ಣನಾತ್ಮಕಗಳು, ವಿಡಂಬನಾತ್ಮಕಗಳು ಇತ್ಯಾದಿ ಇತ್ಯಾದಿ. ಹಲವು ಆತ್ಮಪರವಾದ ಅಧ್ಯಾತ್ಮಪರ ಅಪರೋಕ್ಷಾನುಭೂತಿ ರೂಪೀ ಆವಿರ್ಭಾವ ದ್ಯೋತಕಗಳು ಶಿವ-ಜೀವರ ಐಕ್ಯಾನುಸಂಧಾನ ಸ್ವರೂಪಿ ಅಭಿವ್ಯಕ್ತಿಗಳು. ಇಂತಹ ವಚನ ಸಂದರ್ಭದಲ್ಲಿ ಈ ವಚನ ಕವಿ ಪ್ರತಿ ಹೆಜ್ಜೆಯಲ್ಲೂ ಓದುಗನನ್ನು ಚಿಂತನೆಗೆ ಹಚ್ಚುತ್ತಾನೆ; ವಚನದ ಆಂತರ್ಯ ದೆಡೆಗೆ ಸೆಳೆದೊಯ್ಯುತ್ತಾನೆ. ಈ ಗುಣ-ಗೌರವ ಅವನ 'ಸಂಸ್ಕೃತಿ', 'ಸ್ನೇಹ', 'ಲೇಸು', 'ಸಂತನ ದರ್ಶನ', 'ಆತ್ಮಬಲ', 'ವೈದ್ಯನ ಗಂಡ', 'ಸಂಸಾರಿ ಜೀವನ ಅಧಿಕ', 'ಸತ್ಯ', 'ಧರ್ಮ', 'ಋಣ', 'ವಿಶ್ವ ಪ್ರೇಮ' – ಇತ್ಯಾದಿ ವಚನಗಳು ಸಾಕ್ಷೀಕರಿಸಿವೆ.

ಬದುಕಿನಲ್ಲಿ 'ಸ್ನೇಹ' ಎಂಬುದು ಒಂದು ಮೌಲಿಕ ವಸ್ತು. ಅದು ಸತ್ಸಂಗದಿಂದ ಮಾತ್ರ ಲಭ್ಯ. ಅದನ್ನು ಕವಿ ತನ್ನ ಹಲವು ನಿದರ್ಶನಗಳೊಡನೆ ಪ್ರದರ್ಶಿಸಿದ್ದಾನೆ. ಕೇಳಿ :

*ಹಲ್ಲೆಲ್ಲಾ ಹಾಳಾಗದಂತೆ ತೆಗೆಯಬೇಕು ಹುಳುಕು ಹಲ್ಲು*
*ಹಣ್ಣೆಲ್ಲಾ ಹಾಳಾಗದಂತೆ ತೆಗೆಯಬೇಕು ಕೊಳಕು ಹಣ್ಣು*
*ಮಣ್ಣೆಲ್ಲಾ ಹಾಳಾಗದಂತೆ ತೆಗೆಯಬೇಕು ಸವಳು ಮಣ್ಣು*
*ಗೆಳೆಯರೆಲ್ಲ ಹಾಳಾಗದಂತೆ ತೆಗೆಯಬೇಕು*
*ಧೂರ್ತನೆಂಬ ಹುಣ್ಣು*
*ಸತ್ಸಂಗದಿಂದಲೇ ಸನ್ಮಾರ್ಗ, ಸತ್ಸಂಗದಿಂದಲೇ*
*ಸದ್ಗತಿಯೆಂದ*
*ಬಸವನೀಲಾಂಬಿಕಾತನಯ* –(ವಚ : ೧೬)

– ಈ ವಚನ ವ್ಯಾಖ್ಯಾನ, ವಿವರಣೆ ಬಯಸುವುದಿಲ್ಲ ಅಲ್ಲವೆ ?

ಇಂದಿನ ಜನಸಂಖ್ಯಾ ಸ್ಫೋಟದಿಂದ ಪ್ರಕೃತಿ ನಾಶ, ಪಶುಪಕ್ಷಿಗಳ ವಿನಾಶ, ಆಹಾರವಿಲ್ಲದೆ ಹಾಹಾಕಾರ, ಒಟ್ಟಿನಲ್ಲಿ ರಾಷ್ಟ್ರ ಪ್ರಗತಿಗೆ ಮಾರಕ. ಇದಕ್ಕೆಲ್ಲಾ ಸಂಯಮ ವಿಲ್ಲದ ಮನುಷ್ಯಪ್ರಾಣಿಯೇ ಕಾರಣ – ಎಂದು ಆಕ್ಷೇಪಿಸಿದ್ದಾನೆ ವಚನ ಕವಿ 'ತನ್ನ' ಸದ್ಬುದ್ಧಿ'
–(ವಚ : ೩) ಎಂಬ ವಚನದಲ್ಲಿ.

ಇಂದು ಧಾರ್ಮಿಕ, ಸಾಮಾಜಿಕ, ಆರ್ಥಿಕ, ರಾಜಕೀಯ ಕ್ಷೇತ್ರಗಳಲ್ಲಿ ನ್ಯಾಯಾಲಯದಲ್ಲೂ ಕೂಡ ಅತೃಪ್ತಿ, ಅಶಾಂತಿ ರುದ್ರತಾಂಡವವಾಡುತ್ತಿದೆ. ಭ್ರಷ್ಟಾಚಾರಕ್ಕೆ ಕೊನೆ ಮೊದಲಿಲ್ಲ. ರಾಕ್ಷಸೀ ಮನೋಭಾವ ವಿಷವಾಯುವಾಗಿ ಎಲ್ಲೆಡೆಯೂ ವ್ಯಾಪಿಸಿಕೊಂಡು ಮಾನವತೆಯನ್ನು ಹೇಳ ಹೆಸರಿಲ್ಲದಂತೆ ಮಾಡಿದೆ. ಈ ಕುರಿತು ಕವಿ ವಚನಕಾರ ಸರಳವಾದ ಮಾತುಗಳಲ್ಲಿ ಒಳ ತಿರುಳು ತೆಗೆದು ತೋರಿಸಿದ್ದಾನೆ. ಕೇಳಿ :

*ರಕ್ಷಕರೇ ಭಕ್ಷಕರಾಗುತ್ತಿರುವರಯ್ಯಾ*
*ಶೋಕಿಲಾಲರೆ ಸ್ವಾಮಿಗಳಾಗುತ್ತಿರುವರಯ್ಯಾ*
*ಭ್ರಷ್ಟರೇ ರಾಜಕೀಯ ಸೇರುತ್ತಿರುವರಯ್ಯಾ*
*ದೇಶದ್ರೋಹಿಗಳು ಸೈನ್ಯ ಸೇರುತ್ತಿರುವರಯ್ಯಾ*
*ತಾಯಿಯೇ ಕೊಲೆಪಾತಕಿಯಾಗುತ್ತಿರುವಳಯ್ಯಾ*
*ಮಾನವೀಯತೆ ಮಾಯವಾಗುತ್ತಿದೆಯಯ್ಯಾ*
*ಇಂತಹ ಪರಿಸ್ಥಿತಿಯಲಿ,*
*ನರ ಹರನಾಗಬೇಕಲ್ಲದೆ*
*ಯಾರಿಗೆ ದೂರಿ ಏನು ಫಲ ಎಂದ*
*ಬಸವನೀಲಾಂಬಿಕಾತನಯ!* –(ವಚ : ೩೦)

– ಇಂದು ನಮ್ಮ ರಾಷ್ಟ್ರದಲ್ಲಿ ಯಾವ ಕ್ಷೇತ್ರವೂ ಈ ಅವಾಂತರಗಳಿಂದ ಮುಕ್ತವಾಗಿಲ್ಲ. ಎಲ್ಲಿ ನೋಡಿದರೂ ದೇಶ ನುಂಗುವವರು, ರಾಷ್ಟ್ರ ಕಬಳಿಸು ವವರೇ ಕಾಣಿಸಿಕೊಳ್ಳುತ್ತಿದ್ದಾರೆ. ಈ ದೌಷ್ಟ್ಯಗಳ ಸರಮಾಲೆಯನ್ನು ಕಂಡು ಈ ಕವಿಯ ಕರುಳಿಗೆ ಉರಿಕೊಳ್ಳಿ ಇಟ್ಟಂತಾಗಿದೆ. ಆದರೆ ಅದನ್ನು ತಡೆಗಟ್ಟುವ ಸಾಮರ್ಥ್ಯ ಅವನಿಗಿಲ್ಲ, ಆ ಕಾರಣ ತನಗೆ ತಾನೇ ಹೇಳಿಕೊಳ್ಳುತ್ತಾನೆ. 'ಮಾನವೀಯತೆ ಮಾಯವಾಗುತ್ತಿದೆ' ಎಂದು. ಆದರೆ ನರ ಹರನಾಗುವುದು ಅಂತಿರಲಿ, ನಿಜದ ಮಾನವನಾದರೆ ಸಾಕು ಎಂಬ ಹಂಬಲವೂ ಅವನಲ್ಲಿ ಹಣ್ಣಾಗಿಲ್ಲ, ಆಗುತ್ತದೆಂಬ ಭರವಸೆಯ ಭಾಸ್ಕರನ ಸುಳಿವೂ ಇಲ್ಲ! ಬಂದದ್ದನ್ನು ಅನುಭವಿಸುವ ಅನಿವಾರ್ಯತೆಯಿಂದಾಗಿ ಯಾರ ಮುಂದೆ ದೂರು ಹೇಳಿಕೊಂಡರೂ, ಅದು ವ್ಯರ್ಥ ಶ್ರಮ ಎಂದಂದುಕೊಂಡು, ತನ್ನ ಅಳಲನ್ನು

ತಾನೇ ನುಂಗಿಕೊಂಡು ಎಲ್ಲವನ್ನೂ ವೀಕ್ಷಿಸುವ ಮೂಕವೀಕ್ಷಕನಾಗಿದ್ದಾನೆ. 'ಮತ್ತೊಮ್ಮೆ ಸಂಕಟ ತಡೆಯಲಾರದೆ ದೇಶೋದ್ಧಾರ ಆಗುವುದೆಂದು ?' (ವಚ : ೧೦) ಎಂದು ತನಗೆ ತಾನೇ ಗೊಣಗುತ್ತಾನೆ.

ಇದಕ್ಕೆ ಪೂರಕ ಪೋಷಕ ಆಗುವ ಮತ್ತೊಂದು ವಚನ ಹೀಗಿದೆ :

ನಮ್ಮ ಯುವಕ ಎತ್ತ ಸಾಗಿದ್ದಾನೆ ?
ಜಾತಿವಾದಿಗಳ ಜಾತ್ರೆಯಲ್ಲಿ ಕಳೆದು ಹೋಗಿದ್ದಾನೆ.
ರಾಜಕೀಯ ಚದುರಂಗದಾಟದಲ್ಲಿ ದಾಳವಾಗಿದ್ದಾನೆ.
ಮೂಲಭೂತವಾದಿಗಳ ಮೌಢ್ಯದಲ್ಲಿ ಸಿಕ್ಕು ನರಳುತ್ತಿದ್ದಾನೆ.
ಕೋಮುವಾದಿಗಳ ಕ್ರೌರ್ಯದಲ್ಲಿ ಸಿಲುಕಿ ನಲುಗುತ್ತಿದ್ದಾನೆ.
ಜಾಗತೀಕರಣದ ಸಂಸ್ಕೃತಿಯಲ್ಲಿ ಅಪಮೌಲ್ಯ ಹೊಂದುತ್ತಿದ್ದಾನೆ !
– ಈ ಎಲ್ಲರ ಕಪಿಮುಷ್ಠಿಯಿಂದ ನಮ್ಮ ಯುವಕನನ್ನು ಪಾರುಮಾಡುವವರಾರು ?
ಯುವಶಕ್ತಿಯನ್ನು ಅಣುಶಕ್ತಿಯನ್ನಾಗಿಸಿ
ರಾಷ್ಟ್ರವಾಹಿನಿಯಲ್ಲಿ ಪ್ರವಹಿಸುವಂತೆ ಮಾಡುವವರು
ಯಾರೆಂದ ಬಸವನೀಲಾಂಬಿಕಾತನಯ – (ವಚ : ೮)

– ಇಲ್ಲಿ ಭಾವಭರಿತ, ಅರ್ಥಪೂರ್ಣ ಕಾವ್ಯಪ್ರತಿಮೆಗಳ ಸುಗ್ಗಿ ಸೂರೆ ! ಆದರೆ ಎಲ್ಲವೂ ದುರಂತ ಛಾಯಾ ಆಚ್ಛಾದಿತಗಳು. ಪರಿಣಾಮ ದೃಷ್ಟಿಯಿಂದ ಮಾತ್ರ ಔಚಿತ್ಯದ್ಯೋತಕಗಳು.

ಇಂದು ನಮ್ಮ ರಾಷ್ಟ್ರದ ಯುವಶಕ್ತಿ ಸಿಕ್ಕಾಬಟ್ಟೆ ಪೋಲಾಗುತ್ತಿದೆ. ಅದು ತನ್ನ ಮಹತ್ತರವಾದ ಜವಾಬ್ದಾರಿಯನ್ನೂ ಮರೆತು ಕೊಚ್ಚೆಯಾಗುತ್ತಿದೆ. ಮೋಡದಿಂದ ಮಳೆಯಾಗಿ ಭೂಮಿಯ ಮೇಲೆ ಬಿದ್ದು ಹರಿಯುವ ನೀರು ಒಂದೇ. ಆದರ ಒಂದು ಹನಿ ಒಂದು ಗಿಡದ ಮೇಲೆ ಬಿದ್ದರೆ ಕರ್ಪೂರದ ಹರಳಾಗುತ್ತೆ ಕಪ್ಪೆಚಿಪ್ಪಿನೊಳಗೆ ಸೇರಿಕೊಂಡರೆ ಮುತ್ತಾಗುತ್ತೆ, ಅದೇ ನೀರು ಜೋಗದ ಜನರೇಟಿಂಗ್ ಸ್ಟೇಷನ್‌ಗೆ ಪೆನ್‌ಸ್ಟಾಕ್ ಮುಖಾಂತರ ಹಾಯ್ದು, ತುಂಬಾ ತಳಭಾಗದಲ್ಲಿರುವ ಶರಾವತಿ ನದಿ ಪಾತ್ರದಲ್ಲಿರುವ ಬೃಹದಾಕಾರದ ಟರ್ಬೈನ್ಸ್ ತಿರುಗಿಸಿದರೆ ಜ್ಯೋತಿ (ವಿದ್ಯುಚ್ಛಕ್ತಿ) ಉತ್ಪಾದಿಸುತ್ತೆ, ಅದೇ ನೀರು ಗಂಗಾ, ತುಂಗಾ, ಕೃಷ್ಣಾ, ಕಾವೇರಿ ಮೊದಲಾದ ನದಿಗಳ ಪವಿತ್ರ ಪಾತ್ರದಲ್ಲಿ ಹರಿದರೆ ತೀರ್ಥವಾಗುತ್ತೆ, ಅದೇ ನೀರು ಅಥಣಿಯ ಚರಂಡಿಯಲ್ಲಿ ಹರಿದರೆ ಕೊಚ್ಚೆಯೂ ಆಗುತ್ತೆ. ಎಲ್ಲೆಡೆಯೂ ಹರಿದ ನೀರು ಒಂದೇ. ಆದರೆ ಅದು ಹರಿಯುವ ಪಾತ್ರದ ಮೇಲೆ ಅದರ ಯೋಗ್ಯತೆ ನಿರ್ಧಾರಿತವಾಗುತ್ತದೆ. ಅದರಂತೆ ಪ್ರಕೃತಿ ಕರುಣಿಸಿ ಕೊಟ್ಟಿರುವ ಮಾನವನ ಧೀಶಕ್ತಿ, ಶ್ರೀಶಕ್ತಿ, ಕ್ರತುಶಕ್ತಿ, ಕ್ರಿಯಾಶಕ್ತಿ ಸತ್ಪಾತ್ರದಲ್ಲಿ ಪ್ರವಹಿಸಿ ಕರ್ಪೂರವಾಗಬೇಕು, ಮುತ್ತಾಗಬೇಕು, ಜ್ಯೋತಿಯಾಗಬೇಕು, ತೀರ್ಥವಾಗಬೇಕು; ಕೊಚ್ಚೆ ಆಗಬಾರದು. ಆದರೆ ನಮ್ಮ ರಾಷ್ಟ್ರದ ಯುವಶಕ್ತಿ ಪಾಶ್ಚಾತ್ಯ ನಾಗರಿಕತೆಯೆಂಬ ಮೋಹಿನಿಯ ಮೋಹಜಾಲಕ್ಕೆ ಸೆರೆಸಿಕ್ಕು ತನ್ನ ಪರಮ ಪಾವನ ಶ್ರೀಶಕ್ತಿಯನ್ನು ಕೊಚ್ಚೆಯನ್ನಾಗಿಸಿಕೊಂಡಿದೆ. ಇದನ್ನು ಸನ್ಮಾರ್ಗಗಾಮಿಯಾಗಿಸುವ ವ್ಯವಸ್ಥಾ ಕಾರ್ಯ ಆಗಬೇಕಾಗಿದೆ. ಆದರೆ ಆಗಿಲ್ಲ; ಆಗುವ ಸೂಚನೆಯ ಸುಳಿವೂ ಇಂದು ಕಾಣುತ್ತಿಲ್ಲ, ಇರಲಿ.

ಇಂತಹ ಯುವಶಕ್ತಿಯ ಮಹತ್ವವನ್ನರಿತಿದ್ದ ಗ್ರೀಸಿನ ಜಗದ್ವಿಖ್ಯಾತ ರಾಜಕೀಯ ಮುತ್ಸದ್ದಿ, ಮಹಾಮೇಧಾವಿ ಪ್ಲೇಟೋ ಒಂದೆಡೆ ಸ್ಪಷ್ಟವಾಗಿ ಹೀಗೆ ಘೋಷಿಸುತ್ತಾನೆ. ಕೇಳಿ :

''ಯಾವುದೇ ಒಂದು ದೇಶ ಅಥವಾ ರಾಷ್ಟ್ರವಿರಲಿ ಅದನ್ನು ನಾಶಪಡಿಸುವ ಇಚ್ಛೆ ನಿನಗಿದ್ದರೆ, ಮೊದಲು ಆ ದೇಶದ ಅಥವಾ ರಾಷ್ಟ್ರದ ಯುವಜನತೆಯನ್ನು ಹಾಳುಮಾಡು. ಅವರನ್ನು ದಾರಿತಪ್ಪಿಸಿ ವಿಷಯಲಂಪಟರನ್ನಾಗಿ ಮಾಡು. ಯುವಕರು

## ಪ್ರಭುವೇ ಹಬ್ಬಗಳನ್ನೇಕೆ ಮಾಡಿದೆ

ನನ್ನ ಮನೆಯ ನೆತ್ತಿಯ ಮೇಲೆ
ಸೂರ್ಯ ಇನ್ನೂ ಹುಟ್ಟಿರಲಿಲ್ಲ,
ಒಲೆಗೆ ಬೆಂಕಿಯ ಕಾವು ಸಿಕ್ಕಿರಲಿಲ್ಲ
ಚಳಿಯಲ್ಲಿ ನಡುಗುತ್ತ ಮಲಗಿದ್ದ
ಹಸಿವಿನಿಂದ ಚಡಪಡಿಸುತ್ತಿರುವ
ಮಕ್ಕಳಿಗೆ ಹೇಗೆ ಹೇಳಲಿ ನಾನು
ನಮ್ಮ ರಂಜಾನಿನ ಉಪವಾಸ
ಇನ್ನೂ ಮುಗಿದಿಲ್ಲ ಎಂದು.
ಹಾಳಾದ ಚಳಿಗೆ ಮತ್ತಷ್ಟು ಹಸಿವು
ಅಳಬೇಡ ಕಂದ ಇಂದು ಪವಿತ್ರಹಬ್ಬ
ರಂಜಾನಿನ ಪುಣ್ಯದಿನ ನಮಾಜಿಗೆ ಹೋಗು
ಅಲ್ಲಾಹ್ ಬಡವರ ಕೈ ಬಿಡಲಾರ.

ಪುಟ್ಟ ಮಕ್ಕಳು ಪ್ರಾರ್ಥನೆ ಮಾಡಿದರೆ
ಕರುಣಾಮಯನಿಗೆ ಬೇಗ ಮುಟ್ಟುತ್ತದೆ
ಅಳಬಾರದು ಬೇಟಾ ಇಂದು ಪುಣ್ಯದಿನ
ಎದ್ದು ನಮಾಜಿಗೆ ಹೋಗು ಮಸೀದಿಗೆ
ಅಮ್ಮಿ ಹೇಳುವ ಮಾತುಗಳು
ಕಿವಿಗಪ್ಪಳಿಸಿ ಹಿಂತಿರುಗಿ ಹೋದವು.
ದೇವರು ನಮಗೆ ಬಡವರಾಗಿ
ಹುಟ್ಟಿಸಿದ ಸಿಟ್ಟಿಗೆ ಮುಷ್ಟಿ ಬಿಗಿಯಾದವು.

ತಿಂಗಳುಪವಾಸದ ನಂತರ ಪವಿತ್ರ ಹಬ್ಬ
ಪಕ್ಕದ ಶ್ರೀಮಂತರ ಮನೆಯಿಂದ
ಕರಿದ ಮೀನು, ಚಿಕನ್ನು, ಮಟನ್ನು
ಭಕ್ಷ್ಯಾನ್ನಗಳ ಘಮಘಮ ವಾಸನೆಗೆ



ಮಕ್ಕಳ ಹಸಿವಿನ ಕಿಚ್ಚು ಹೆಚ್ಚಾಗದಿರಲು ರಬ್ಬೆ.
ಗುಡಿಸಲ ಬಾಗಿಲು ಭದ್ರ ಮುಚ್ಚಿದಳು
ದೇವರಲ್ಲಿ ಪರಿಪರಿಯಾಗಿ ಪ್ರಾರ್ಥಿಸಿದಳು.
ನನ್ನ ಮಕ್ಕಳು ನೊಂದಾರು ಪ್ರಭುವೇ !

ಪಕ್ಕದ ಮಕ್ಕಳ ಹೊಸ ಬಟ್ಟೆಗಳು
ಅವರ ಕಣ್ಣಿಗೆ ಬೀಳದಿರಲಿ ರಬ್ಬೇ !

ಯಾಕಾದರೂ ನೀನು ಹಬ್ಬಗಳ ಮಾಡಿದೆ ?
ಮಾಡಿದರೂ ಮಾಡಿದೆ ಬಿಡು
ನಮ್ಮನ್ನು ಬಡವರಾಗೇಕೆ ಹುಟ್ಟಿಸಿದೆ ?
ಸರ್ವಶಕ್ತ ನೀನಂತೆ, ಒಂದು ಸಲ ನೀನು
ಲೋಕದ ಬಡತನದ ಬೇರುಸಹಿತ
ಬುಡದಿಂದ ಕಿತ್ತೆಸೆಯಬಾರದೇ ?
'ನೆರೆಮನೆಯವರು ಹಸಿದಿರುವಾಗ
ಬಿರಿಯುವಂತೆ ತಿನ್ನುವುದು ಪಾಪ'
ಎಂದು ಪೈಗಂಬರರು ಹೇಳುತ್ತಿದ್ದರಲ್ಲವೇ ?

ಮನುಜ ಮನುಜರ ನಡುವಿನ
ಅಸಮತೆಯ ಗೋಡೆ ಕೆಡವಬಾರದೇ ?
ನೋವಿನ ಉಸಿರು ಭಾರವಾದಾಗ
ಬದುಕು ಅಸಹನೀಯವಾದಾಗ
ಆ ಸೃಷ್ಟಿಕರ್ತನಿಗೇ ಕೇಳುತ್ತೇನೆ
ಜಗದಲಿ ಹಬ್ಬಗಳನ್ನೇಕೆ ಮಾಡಿದೆ ?
ನೀನು ಹೇಳದಿದ್ದರೆ ನಿನ್ನ ದೇವಲೋಕದಲಿ
ನ್ಯಾಯಕ್ಕಾಗಿ ಜಿಹಾದ್ ಹೂಡುತ್ತೇನೆ
ನಿನ್ನ ವಿರುದ್ಧವೇ ಯುದ್ಧ ಸಾರುತ್ತೇನೆ.

**ಡಾ|| ಕೆ. ಷರೀಫಾ**
ನಂ. ೪, ೩ನೇ ಕ್ರಾಸ್, ರಹಮತ್‌ನಗರ
ಆರ್. ಟಿ. ನಗರ ಪೋಸ್ಟ್
ಬೆಂಗಳೂರು - ೫೬೦ ೦೩೨

ದಾರಿತಪ್ಪಿ ಹಾಳಾದರೆ ಆ ದೇಶ ಸಂಪೂರ್ಣವಾಗಿ ಒಡೆದ ಹಡಗಿನಂತೆ ತನಗೆ ತಾನೇ ಮುಳುಗಿ ನಾಮಾವಶೇಷವಾಗುತ್ತದೆ''.

ಇಂದು ನಮ್ಮ ರಾಷ್ಟ್ರದ ಯುವಶಕ್ತಿ ತುಂಬಾ ಅಧೋಗತಿಗಿಳಿದಿದೆ; ಇಳಿಯುತ್ತಲೂ ಇದೆ. ಇಂತಹ ಸಂಕಷ್ಟ ಸಂದರ್ಭದಲ್ಲಿ ನಮ್ಮ 'ಬಸವನೀಲಾಂಬಿಕಾ ತನಯ'ನ ಅಮೃತೋಪಮ ನುಡಿಗಡಣ ಶ್ರೇಷ್ಠ ಗೀತೋಪದೇಶ ಪ್ರಾಯವಾಗಿದೆ. ಇದರ ಅನುಷ್ಠಾನ ಸರಕಾರದಿಂದ ಆಗುತ್ತದೆ ಎಂಬುದರಲ್ಲಿ ನನಗೆ ನಂಬಿಕೆಯಿಲ್ಲ. ರಾಜಕಾರಣಿಗಳಲ್ಲಿ ೯೯.೯ ಮಂದಿ ದರೋಡೆಕೋರರು. ಸಮಾಜಸುಧಾರಕರು ಆ ಮಹಾಮಣಿಹವನ್ನು ಕೈಗೆತ್ತಿಕೊಳ್ಳಬೇಕು, ಸುತ್ತ್ಯರೂಪದಲ್ಲಿ ಕಾರ್ಯೋನ್ಮುಖರಾಗಬೇಕು.

'ವಚನಾಮೃತ'ದ ವಚನಕಾರ ಕೇವಲ ತತ್ತ್ವಬೋಧನೆಗಾಗಿಯೇ ತನ್ನೆಲ್ಲ ಪ್ರತಿಭೆಯನ್ನೂ ಮೀಸಲಿಟ್ಟಿಲ್ಲ, ವಾಸ್ತವತೆಯ ವೈಶಾಲ್ಯದೆಡೆಗೂ ಅದನ್ನು ಹರಿಯಬಿಟ್ಟಿದ್ದಾನೆ. ಹನ್ನೆರಡನೆಯ ಶತಮಾನದ ನೂರಾರು ಜನ ವಚನಕಾರ/ಕಾರ್ತಿಯರಂತೆ ಈತ ನುಡಿದಂತೆ ನಡೆದವನು. ಅವರಂತೆಯ ಲೌಕಿಕ ಮತ್ತು ಪಾರಮಾರ್ಥಗಳೆರಡನ್ನೂ ಏಕತ್ರ ಅಂದರೆ ಇಹದಲ್ಲಿ ಸಾಧಿಸಿ ಸಿದ್ದಿಸಿಕೊಂಡವನು. ಇಹವನ್ನೆ ಪರವನ್ನಾಗಿ ರೂಪಿಸಿದವನು. ಒಟ್ಟಿನಲ್ಲಿ ಅವನು ಇಹಕ್ಕೆ, ಇಹದ ಒಳಿತಿಗಾಗಿ ಬದುಕಿದವನು, ಬರೆದವನು. ಅವನ ಈ ವಾಸ್ತವತೆಯ ವೈಭವೀಕರಣಕ್ಕೆ 'ಮಗ' ಶೀರ್ಷಿಕೆಯು ಒಂದು ಆದರ್ಶಪ್ರಾಯವಾದದ್ದು ನೋಡಿ :

*ಆಳತೆಗೆ ಬೇಕು ಕೊಳಗ, ಮದುವೆಗೆ ಬೇಕು ಬಳಗ,*
*ಪಕ್ಷಕ್ಕೆ ಬೇಕು ಬೆಂಬಲಿಗ*
*ಮನೆತನ ಬೆಳಗಲು ಬೇಕು ಮಗ*
*ದೇಶ ಆಳಲು ಬೇಕು ಜಗಮೆಚ್ಚಿದ ಮಗ*
*ಅನ್ನ ಬೆಳೆಯಲು ಬೇಕು ಮಣ್ಣಿನ ಮಗ !*

– ಹೀಗೆಂದವನು ಬಸವ ನೀಲಾಂಬಿಕಾತನಯ (ವಚ : ೮೮)

ನನ್ನ ಪೂಜ್ಯ ಗುರುಗಳಾಗಿದ್ದ ಮಹಾಕವಿ 'ಕುವೆಂಪು' ''ನೇಗಿಲ ಯೋಗಿ'' ಎಂಬ ಕವನ ರಚಿಸಿ, ಲೋಕಕ್ಕೆ ಅನ್ನವೀವ ಅನ್ನದಾತನನ್ನು ಪೂಜ್ಯಭಾವನೆಯಿಂದ ಕಂಡು ಹೊಗಳಿದ್ದಾರೆ. ಅದೇ ನಿಷ್ಠಾಭಿವ್ಯಕ್ತಿ 'ವಚನಾಮೃತ'ದ ವಚನಕಾರರಲ್ಲೂ ಇದೆ.

ಇಲ್ಲಿ ವಚನಕಾರ ಕೇವಲ ಭಾವಲೋಕ ವಿಹಾರಿಯಾಗದೆ ವಾಸ್ತವ ಪ್ರಪಂಚದ ನೆಲಗಟ್ಟಿನ ಮೇಲೆ ನಿಂತು, ಅನೇಕ ಅರ್ಥಪೂರ್ಣ ದೃಷ್ಟಾಂತಗಳ ಮೂಲಕ ಬಾಳಿನ ಸಹಜಗೀತದ ರಾಗ ರಾಗಿಣಿಯರ ಸ್ವರಮೇಳದಲ್ಲಿ ವಾಸ್ತವತೆಯ ಶೃತಿ ಸಂಯೋಜಿಸುವ ಶ್ರೀಮಂತಿಕೆಗೆ ಕಾರಣರಾಗಿದ್ದಾರೆ. 'ಅನ್ನ ಬೆಳೆಯಲು ಬೇಕು ಮಣ್ಣಿನ ಮಗ' ಎಂಬ ವಾಕ್ಯದಲ್ಲಿ ಲೋಕದ ಅನ್ನದಾತನಿಗೆ ತನ್ನ ಹಾರ್ದಿಕ ನಮನ ಸಲ್ಲಿಸಿ ಧನ್ಯನಾಗಿದ್ದಾನೆ.

ಕವಿಯ ಹಾಗೂ ಕನ್ನಡ ಆರುಕೋಟಿ ಮನಸ್ಸುಗಳ ಕ್ಷಮೆಕೋರಿ ಒಂದೆರಡು ನುಡಿಗಳು.

೩

ಆತ್ಮೀಯರೆ,

ಇಂದು ಪ್ರತಿ ವ್ಯಕ್ತಿಯೂ ದೀಪವಾಗುತ್ತಿಲ್ಲ, ದ್ವೀಪವಾಗುತ್ತಿದ್ದಾನೆ. ಅಂದರೆ ಸ್ವಾರ್ಥ ಸಂಕೋಲೆಯಲ್ಲಿ ಸ್ಥಗಿತನಾಗಿದ್ದಾನೆ. ಸೌಹಾರ್ದದ ಸೂತ್ರವೇ ಹರಿದು ಮಾನವೀಯತೆಯ ಮಾಂಗಲ್ಯವೆ ಮಂಗಮಾಯವಾಗಿದೆ. ಅದು ನಮ್ಮ ರಾಜ್ಯದ, ರಾಷ್ಟ್ರದ ದುರಂತ. ಆದರೆ ಎಲ್ಲ ಕಲೆಗಳ ಕಲೆ ಜೀವನ ಕಲೆ. ಅದು ಹಸನಾಗಬೇಕು, ಸುಂದರವಾಗಬೇಕು, ಋಜುವಾಗಬೇಕು, ಸೈತಾಗಬೇಕು ಅಂತಾದಾಗಲೇ 'ಮನುಷ್ಯ' ಎಂಬ ಶಬ್ದಕ್ಕೆ ಜೀವನದ ವಿಶೇಷಾರ್ಥ ಪ್ರಾಪ್ತಿಸುವುದು. ಆ ಅರ್ಥ ಬಿಟ್ಟರೆ ಅವನ ಕುರಿತ ಯಾವ ಬಣ್ಣನೆಯೂ ವ್ಯರ್ಥ. ಹರಿದಾಸರು, 'ಮಾನವ ಜನ್ಮ ದೊಡ್ಡದು, ಅದ ಹಾನಿಮಾಡಿಕೊಳ್ಳಬೇಡಿ ಹುಚ್ಚಪ್ಪಗಳಿರಾ' ಎಂದು ಹೇಳಿದ್ದು ಮೌಲ್ಯಾಧಾರಿತ ಬಾಳಿನ ಮಹತ್ವದ ಕುರಿತು. ಅದು ಪ್ರತಿಯೊಬ್ಬ ವ್ಯಕ್ತಿಯ ನಡೆ ನುಡಿಯಲ್ಲಿ ಮಡಿಯಾಗಿ, ಹತ್ತೂ ಜನಕ್ಕೆ ಬದುಕು ಮಾಡುವುದು. ಇದು ಮನಶ್ಶಾಸ್ತ್ರಕ್ಕೆ ಸಂಬಂಧಿಸಿದ ಅಂಶ. ಮನಸ್ಸು ಮನಸ್ಸುಗಳಿಗೆ ವೇದ್ಯವಾಗುವ ಭಾವನಾ ಸಂವಹನ ಪ್ರಕ್ರಿಯೆಯಿಂದ ಮಾತ್ರ ಸಾಧ್ಯ. ಮಾನವ ಜೀವನದ ಒಳಿತನ್ನೇ ತಮ್ಮ ಹಸಿವು ಹಂಬಲವಾಗಿರಿಸಿಕೊಂಡಿದ್ದ ಅಪ್ರತಿಮ ಪ್ರತಿಭಾಶಾಲಿ ಆಧುನಿಕ ವಚನಕಾರ ಅಪ್ಪಾ ಸಾಹೇಬ ಅಲಿಬಾದಿಯವರು ತಮ್ಮ ವಚನ ವಾರಾಶಿಯ ಕೇಂದ್ರ ವಸ್ತುವನ್ನಾಗಿಸಿಕೊಂಡು, ಅದರ ಸುತ್ತ ಅನೇಕ ಮಧುರ ಮಂಜುಳ ವಚನ ರಚನೆಗಳನ್ನಿತ್ತು ಆರು ಕೋಟಿ ಕನ್ನಡಿಗರ ಅಭಿನಂದನೆಗೆ ಪಾತ್ರರಾಗಿದ್ದಾರೆ.

ಶ್ರೀಯುತರ ನೇಗಿಲು ಹಿಡಿಯುವ ಕೈ ಲೇಖಣಿ ಹಿಡಿದು ಸಾಹಿತ್ಯ ಕೃಷಿಗೈದಿದೆ. ಅದಕ್ಕೆ ಪ್ರಸ್ತುತ 'ವಚನಾಮೃತ'ವೇ ಸಾಕ್ಷಿ. ಶ್ರೀಯುತರ ಶೈಲಿ ಸರಳ, ಭಾವ ಬಂಧುರ, ಅಭಿವ್ಯಕ್ತಿ ಆನಂದ ರಸಸ್ರೋತಸ್ವಿನಿ ! ಭಾಷೆ ಲಲಿತ, ಆದರೆ ತುಂಬು ಪರಿಣಾಮಕಾರಿ. ಓದುಗನ ಚಿತ್ತದಲ್ಲಿ ಅಚ್ಚೊತ್ತಿದಂತೆ ತನ್ನ ಅಭಿವ್ಯಕ್ತಿಯನ್ನು ಯಶಸ್ವಿಯಾಗಿ ಸಾಧಿಸಿಕೊಳ್ಳುವ ಚೈತನ್ಯ ಅದಕ್ಕಿದೆ. ವಿಷಯ ನಿರೂಪಣೆಯಲ್ಲಿ ಅಚ್ಚುಕಟ್ಟು ಇದೆ, ನಿರೂಪಣೆಯಲ್ಲಿ ನಯವಿದೆ, ಭಾವದ ಕಾವು, ನಾದದ ಮೋದ ಸೇರಿ ಆದ ಭಾವಗೀತಾತ್ಮಕ ಚಾಲನೆ ಇವರ ರಚನೆಗಳಲ್ಲಿದೆ. ಭಾವದೊಡನೆ ಭಾಷೆಯನ್ನು ಬೆಸೆಯುವ ಚದುರು, ನಾಜೂಕು ಇವು ಇವರ ರಚನೆಗಳ ವೈಶಿಷ್ಟ್ಯ. ಈ ವಚನಕಾರರು ಸಾಧಕರಾಗಿದ್ದಾರೆ. ಬೋಧಕರಾಗಿದ್ದಾರೆ, ದಾರ್ಶನಿಕರಾಗಿದ್ದಾರೆ, ದ್ರಷ್ಟಾರರಾಗಿದ್ದಾರೆ, ವಿಚಾರಶೀಲ ವಿವೇಚನೆಯ ವೈಜ್ಞಾನಿಕ ದೃಷ್ಟಿ ದ್ರವ್ಯ ಉಳ್ಳವರೂ ಆಗಿದ್ದಾರೆ.

ಇಂತಹ ಕನ್ನಡನಾಡಿನ ಭಾಗ್ಯೋದಯದ ಕವಿಗೆ ನನ್ನ ಹಾರ್ದಿಕ ಅಭಿನಂದನೆಗಳನ್ನು ತಿಳಿಸುತ್ತಾ, ನಾಡಿನ ಎಲ್ಲ ಕನ್ನಡ ಮನಸ್ಸುಗಳಿಗೂ ಸಹಸ್ರ ಸಹಸ್ರ ಪ್ರಣಾಮಗಳನ್ನರ್ಪಿಸುತ್ತಾ, ಈ ಪ್ರಬಂಧಕ್ಕೆ ಮಂಗಳ ಹಾಡುತ್ತೇನೆ.


**ಡಾ|| ಸಾ. ಶಿ. ಮರುಳಯ್ಯ**
'ರಾಗಿಣಿ', ಹಂಪಿನಗರ, ಬೆಂಗಳೂರು - ೫೬೦ ೧೦೪


## ಅಭಿನಂದನೆಗಳು



ತಮ್ಮ ಕಾಲೇಜು ವಿದ್ಯಾರ್ಥಿ ಜೀವನದ ದಿನಗಳಿಂದಲೇ, ಎಂದರೆ ೧೯೬೨ರ ಸುಮಾರಿನಿಂದಲೇ ಕನ್ನಡದ ಸುಪ್ರಸಿದ್ಧ ಸಾಹಿತಿ, ಕಾದಂಬರಿಕಾರರಾಗಿದ್ದ ಅ.ನ.ಕೃ. ಅವರಿಂದ ಪ್ರಭಾವಿತರಾದ, ಕನ್ನಡವನ್ನೇ ತಮ್ಮ ಉಸಿರಾಗಿಸಿಕೊಂಡು ಪ್ರಕಾಶನ, ಮುದ್ರಣ ಮತ್ತು ಬರವಣಿಗೆ ಮುಂತಾದ ಸೃಜನಶೀಲ ಹಾಗೂ ಪ್ರಗತಿಪರ ಚಟುವಟಿಕೆಗಳಲ್ಲಿ ನಿರತರಾಗಿರುವ ಶ್ರೀ ಮನು ಪಾಟೀಲರು ಸದ್ದಿಲ್ಲದೆ, ಯಾವುದೇ ಆಡಂಬರಗಳಿಲ್ಲದೆ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ, ಕನ್ನಡಪರ ಚಳವಳಿಗಳಲ್ಲಿ ಕಳೆದ ೫೦ ವರ್ಷಗಳಿಂದಲೂ ವಿಶಿಷ್ಟ ಸೇವೆ ಸಲ್ಲಿಸಿಕೊಂಡು ಇಂದಿಗೂ ಕ್ರಿಯಾಶೀಲರಾಗಿರುವ ಕನ್ನಡ ಸಾಹಿತ್ಯಾಭಿಮಾನಿ, ದಿಟ್ಟ ಹೋರಾಟಗಾರ.

ಮೊನ್ನೆ ೧೧.೩.೨೦೧೩.ರಂದು ಬೆಂಗಳೂರು ನಗರ ಕನ್ನಡ ಸಾಹಿತ್ಯ ಪರಿಷತ್ತು **ಕನ್ನಡ ಚಳವಳಿ – ೫೦** ಎಂಬ ಕಾರ್ಯಕ್ರಮದಡಿ ಕನ್ನಡ ಚಳವಳಿ ಸೇನಾನಿ ಮ. ರಾಮಮೂರ್ತಿ ಅವರ ಜ್ಞಾಪಕಾರ್ಥ ಹಿರಿಯ ಕನ್ನಡ ಕಾರ್ಯಕರ್ತರಿಗೆ ಗೌರವ ಸಮರ್ಪಣೆ ಕಾರ್ಯಕ್ರಮದಲ್ಲಿ ನಮ್ಮೆಲ್ಲರ ಹಿತೈಷಿಗಳಾದ ಶ್ರೀ ಮನು ಪಾಟೀಲರು ಕನ್ನಡ ಸಾಹಿತ್ಯ ಚಳವಳಿಗೆ ಸಲ್ಲಿಸಿರುವ ಸೇವೆಯನ್ನು ಮನ್ನಿಸಿ, ೨೫,೦೦೦ ರೂಪಾಯಿಗಳ ನಗದು, ಪ್ರಶಸ್ತಿ ಫಲಕ, ಪ್ರಶಸ್ತಿ ಪತ್ರ ನೀಡಿ ಗೌರವಿಸಿದೆ. ಪಾಟೀಲರು ತಮಗೆ ನೀಡಿದ ೨೫,೦೦೦ ರೂ.ಗಳ ಜತೆಗೆ ಅದಕ್ಕೆ ತಮ್ಮ ಕಾಣಿಕೆಯಾಗಿ ೨೫,೦೦೦ ರೂ. ಸೇರಿಸಿ ಸಹೋದರ 'ವಸಂತ ಪಾಟೀಲರ' ಹೆಸರಿನಲ್ಲಿ ದತ್ತಿ ಸ್ಥಾಪಿಸಿ ಉತ್ತಮ ಕನ್ನಡ ಶಿಕ್ಷಕರಿಗೆ ಪ್ರಶಸ್ತಿ ನೀಡುವಂತೆ ಬೆಂಗಳೂರು ನಗರ ಜಿಲ್ಲಾ ಕಸಾಪಕ್ಕೆ ಮನವಿ ಮಾಡಿದ್ದಾರೆ. ಶ್ರೀ ಮನು ಪಾಟೀಲರಿಗೆ 'ಹೊಸತು'ವಿನ ಅಭಿನಂದನೆಗಳು.

ಮಹಿಳಾ ದಿನಾಚರಣೆಯ ಸಂದರ್ಭದಲ್ಲಿ ಬೆಂಗಳೂರಿಗೆ ಬಂದಿದ್ದ ಭಾಂವ್ರಿದೇವಿಯವರನ್ನು 'ಹೊಸತು'ಗಾಗಿ ಸಂದರ್ಶಿಸಲಾಯಿತು.

# ಮಹಿಳಾ ಹೋರಾಟದ ದಂತಕತೆ ಭಾಂವ್ರಿದೇವಿ



ಸಂದರ್ಶಿಸಿದವರು

**ಎನ್. ಗಾಯತ್ರಿ, ಜಿ. ರಾಮಕೃಷ್ಣ ಮತ್ತು ನೇಮಿಚಂದ್ರ**

ಮಂಗಳೂರಿನಲ್ಲಿ ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆಯಲ್ಲಿ ಭಾಗವಹಿಸಲು ದೂರದ ರಾಜಸ್ಥಾನದಿಂದ ಬಂದಿದ್ದ ಭಾಂವ್ರಿದೇವಿಯವರು ಬೆಂಗಳೂರಿನ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಯಾಗಿ ಭಾಗವಹಿಸಲು ಬರುವವರಿದ್ದರು. ರಾತ್ರಿಯೆಲ್ಲಾ ಪ್ರಯಾಣ ಮಾಡಿ ಬಂದಿದ್ದ ಭಾಂವ್ರಿದೇವಿಯವರು ಗೆಳತಿ ದು. ಸರಸ್ವತಿಯವರ ಮನೆಯಲ್ಲಿ ತಂಗಿದ್ದರು. ಹೊಸತು ಪತ್ರಿಕೆಗೆ ಸಂದರ್ಶನ ಮಾಡಬೇಕೆಂಬ ನಮ್ಮ ಇರಾದೆಯನ್ನು ಅವರಿಗೆ ಮುಂಚೆಯೇ ತಿಳಿಸಿದ್ದರೂ ಬೆಳಗ್ಗೆ ಎಂಟು ಗಂಟೆಗೆ ಹೋಗಿ ಅವರಿಗೆ ತೊಂದರೆ ಕೊಡಲು ಸ್ವಲ್ಪ ಸಂಕೋಚವಾಯಿತು. ಆದರೂ ವಿಧಿಯಿಲ್ಲದೆ, ಬೆಳಗೆದ್ದು ಅವರ ಮನೆ ತಲುಪಿ ಬೆಲ್ ಮಾಡಿದಾಗ, ಬಾಗಿಲು ತೆರೆದದ್ದೇ ನಗು ನಗುತ್ತಾ ನಿಂತ ಭಾಂವ್ರಿಯವರನ್ನು ಕಂಡೆವು. ಕೇಸರಿ ಬಣ್ಣದ ದಾವಣಿಯನ್ನು ತಲೆ ಮೇಲಿನಿಂದ ಹೊದ್ದ ರಾಜಸ್ಥಾನಿ ದಿರಿಸಿನಲ್ಲಿದ್ದ ಆಕೆ ಸಂತೋಷ, ಅಭಿಮಾನದಿಂದ ನಮ್ಮನ್ನು ಬರಮಾಡಿಕೊಂಡರು. ಸುಮಾರು ಒಂದು ಗಂಟೆಯಷ್ಟು ಕಾಲ ಅವರೊಡನೆ ಮಾತನಾಡಿದೆವು, ಅನ್ನುವುದಕ್ಕಿಂತ ಹರಟೆ ಹೊಡೆದೆವು. ರಾಜಸ್ಥಾನಿ ಭಾಷೆಯಲ್ಲಿ ಮಾತನಾಡುತ್ತಿದ್ದ ಅವರ ಮಾತುಗಳು ಅರ್ಥವಾಗಲು ತುಂಬ ಕಷ್ಟವಾಗಲಿಲ್ಲ.

**ಹೊಸತು :** ನಿಮ್ಮನ್ನು ನೋಡಿ ನಮಗೆ ತುಂಬ ಸಂತೋಷವಾಗಿದೆ. ನಮ್ಮ ಪತ್ರಿಕೆಗೆ ನಿಮ್ಮನ್ನು ಕುರಿತು ಬರೆಯಬೇಕೆಂದಿದೆ. ನಿಮ್ಮ ಅಭ್ಯಂತರವಿಲ್ಲವೇ ?

**ಭಾಂವ್ರಿ :** ಅದಕ್ಕೇನು, ಏನು ಬೇಕೋ ಕೇಳಿ. ಜೀವನ ಪೂರಾ ಹೋರಾಟವಾಯ್ತು. ನ್ಯಾಯ ಸಿಕ್ಕುವವರೆಗೂ ಇದು ನಿಲ್ಲುವುದಿಲ್ಲ.

**ಹೊ :** ಈಗೇನು ಮಾಡಿಕೊಂಡಿದ್ದೀರಾ ?

**ಭಾಂವ್ರಿ :** ನಾನು ಈಗಲೂ ಸಾಥಿನ್ ಆಗಿಯೇ ಕೆಲಸ ಮಾಡ್ತಿದೀನಿ. ಹಳ್ಳಿಯಲ್ಲಿ ಅದೆಷ್ಟು ಘರ್ಷಣೆ ! ಜನರಿಗೆ ಆರೋಗ್ಯದ ಬಗ್ಗೆ ಹೇಳ್ತೀನಿ. ಸಾಕ್ಷರತೆ, ಕುಡಿಯುವ ನೀರು, ಬರಗಾಲದಲ್ಲಿ ಜನರಿಗೆ ಪರಿಹಾರದ ಕೂಲಿ ಕೆಲಸ ಕೊಡಿಸೋದು ಮುಂತಾದ ಕೆಲಸ ಮಾಡ್ತೀನಿ. ನನ್ನ ಹಳ್ಳಿಯಲ್ಲೇ ಹುಡುಗಿಯರಿಗೆ ತರಬೇತಿ ಕೊಡ್ತಿದೀನಿ. ಹುಡುಗ-ಹುಡುಗಿಯರ ನಡುವೆ ಭೇದ-ಭಾವ ಮಾಡಬೇಡಿ ಎಂದು ಮನೆ ಮನೆಗೂ ಹೋಗಿ ಹೇಳ್ತೀನಿ. ಚಿಕ್ಕ ಮಕ್ಕಳಿಗೆ ಮದುವೆ ಮಾಡಬೇಡಿ ಅಂತಲೂ ಹೋಗಿ ಹೇಳ್ತೀನಿ.

**ಹೊ :** ಈ ಇಪ್ಪತ್ತು ವರ್ಷಗಳಲ್ಲಿ ಬಾಲ್ಯ ವಿವಾಹಗಳು ಕಡಿಮೆಯಾಗಿದೆಯೆಂದು ನಿಮಗೆ ಅನ್ನಿಸುವುದೇ ?

**ಭಾಂವ್ರಿ :** ಸ್ವಲ್ಪ ಕಡಿಮೆಯಾಗಿದೆ. ಆದರೂ ಈ ಮದುವೆಗಳನ್ನು ನಿಲ್ಲಿಸಬೇಕಾದ ಪೊಲೀಸರೇ ಮದುವೆಗಳಿಗೆ ಹೋಗಿ ದೇಸಿ ಘೀ ಲಾಡು ತಿಂದು, ಜೇಬಿಗೆ ಹಣ ಇಳಿಸಿಕೊಂಡು ಹೋಗುತ್ತಾರೆಯೇ ವಿನಃ ಮಗುವಿನ ಮದುವೆ ತಡೆಯುವುದಿಲ್ಲ, ಎನ್ನುವುದು ಬಹಳ ಬೇಸರದ ವಿಷಯ. ಪೊಲೀಸರು, ಸರ್ಕಾರ ಇಬ್ಬರೂ ಮಹಾ ಅಯೋಗ್ಯರು.

**ಹೊ :** ನಿಮ್ಮಲ್ಲಿ ವರದಕ್ಷಿಣೆ ಸಮಸ್ಯೆ ಇದೆಯಾ ?

**ಭಾಂವ್ರಿ :** ಇದೆ. ಅದಕ್ಕೂ ಹೋರಾಟ ಮಾಡುತ್ತಿದ್ದೇವೆ. ಆದರೆ ಅದು ಬಹಳ ಕಡಿಮೆಯಾಗಿಲ್ಲ

**ಹೊ :** ನಿಮಗೆ ವಿಶಾಖ ತೀರ್ಪಿನ ಬಗ್ಗೆ ಗೊತ್ತಾ ?

**ಭಾಂವ್ರಿ :** ಗೊತ್ತು, ಅದು ನನ್ನದೇ ಪ್ರಕರಣ.

**ಹೊ :** ನಿಮಗೆ ಇನ್ನೂ ನ್ಯಾಯ ಸಿಗದಿದ್ದರೂ, ಆ ತೀರ್ಪಿನಿಂದಾಗಿ ಎಲ್ಲಾ ದುಡಿಯುವ ಹೆಣ್ಣುಮಕ್ಕಳಿಗೂ ಪರಿಹಾರ ದೊರಕಲು ಸಾಧ್ಯವಾಗಿದೆ. ಅದಿರಲಿ ನಿಮ್ಮ ಪ್ರಕರಣ ಏನಾಗಿದೆ ?

**ಭಾಂವ್ರಿ :** ಹೈಕೋರ್ಟ್‌ನಿಂದ ನನಗಿನ್ನೂ ಹಿಯರಿಂಗ್‌ಗೆ ಬಂದಿಲ್ಲ

**ಹೊ :** ಈ ಪ್ರಕರಣದ ನಂತರ ಮಹಿಳಾ ಸಂಘಟನೆಗಳು ನಿಮ್ಮನ್ನು ಹೇಗೆ ನಡೆಸಿಕೊಂಡವು ?

**ಭಾಂವ್ರಿ :** ಸಹಕಾರವನ್ನೇನೋ ಕೊಟ್ಟರು. ಆದರೂ ಕೆಲವು ಸಂದರ್ಭದಲ್ಲಿ ನಾನು ಒಬ್ಬಂಟಿಯಾಗಿ ಸಮಾಜವನ್ನು ಎದುರಿಸಬೇಕಾಗಿ ಬಂತು. ಗುರ್ಜರರು ಬಿಡುಗಡೆಯಾಗಿ ಬಂದ ಮೇಲಂತೂ ನನಗೆ ಬಹಿಷ್ಕಾರ ಹಾಕಿದರು. ಹಳ್ಳಿಗರು ನನಗೆ ನೀರು, ಹಾಲು ಕೊಡದೆ ಕಾಡಿದರು. ಒಡಹುಟ್ಟಿದವರೂ ಕಷ್ಟ ಕೊಟ್ಟರು. ತುಂಬ ಕಷ್ಟಪಟ್ಟೆ. ಪೊಲೀಸರೊಂದಿಗಿನ ಅನುಭವವಂತೂ ಹೇಳುವುದೇ ಬೇಡ.

**ಹೊ :** ಈ ಘಟನೆಯ ನಂತರ ನಿಮಗೆ ನೀರಜಾ ಬಾನೊ‌ರ್ಟ್ ಪ್ರಶಸ್ತಿ ಬಂತು. ಆಗ ಏನನ್ನಿಸಿತು ?

**ಭಾಂವ್ರಿ :** ಪ್ರಶಸ್ತಿ ಬಂದದ್ದರಿಂದ ಸ್ವಲ್ಪ ಹಣ ಬಂತು. ಅದರಿಂದ ಸ್ವಲ್ಪ ಸಹಾಯ ಆಯಿತು. ಸುಳ್ಳಲ್ಲ. ಆದರೆ ನನಗೆ ಪ್ರಶಸ್ತಿ, ಸನ್ಮಾನ ಮುಖ್ಯವಲ್ಲ, ಎಲ್ಲ ಹೆಣ್ಣುಮಕ್ಕಳಿಗೂ ನ್ಯಾಯ ಸಿಗಬೇಕು. ಅದಕ್ಕೆ ಹೋರಾಟ ಮಾಡಬೇಕು. ಗುರ್ಜರ್‌ಗಳೂ ಕೂಡ ಕೇಸ್ ಹಿಂದೆ ತೆಗೆದುಕೊ, ನಿನಗೆ ದುಡ್ಡು ಕೊಡ್ತಿವಿ, ಅಂತ ಹಣದ ಆಮಿಷ ತೋರಿಸಿದರು. ನಾನು ಬೇಡ, ಅಂದೆ. ನ್ಯಾಯ ಸಿಗಬೇಕು, ಅದಕ್ಕೆ ಹೋರಾಟ ಮಾಡಬೇಕು, ಅನ್ನೋದು ಮುಖ್ಯ.

**ಹೊ :** ನೀವು ಬೀಜಿಂಗ್ ಸಮಾವೇಶಕ್ಕೆ ಹೋಗಿದ್ದರಲ್ಲಾ, ಆ ಅನುಭವ ಹೇಗಿತ್ತು ?




**ಭಾಂವ್ರಿ :** ಬಹಳ ಚೆನ್ನಾಗಿತ್ತು, ಅಲ್ಲಿ ಹಲವಾರು ದೇಶದ, ಹಲವಾರು ಮಂದಿಯನ್ನು ಭೇಟಿ ಮಾಡಿದೆ. ಆದರೆ ಊಟ ಮಾತ್ರ ಬಹಳ ಕಷ್ಟವಾಗಿತ್ತು. ಏನೋ ಜೊತೆಗಾರರಿದ್ದಿದ್ದರಿಂದ ಸಹಾಯವಾಯಿತು.

**ಹೊ :** ನಿಮಗೆ ದೆಹಲಿಯಲ್ಲಿ ಇತ್ತೀಚೆಗೆ ನಡೆದ ಘಟನೆಯ ವಿಷಯ ಗೊತ್ತಾ ?

**ಭಾಂವ್ರಿ :** ಗೊತ್ತು, ಅದನ್ನು ಟಿ.ವಿ.ಯಲ್ಲಿ ನೋಡಿದ ಮೇಲೆ ನನಗೆ ಎರಡು ದಿನಗಳ ಕಾಲ ರೊಟ್ಟಿ ತಿನ್ನಕ್ಕಾಗಲಿಲ್ಲ, ಅದೆಂತ ಅನ್ಯಾಯ !

**ಹೊ :** ಮುಂದೆ ಎಲ್ಲರೂ ಹೇಗೆ ಕೆಲಸ ಮಾಡಬೇಕೆನ್ನುತ್ತೀರಿ ?

**ಭಾಂವ್ರಿ :** ಹೋರಾಟ ಮಾಡುವುದೊಂದೇ ದಾರಿ. ಇಬ್ಬರು ಮೂವರು ಮಂದಿಯೇ ಇದ್ದರೂ ನಾವು ಹೋರಾಟ ಮಾಡಿಯೇ ತೀರುತ್ತೇವೆ. ಎಲ್ಲದಕ್ಕೂ, ಎಲ್ಲರ ವಿರುದ್ಧವೂ, ಸುಮ್ಮನೆ ಕೂಡಕೂಡದು, ಹಾಗೇ ಸಾಯೋಣವೇನು ? ಅಪ್ಪ, ಸೋದರ, ಸರ್ಕಾರ, ಪೊಲೀಸ್ ಎಲ್ಲರ ವಿರುದ್ಧವೂ ಅನ್ಯಾಯ ಪ್ರತಿಭಟಿಸಿ ಹೋರಾಟ ನಡೆಯಬೇಕು.

ಸುನೋ ಸಂಗ್ ಕೀ ಸಹೇಲೀ ಅಪನಾ
ಹಕ್ ಕೈಸೇ ಪಾಯೇ ಅಪನಾಹರ್
ಭಯ್ಯಾ ಕೋ ಅಜ಼ಾದೀ ಮಿಲೇಗೀ
ಹಮ್‌ಕೋ ಚಾರ್ ದೀವಾರ್
ಕ್ಯೋಂ ನ ಇಸ್ ದಿವಾರ್ ಕೋ ತೋಡೇ
ನಿಕಲೇ ಘರ್ ಕೇ ಬಾಹರ್ ?

ಅವರ ಉತ್ಸಾಹ, ಉದ್ವೇಗದ ಈ ಹಾಡುಗಳ ಸಾಲುಗಳನ್ನು ಕೇಳಿ ಅಲ್ಲಿದ್ದ ನಾವೆಲ್ಲಾ ಮತ್ತೊಮ್ಮೆ ಅವರಿಗೆ ಅದನ್ನು ರಾಗವಾಗಿ ಹಾಡಲು ಕೇಳಿಕೊಂಡೆವು. ಅದರ ಭಾವದೊಡನೆ ನಾವು ಜೊತೆಗೂಡಿ ಸಂಭ್ರಮಿಸಿದಾಗ ಘಂಟೆ ಸರಿದದ್ದು ಅರಿವಿಗೆ ಬರಲಿಲ್ಲ, ಅವರು ಮುಂದಿನ ಕಾರ್ಯಕ್ರಮಕ್ಕೆ ಸಿದ್ಧವಾಗಬೇಕಾದ್ದರಿಂದ ಅವರಿಗೆ ವಿದಾಯ ಹೇಳಿ ಅವರ ಮಾತಿನ ಗುಂಗಿನೊಂದಿಗೆ ಹೊರಬಿದ್ದೆವು.



ಹದಿನೈದು ವರ್ಷಗಳಿಗೆ ಹಿಂದೆ ಸುಪ್ರೀಂಕೋರ್ಟ್ ನೀಡಿರುವ ವಿಶಾಖ ಮಾರ್ಗದರ್ಶಿ ಸೂತ್ರಗಳು ದುಡಿಯುವ ಮಹಿಳೆಯರ ಸಮಸ್ಯೆಗಳನ್ನು ಕಾನೂನಿನ ಚೌಕಟ್ಟಿನಲ್ಲಿ ಗುರುತಿಸಿದ ಮೊದಲ ಪರಿಣಾಮಕಾರಿ ಪ್ರಯತ್ನ. ಇದರ ಮೂಲ ಕೇಂದ್ರಬಿಂದು ರಾಜಸ್ಥಾನದ ಭತೇರಿ ಗ್ರಾಮದ ಭಾಂವ್ರಿದೇವಿ ಎಂಬುದು ಬಹಳ ಮಂದಿ ದುಡಿಯುವ ಮಹಿಳೆಯರಿಗೆ ತಿಳಿದೇ ಇಲ್ಲ. ರಾಜಸ್ಥಾನ ರಾಜ್ಯ ಸರ್ಕಾರದ ಮಹಿಳಾ ವಿಕಾಸ ಯೋಜನೆಯಡಿ ಸಾಥಿನ್ ಆಗಿ ಕೆಲಸ ಮಾಡುತ್ತಿದ್ದ ಭಾಂವ್ರಿದೇವಿ ೧೯೯೨ರ ಮೇ ತಿಂಗಳಿನಲ್ಲಿ ಬಾಲ್ಯ ವಿವಾಹವನ್ನು ನಿಲ್ಲಿಸಲು ಪ್ರಯತ್ನಿಸಿದ್ದಕ್ಕೆ ಆ ಕುಟುಂಬದ ಪುರುಷರಿಂದ ಸಾಮೂಹಿಕ ಅತ್ಯಾಚಾರಕ್ಕೊಳಗಾದವಳು. ನ್ಯಾಯಕ್ಕಾಗಿ ಅವಳು ಕೋರ್ಟ್ ಕಟ್ಟೆಯೇರಿದಾಗ ಕೆಳ ನ್ಯಾಯಾಲಯಗಳು ಅವಳನ್ನೇ ಅಪನಂಬುಗೆಯಿಂದ ಕಂಡವು. ಅಪರಾಧಿಗಳನ್ನು ದೋಷಮುಕ್ತರನ್ನಾಗಿಸಿದವು. ಇದರಿಂದ ಸಿಟ್ಟಿಗೆದ್ದ ವಿಶಾಖಾ ಮತ್ತು ಇತರ ಮಹಿಳಾ ಸಂಘಟನೆಗಳು ಈ ಪ್ರಕರಣದಲ್ಲಿ ನ್ಯಾಯ ಕೋರಿ ಸುಪ್ರೀಂಕೋರ್ಟಿನ ಕಟ್ಟೆಯೇರಿದವು. ಆಗ ಸುಪ್ರೀಂಕೋರ್ಟ್ ಪರಿಸ್ಥಿತಿಯ ಗಂಭೀರತೆಯನ್ನು ಪರಿಗಣಿಸಿ ನೀಡಿದ್ದು ವಿಶಾಖಾ ತೀರ್ಪು. ಇದರ ಮುಂದುವರಿದ ಭಾಗವಾಗಿ ಇಂದು ದುಡಿಯುವ ಸ್ಥಳಗಳಲ್ಲಿ ಮಹಿಳೆಯರ ಮೇಲಿನ ಲೈಂಗಿಕ ಕಿರುಕುಳದಿಂದ ರಕ್ಷಣೆ ೨೦೧೦ರ ಮಸೂದೆಯು ಅಂಗೀಕಾರಕ್ಕಾಗಿ ಪಾರ್ಲಿಮೆಂಟಿನಲ್ಲಿ ಕಾದು ಕುಳಿತಿದೆ.

ವಿಶಾಖ ತೀರ್ಪು ಭಾರತದ ಕಾನೂನು ಇತಿಹಾಸದಲ್ಲಿಯೇ ತನ್ನದೇ ಆದ ವಿಶಿಷ್ಟ ಛಾಪನ್ನು ಒತ್ತಿದೆ. ಇದು ಮಹಿಳಾ ಸಂಘಟನೆಗಳ ನಡುವೆ ಸುದ್ದಿಯಾಗಿರುವುದು ಮಾತ್ರವಲ್ಲ, ಅದರ ಪ್ರಭಾವ ಮತ್ತು ಪರಿಣಾಮ ಎಲ್ಲ ದುಡಿಯುವ ಕ್ಷೇತ್ರಗಳಿಗೂ, ಒಟ್ಟಾರೆಯಾಗಿ ಮಹಿಳೆಯರು ಕ್ರಿಯಾಶೀಲರಾಗಿರುವ ಎಲ್ಲ ಸಾರ್ವಜನಿಕ ಬದುಕಿಗೂ ವಿಸ್ತರಿಸಿದೆ. ಸರ್ಕಾರಿ ಕಾರ್ಯಕ್ರಮಗಳ, ತರಬೇತಿ ಕೇಂದ್ರಗಳ ಚೌಕಟ್ಟಿನಲ್ಲೂ ಒಂದು ಜಾಗವನ್ನು ಕಾದಿರಿಸಿಕೊಂಡಿದೆ.

ಇಂದು ಭಾಂವ್ರಿದೇವಿ ನಮ್ಮ ನಡುವಿನ ದಂತಕಥೆ. ಅವಳನ್ನು ಕುರಿತು ಲಾವಣಿ, ನಾಟಕ, ಸಿನಿಮಾ ಎಲ್ಲವುಗಳ ಮೂಲಕ ಜನಮಾನಸದಲ್ಲಿ ಅತ್ಯಾಚಾರಕ್ಕೊಳಗಾದ ದುಡಿಯುವ ಮಹಿಳೆಯ ಸಂಕೇತವಾಗಿಬಿಟ್ಟಿದ್ದಾಳೆ. ತನ್ನ ಮೇಲಾದ ದೌರ್ಜನ್ಯದ ವಿರುದ್ಧ ನ್ಯಾಯ ಅರಸಿ, ಯಾವ ಆಮಿಷಕ್ಕೂ ಒಳಗಾಗದೆ ಹೋರಾಟದ ರಣರಂಗದಲ್ಲಿ ನಿಂತ ಧೀರ ಚೇತನ.



ರಾಜಸ್ಥಾನದ ಭತೇರಿ ಗ್ರಾಮದ ಕುಂಬಾರ ಕುಟುಂಬದಲ್ಲಿ ಜನಿಸಿದ ಭಾಂವ್ರಿದೇವಿ ಸ್ವತಃ ಬಾಲ್ಯವಿವಾಹದ ಪಿಡುಗಿಗೆ ಬಲಿಯಾದವಳು. ರಾಜಸ್ಥಾನ ಸರ್ಕಾರದ ಮಹಿಳಾ ವಿಕಾಸ ಯೋಜನೆಯಡಿ ಸಾಥಿನ್ ಆಗಿ ಅವಳು ಗ್ರಾಮದ ಪ್ರಗತಿಗಾಗಿ ದುಡಿಯುತ್ತಿದ್ದಾಗ ಬಾಲ್ಯವಿವಾಹವನ್ನು ತಡೆಯುವುದೂ ಒಂದು ಕಾರ್ಯಕ್ರಮ. ೧೯೯೨ರ ಮೇ ೫ರಂದು ಅವಳ ಹಳ್ಳಿಯ ರಾಮಕರಣ್ ಗುರ್ಜಾರನ ೯ ತಿಂಗಳ ಕೂಸಿನ ಮದುವೆಯು ಪೊಲೀಸರ ಆಗಮನದಿಂದ ನಿಲ್ಲುತ್ತದೆ. ಇದರ ಹಿಂದಿನ ಕಾರಣ ಶಕ್ತಿ ಭಾಂವ್ರಿಯೆಂದು ತಿಳಿದ ಆ ಕುಟುಂಬ ಅವಳ ವಿರುದ್ಧ ಸೇಡಿಗಾಗಿ ಕತ್ತಿ ಮಸೆಯುತ್ತಿದ್ದರು. ೧೯೯೨ರ ಸೆಪ್ಟೆಂಬರ್ ೨೨ರಂದು ಸಂಜೆ ೬ ಗಂಟೆಯ ಸಮಯದಲ್ಲಿ ಭಾಂವ್ರಿ ದಂಪತಿಗಳು ಹೊಲದಲ್ಲಿ ದುಡಿಯುತ್ತಿದ್ದಾಗ ಅಲ್ಲಿಗೆ ಧಾವಿಸಿ ಬಂದ ಐದು ಮಂದಿ ಪುರುಷರು ಮೊದಲು ಅವಳ ಗಂಡನನ್ನು ಸಾಯುವಂತೆ ಹೊಡೆದರು. ಅವನ ರಕ್ಷಣೆಗೆ ಬಂದ ಭಾಂವ್ರಿಯನ್ನು ಅವಳ ಗಂಡನೆದುರೇ ಸಾಮೂಹಿಕ ಅತ್ಯಾಚಾರವೆಸಗಿದರು. ನಂತರದ ಅವಳ ಬದುಕೇ ಒಂದು ದೀರ್ಘ ಹೋರಾಟ. ಪ್ರಕರಣ ದಾಖಲು ಮಾಡುವುದರಿಂದ ಹಿಡಿದು, ಕೋರ್ಟಿನ ಕಟ್ಟೆ ಹತ್ತುವವರೆಗೆ; ಆಗದಿರುವ ಅತ್ಯಾಚಾರದ ಬಗ್ಗೆ ಕತೆ ಕಟ್ಟಿ ಹೇಳುತ್ತಿದ್ದಾಳೆಂಬ ಆರೋಪದ ವಿರುದ್ಧ; ಬಡತನದ ಜೊತೆಗೆ ನೆರೆಹೊರೆಯವರ ಚುಚ್ಚು ಮಾತುಗಳ ವಿರುದ್ಧ; ಪೊಲೀಸರು ಅವಳ ಮೇಲೆ ಎಸಗಿದ ದೌರ್ಜನ್ಯದ ವಿರುದ್ಧ, ಹೋರಾಟದಿಂದ ಹಿಂದೆ ಸರಿಯಲು ಅವಳಿಗೆ ಆಮಿಷ ತೋರಿಸಬಂದ ಆರೋಪಿಗಳ ವಿರುದ್ಧ ನಿರಂತರ ಹೋರಾಟ ಸಾಗಿದೆ.

೧೯೯೫ರಲ್ಲಿ ಭಾಂವ್ರಿಯ ಅತ್ಯಾಚಾರದ ಪ್ರಕರಣ ಕೆಳ ಕೋರ್ಟ್‌ಗಳಲ್ಲಿದ್ದಾಗ, ಆರೋಪಿಗಳು ಪ್ರಕರಣವನ್ನು ಹಿಂದಕ್ಕೆ ತೆಗೆದುಕೊಳ್ಳಲು ಭಾಂವ್ರಿಗೆ ಆಮಿಷ ತೋರಿಸಿದರು. ಅವಳ ಸೋದರರು ಆ ಹಣವನ್ನು ತೆಗೆದುಕೊಳ್ಳಲು ಅವಳನ್ನು ಒತ್ತಾಯಿಸಿದರು. ಅದನ್ನು ಒಪ್ಪಿಕೊಳ್ಳದ ಅವಳೊಂದಿಗೆ ಎಲ್ಲಾ ಸಂಪರ್ಕವನ್ನು ಕಡಿದುಕೊಂಡರು. ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ನ್ಯಾಯಾಲಯದಲ್ಲಿ ಐದು ನ್ಯಾಯಾಧೀಶರು ಬದಲಾದರು. ಆರನೆಯ ನ್ಯಾಯಾಧೀಶ ಆರೋಪಿಗಳನ್ನು ದೋಷಮುಕ್ತರೆಂದು ತೀರ್ಪುಕೊಟ್ಟರು. ''ಮೇಲು ಜಾತಿಯ ಗಂಡಸು ದಲಿತ ಹೆಣ್ಣನ್ನು ಅತ್ಯಾಚಾರ ಮಾಡಿರುವ ಸಾಧ್ಯತೆಯೇ ಇಲ್ಲ'' ಎಂಬ ಬಾಲಿಶ ತೀರ್ಪು ಕೊಟ್ಟರು.

ರಾಜ್ಯದ ಶಾಸಕ ಈ ಬಂಧಮುಕ್ತ ಆರೋಪಿಗಳ ಸ್ವಾಗತಕ್ಕಾಗಿ ಒಂದು ಅದ್ದೂರಿಯ ಸಮಾರಂಭವನ್ನು ಏರ್ಪಡಿಸಿದರು. ಬಿಜೆಪಿಯ ಮಹಿಳಾ ಮೋರ್ಚಾದ ನಾಯಕರು ಸ್ವತಃ ತಾವೇ ಮುಂದೆ ಬಂದು ಆರೋಪಿಗೆ ಹಾರ ಹಾಕಿ ಭಾಂವ್ರಿದೇವಿಯನ್ನು ಸುಳ್ಳಿಯೆಂದು ಜರೆದರು. ರಾಜ್ಯಸರ್ಕಾರವೇನೋ ತೀರ್ಪನ್ನು ಪ್ರಶ್ನಿಸಿ ಈ ಪ್ರಕರಣವನ್ನು ಮೇಲಕ್ಕೆ ಕೊಂಡೊಯ್ಯುವ ನಿರ್ಧಾರ ಕೈಗೊಂಡಿತು. ಈ ತೀರ್ಪು ಇಡೀ ರಾಷ್ಟ್ರದ ಗಮನ ಸೆಳೆದು ರಾಷ್ಟ್ರವ್ಯಾಪಿ ಹೋರಾಟಕ್ಕೆ ನಾಂದಿ ಹಾಡಿತು. ೨೦೦೭ರ ವೇಳೆಗೆ ರಾಜಸ್ಥಾನದ ಹೈಕೋರ್ಟ್‌ನಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಒಂದೇ ಒಂದು ಹಿಯರಿಂಗ್ ನಡೆದಿದೆ ಮತ್ತು ಆರೋಪಿಗಳಲ್ಲಿ ಈಗಾಗಲೇ ಇಬ್ಬರು ಸತ್ತು ಹೋಗಿದ್ದಾರೆ.



ಈ ಪ್ರಕರಣದಿಂದ ಕುಟುಂಬ ಆಪತ್ತುಗಳ ಸರಮಾಲೆಯನ್ನೇ ಎದುರಿಸಬೇಕಾಗಿ ಬಂತು. ಅವಳಿಗೆ ಮತ್ತು ಅವಳ ಕುಟುಂಬಕ್ಕೆ ಊರ ಮೇಲುಜಾತಿಯವರು ಬಹಿಷ್ಕಾರ ಹಾಕಿದರು. ನೀರು, ಹಾಲು ಸಿಗದಂತೆ ಮಾಡಿದರು. ಅವಳ ಮಗ ಮುಖೇಶ್ (ಘಟನೆ ನಡೆದಾಗ ಅವನಿಗೆ ನಾಲ್ಕು ವರ್ಷ)ನನ್ನು ಅವನ ಕಾಲೇಜಿನ ಗುರ್ಜಾರ್ ಯುವಕರು ಚೆನ್ನಾಗಿ ಹೊಡೆದು ಹಿಂಸಿಸಿದರು. ಅವನಿಗೆ ಮದುವೆಯಾಗಲು ಹೆಣ್ಣುಗಳೇ ಸಿಕ್ಕಲಿಲ್ಲ. ಅವಳದೇ ಜನ ಕೂಡ ಅವಳು ಅತ್ಯಾಚಾರದಿಂದ ಕಳಂಕಿತಳಾಗಿದ್ದಾಳೆ, ಎಂದು ಅಪಮಾನ ಮಾಡಿದರು. ಪ್ರಧಾನ ಮಂತ್ರಿಯವರು ಅವಳಿಗೆ ನೀಡಿದ ಪರಿಹಾರ ಧನ ೨೫,೦೦೦ರೂಗಳನ್ನು ಅವಳ ಸೋದರ ಖರ್ಚು ಮಾಡಿ ಕುಂಬಾರ ಪಂಚಾಯತಿಯ ಒಳಗೆ ಸೇರಿಸಿಕೊಳ್ಳಲು ಶಾಂತಿಯ ಕಾರ್ಯಕ್ರಮವೇರ್ಪಡಿಸಿದ.

ಇಷ್ಟೆಲ್ಲ ಕಷ್ಟಗಳ ನಡುವೆಯೂ ತನ್ನ ಹೋರಾಟದ ಕಿಚ್ಚನ್ನು ನಂದಿಸಿಕೊಳ್ಳದೆ ದಿಟ್ಟವಾಗಿ ನಿಂತಿರುವ ಭಾಂವ್ರಿದೇವಿ ಇಂದು ಮಹಿಳಾ ಹೋರಾಟದ ಸಂಕೇತ; ಸ್ಫೂರ್ತಿಯ ಸೆಲೆ. ಅದಮ್ಯ ಚೇತನ.

**ಡಾ|| ಎನ್. ಗಾಯತ್ರಿ**
ನಂ. ೨೦೧, 'ಸ್ಕೈಲೈನ್ ಗೋಲ್ಡನ್ ರೇಸ್', ಛತ್ರಂ ಬ್ಲಾಕ್
ಕೆಂಪೇಗೌಡ ನಗರ, ಗವೀಪುರಂ, ಬೆಂಗಳೂರು - ೫೬೦ ೦೧೯

‘ನಮ್ಮ ನಮ್ಮ ಲಾಯಕ್ಕಿಗೆ ತಕ್ಕಂತೆ ನಮಗೆ ಸರ್ಕಾರ ದಕ್ತದೆ’ ಎಂಬ ಚತುರೋಕ್ತಿ ಇದೆ. ಆಯ್ಕೆಯ ಕಾಲಕ್ಕೆ ಅಂತಂದರೆ ಚುನಾವಣೆಯ ಕಾಲಕ್ಕೆ ಕಾಲಿಗೆರಗಿ ಬಾಯ್ತುಂಬ ಭರವಸೆಗಳನ್ನು ಸುರಿದು ಮತದಾರರನ್ನು ಮಾಯಕ್ಕೆ ಈಡು ಮಾಡಿ ಆಯ್ಕೆಗೊಂಡ ನಮ್ಮ ಉಮೇದ್ವಾರರು ವಿಧಾನ ಸೌಧ, ಲೋಕಸಭೆ, ನಗರ ಸಭೆಗಳ ದ್ವಾರ ಪ್ರವೇಶಿಸಿದ ಅನಂತರ ದಿನಕ್ಕೊಂದು ತರಹ ರೂಪಾಂತರಗೊಂಡು ತಮ್ಮದೇ ‘ರಾಯ’ಲ್ಟಿಯಲ್ಲಿ ಉಲ್ಟಾಪಲ್ಟಿ ಆಗುವುದನ್ನು ಲಾಗಾಯ್ತಿನಿಂದ ಅನುಭವಿಸುತ್ತಲೇ ಇದ್ದೇವೆ. ನಮ್ಮ ಮತಾಧಿಕಾರದ ಬಲದಿಂದ ಅಧಿಕಾರದ ಗದ್ದುಗೆ ಏರಿದ ಈ ಭೂಪರು ಅನಂತರ ಎಸಗುವ ಸ್ವಾರ್ಥಪರ ವ್ಯಾಪಗಳಿಂದಾಗಿ ನಮ್ಮಲ್ಲಿ ಕೋಪ-ತಾಪಗಳು ಮಡುಗಟ್ಟಿ ನಿರಂತರ ಕಟ್‌ಕಟಾಂತ ಹಲ್ಲು ಕಡಿಯುತ್ತ ಅಸಹಾಯ ಪರಿಸ್ಥಿತಿಯಿಂದ ಕಂಗೆಟ್ಟವರಾಗಿ, ‘ನಾವಾರಿಸಿದವರು ನಾಲಾಯಕ್ಕು ಆಗ್ಯಾರ ಅವರ ಆಯ್ಕೆಯನ್ನು ರದ್ದುಗೊಳಿಸುವಂಥ ಹಕ್ಕು’ ನಮಗಿರಬೇಕು ಎಂಬ ಬೇಡಿಕೆ ಈಡೇರುವ ಲಕ್ಷಣಗಳಿಲ್ಲ. ಹೀಗಾಗಿ ನಮ್ಮ ಬೆರಳಿಗೆ ಕಪ್ಪುಶಾಯಿ ಬಳಿಸಿಕೊಂಡು ನಮ್ಮ ತಲೆಯ ಮೇಲೆ ಕೂಡ್ರಿಸಿಕೊಂಡಿರುವ ಈ ಆತ ತಾಯಿಗಳ ಭಾರವನ್ನು ಅವಧಿ ಮುಗಿಯುವ ತನಕ ಹೊರಲೇಬೇಕಾದ ಅನಿವಾರ್ಯತೆ ಇದ್ದೇ ಇದೆ.

ನಮಗೆ ಎಂಥ ದೊರೆ ದೊರೆಯುತ್ತಾನೆ ಎಂಬ ಭರವಸೆಯೇ ಇರುವುದಿಲ್ಲ. ಅಲ್ಲಾರೀ; ಅಂಥ ದೇವರಂಥ ದೇವರು ಸಹ ಆಯ್ಕೆ ಮಾಡಿಕೊಂಡಿರುವ ದೇವೇಂದ್ರನ ಅವಲಕ್ಷಣದ ಕಥೆಗಳನ್ನು ಓದಿಲ್ವೆ! ಆತನ ಲಂಪಟತನ, ಮೋಸ, ಋಷಿಮುನಿಗಳ ಅಮಾಯಕ ಹೆಂಡಂದಿರನ್ನೂ ಕೆಡಿಸುವ ಕೇಡಿಗತನ, ಸದಾಸರ್ವದಾ ಭೋಗವಿಲಾಸದ ಉನ್ಮಾದದ ಆತನ ಇತಿಹಾಸ ಗೊತ್ತಿದ್ದೂ ಗೊತ್ತಿದ್ದೂ ದೇವಾಧಿದೇವತೆಗಳು ಆತನನ್ನೇ ತಮ್ಮ ದೊರೆಯಾಗಿ ಆಯ್ದದ್ದಲ್ಲದೇ ಆತನ ಪಟ್ಟಕ್ಕೆ ಧಕ್ಕೆ ಬರುವಂತಿದ್ದ ಸಂದರ್ಭದಲ್ಲಿ ತಮ್ಮ ಶೌರ್ಯ, ಪ್ರತಾಪಗಳನ್ನು ಪ್ರದರ್ಶಿಸಿ ದೇವೇಂದ್ರನಿಗೆ ಬಂದ ಕುತ್ತಿನಿಂದ ಪಾರುಗಾಣಿಸ್ತಾರಲ್ಲ ನಮ್ಮ ದೇವರುಗಳು! ನಮ್ಮ ದೇವರುಗಳ ಕಿತ್ತಾ ತೀಡುವುದೇ ನಮ್ಮ ಧರ್ಮ; ಅಂದ ಬಳಿಕ ನಾವು ಆಯ್ಕೆ ಮಾಡುವ ಉಮೇದ್ವಾರರು ಅಧಿಕಾರಸ್ಥರಾದ ಬಳಿಕ ಅವರ ದಿವ್ಯ ಆಡಳಿತಕ್ಕೆ ತಲೆ ಒಡ್ಡಲೇಬೇಕಲ್ಲ!

ದೇವರುಗಳು, ದೇವೇಂದ್ರರು ಈ ವಿಚಾರ ಬದಿಗೆ ಇರಿಸಿ; ಪ್ರತಿವರ್ಷ ಯುಗಾದಿಯ ಸಂದರ್ಭದಲ್ಲಿ ಆಯಾ ವರ್ಷದ ಅಧಿಪತಿ, ಆಡಳಿತಗಾರರು ನಿಗದಿಯಾದದ್ದನ್ನು ಅವರು ನೀಡಲಿರುವ ಫಲ ನಿರ್ಣಯವನ್ನು ಪಂಚಾಂಗದಲ್ಲಿ ನೋಡ್ತಾನೇ ಬಂದೀವಿ. ಸಂವತ್ಸರದಿಂದ ಸಂವತ್ಸರಕ್ಕೆ ಬೇರೆ ರಾಜ, ಮಂತ್ರಿಗಳ ನಿರೂಪಣೆ ಇರ್ತದ. ರಾಹು, ಕೇತುಗಳನ್ನುಳಿದು ಉಳಿದ ಏಳು ಗ್ರಹಗಳ ಪೈಕಿ ಓರ್ವ ರಾಜ; ಮತ್ತೋರ್ವ ಮಂತ್ರಿ, ಮಗದೊಬ್ಬ ಸೇನಾಪತಿ ಎಂದು ಜಂತ್ರಿ ಜಮಾಯಿಸಿರ್ತದ, ಯುಗಾದಿಯ ಹಬ್ಬದ ಮಬ್ಬು ಇಳಿಯೂದ್ರಾಗ ತಿಳಿವಳಿಕೆ ಒಡಮೂಡ್ತದ; ‘ಯುಗ ಯುಗಾದಿ ಕಳೆದರೂ ತಗಾದಿಗಳೇನೂ ತಪ್ಪವು’ ಅಂಬೂದು.

ಇದೇ ಪರಂಪರೆಯೇ ನಮ್ಮ ಚುನಾವಣೆಯ ಸಂಬಂಧದಲ್ಲಿಯೂ ಮುಂದುವರಿಯುತ್ತದಲ್ಲವೇ ? ‘ನಾವು ಮಾಡಿದ ಆಯ್ಕೆ ಯಾವ ಲಾಯಕೆ ?’ ಎಂಬ ಭರವಸೆಯೇ ಉಳಿದಿಲ್ಲ. ಲಾಯ ಅಂತಂದರೆ ಕುದುರೆಗಳನ್ನು ಸಾಕುವ ಜಾಗ. ಕುದುರೆ ವ್ಯಾಪಾರ ಅಂಬೂದೇ ರಾಜಕೀಯದಾಗ ನಿರ್ಣಾಯಕ ಪಾತ್ರವಹಿಸುತ್ತ ಬಂದಿದೆ. ಎಂಥಾಪರಿ ಭರವಸೆಯಿಂದ ಮತದಾನ ಮಾಡಿ ‘ಭಾರೀ ನಿಯತ್ತಿನವರು’ ಎಂಬ ಗತ್ತಿನವರು ಆಯ್ಕೆಯಾದರು. ಅಂಥವರೇ ಆಪರೇಷನ್ ‘ಕಮಲ್’ ಎಂಬ ಕಮಾಲ್

# ನಮ್ಮ ಆಯ್ಕೆ ಯಾವ ಲಾಯಕೆ ?

ಅನಂತ ಕಲ್ಲೋಳ



ಮಾಡಿ ಕೆಸರು ರಾಡಿ ಹಬ್ಬಿಸಿ 'ವಿಕ್ರಮ'ಗೈದಿದ್ದು ನಮ್ಮನ್ನು ದಂಗು ಬಡಿಸಿದೆಯಲ್ಲ! ಅಲ್ಪಾವಧಿಯ ಅಧಿಕಾರ ಕಾಲದಲ್ಲಿ 'ಅಲ್ಪ ವಿದ್ಯಾ ಮಹಾಗರ್ವಿ' ಎಂಬ ನಾಮ ಗಿಟ್ಟಿಸಿಕೊಂಡರು, ಮತದಾರರಿಗೆ ವಿಧವಿಧದ ನಾಮ ಹಾಕಿದ್ರು. ಇಷ್ಟಾಗಿಯೂ ತಮ್ಮಂಥ ಶಿಷ್ಟರು ಯಾರಿಲ್ಲ ಎಂದು ಧಾರ್ಷ್ಟ್ಯ ಮೆರೆಯುತ್ತಿರುವರು !

'ಬರ್‍ತಾ ಬರ್‍ತಾ ರಾಯರ ಕುದುರೆ ಕತ್ತೆಯಾಯ್ತು' ಎಂಬ ನಾಣ್ಣುಡಿ ಒಂದಿತ್ತು. ಅದಕ್ಕೆ ಬದಲಾಗಿ ಅಧಿಕಾರಕ್ಕೆ ಬರ್‍ತಾ ಬರ್‍ತಾ ಎಲ್ಲ ಕುದುರೆಗಳು ಮತದಾರರನ್ನು ಬಗೆಬಗೆಯಲ್ಲಿ ಕತ್ತೆ ಮಾಡಿ ಬಗ್ಗು ಬಡಿಯುವುದೇ ಕಾಲಾಂತರದಿಂದ ನಡೆದು ಬಂದ ಪರಂಪರೆಯಾಗಿದೆ ಎಂದು ಸಾರುವುದೇ ಸೂಕ್ತವೇನೋ ! ನಮ್ಮಲ್ಲಿ ಅಷ್ಟೇ ಏಕೆ ವಿಶ್ವಾದ್ಯಂತ ಪ್ರತ್ಯಯಕ್ಕೆ ಬಂದ ಪ್ರಚೀತೆ ಏನೆಂದರೆ, 'ಮತ ಕೊಟ್ಟಾಂವ ಕೋಡಂಗಿ ಪಡೆದು ಆಯ್ಕೆಯಾದಾಂವ ಈರಭದ್ರ !' ಪ್ರಜೆಗಳಿಗೆ ಫಜೀತಿ ಆಳುವವರಿಗೆ ವೈಭವಪೂರ್ತಿ !!

ಪ್ರಜಾಪ್ರಭುತ್ವದಲ್ಲಿ ಪ್ರಜೆಯೇ ಪ್ರಭು; ಆಳುವಾತ ಎಂಬ ಬೊಗಳೆ ಮಾತು ಭಾಳ ಪ್ರಸಿದ್ಧವಿದೆ. ಉತ್ತಮ ಪ್ರಭುತ್ವ ಎಂಬುದು ಲೊಳಲೊಟ್ಟೆ ಎಂದು ದಾಸವರೇಣ್ಯರು ಎಂದೋ ಪಾಡಿದ್ದಾರೆ. ಪ್ರಜೆಗಳಿಂದ ಆಯ್ಕೆಯಾದವರು ಅವರ ಅಡಿಯಾಳಾಗಿರ ಬೇಕೆಂದು ಬಯಸದಿದ್ದರೂ ಆಳುವಿಕೆ ನಡೆಯಿಸುವ ಅಧಿಕಾರ ಪಡೆದವರು ಬಹು ಜನ ಹಿತಾಯ ಬಹು ಜನ ಸುಖಾಯ ಎಂಬ ಎಚ್ಚರದಿಂದ ಆಳ್ವಿಕೆ ನಡೆಯಿಸಬೇಕು; ಅವರು ನಡೆಯಿಸುವ ಸರ್ಕಾರ ಜನತೆಯ ಬೇಕು ಬೇಡಗಳ ಬಗ್ಗೆ ದರ್ಕಾರ್ ಹೊಂದಿರಬೇಕು ಎಂದು ಬಯಸುವುದು ತಪ್ಪೇ !

'ಹ್ಞೂಂ; ಆಳ್ವಿಕೆಯ ಗದ್ದುಗೆಯಲ್ಲಿ ವಿರಾಜಮಾನರಾದವರು ರಾಜವೈಭೋಗದಲ್ಲಿ ತಲ್ಲೀನರಾಗಿರ್‍ತಾರೆ. ಅವರಿಗೆ ಬಹುಜನರ ಕುರಿತು ಅಂತಂದರೆ ಹಿಂದಿಭಾಷೆಯ 'ಬಹು' (ತಮ್ಮ ಸೊಸೆಯಂದಿರು), ಮೊಮ್ಮಕ್ಕಳು, ಮರಿ ಮಕ್ಕಳು ಹೀಗೆ ಏಳು ಪೀಳಿಗೆಗಳಿಗೆ ಸಾಲುವಷ್ಟು ಸೌಭಾಗ್ಯ' ಬಾಚಿಕೊಳ್ಳುವುದರಲ್ಲಿಯೇ ಅವರ ಕರ್ತೃತ್ವ ಖರ್ಚಾಗುತ್ತದೆ. ಅಧಿಕಾರಾವಧಿಯ ೪-೫ ವರ್ಷಗಳಲ್ಲಿ ಅದನ್ನು ಸಾಧಿಸದಿದ್ದಲ್ಲಿ ಏನು ಸಾರ್ಥಕ ? ಎಂಬ ಚಿಂತೆ ಅವರಿಗೆ. ಹಾಸಲುಂಟು, ಹೊದೆಯಲುಂಟು. ಮತ ನೀಡಿದ ಮತದಾರನಿಗೆ ಕಿಮ್ಮತ್ತಿಲ್ಲ; ಇಂಥ ಭಂಡ ಪುಢಾರಿಗಳನ್ನು ಕೈಹಿಡಿದು ಕೇಳುವ ಹಿಮ್ಮತ್ತೂ ಯಾರಿಗೂ ಇಲ್ಲ. ನಮ್ಮ ಆಯ್ಕೆಯು ಯಾವ ಲಾಯಕ್ಕೆ ಎಂತೆಂದರೆ ನಮ್ಮಿಂದ ದೂರ ಹೋಗಿ ತಮ್ಮ ಖುರಪುಟದಿಂದ ಧೂಳು ಎಬ್ಬಿಸಿ ನಮ್ಮ ಕಣ್ಣು ಉರಿಸುವಷ್ಟು ವಿದೂರದ ಲಾಯಕ್ಕೆ; ನಾವು ಅದರ ವಿರುದ್ಧ ದೂರು ನೀಡಲು ಲಾಯಕ್ಕೇ ? ಇರಬೇಕಲ್ಲ ಆ ಆಯ್ಕೆ; ಬಂಜೆಯ ಬಯಕೆ !

''ಆಳುವ ಅರಸು ಯಾರಾದರೇನು ? ನಮಗೆ ರಾಗಿ ಬೀಸೋದು ತಪ್ಪೂದಿಲ್ಲ'' ಎಂಬ ರೂಢಿಮಾತು ಇದೆಯಷ್ಟೇ ! ನಮ್ಮ ಹೊಟ್ಟೆಗೆ ಹಿಟ್ಟು ಬೇಕೆಂದ ಬಳಿಕ ಅರಸನಂತೆ ಕೈಕಟ್ಟಿ ಕೂಡಲಾಗದು; ಹಿಟ್ಟಿನ ಹೊಂದಾಣಿಕೆಗಾಗಿ ಗಟ್ಟಿತನದಿಂದ ಕಾಯಕಕ್ಕೆಳಸ ಬೇಕಾಗ್ತದೆ ಯಾವ ಬಾಜೀರಾಯನ ಆಡಳಿತದಾಗಲೂ ಪುಗಸೆಟ್ಟಿ ಹೊಟ್ಟೀ ಹೊರ್‍ಕೊಂಡು ಆರಾಮಶೀರ ಸೋಮಾರಿರಾಯನಾಗಿರುವುದು ಆಗದ ಹೋಗದ ಮಾತು. ''ಆಳಾಗಿ ದುಡಿ ಅರಸನಾಗಿ ಉಣ್ಣು'' ಎಂಬ ಆದೇಶವೇ ಕಣ್ಮುಂದೆ ಕಾಣ್ತೆತ್ತಲ್ಲ




## ಅಭಿನಂದನೆಗಳು



ಶ್ರೀಮತಿ ನೇಮಿಚಂದ್ರ ಅವರು
ತಮ್ಮ ಸಮಗ್ರ ಕಥಾ ಸಾಹಿತ್ಯಕ್ಕಾಗಿ
ಖಾದ್ರಿ ಶಾಮಣ್ಣ ಟ್ರಸ್ಟ್ ನೀಡುವ
೨೦೧೨ರ ಸಾಲಿನ
'ಇಂದಿರಾತನಯ ಕಥಾ ಸಾಹಿತ್ಯ
ಪ್ರಶಸ್ತಿ' ಪಡೆದಿರುತ್ತಾರೆ.
ಪ್ರಶಸ್ತಿ ಪುರಸ್ಕೃತರನ್ನು
'ನವಕರ್ನಾಟಕ' ಮತ್ತು
'ಹೊಸತು ಬಳಗ'
ಸಂತೋಷದಿಂದ ಅಭಿನಂದಿಸುತ್ತದೆ.

ನಮ್ಮ ಶಾಲೆಯ ವರ್ಗಗಳಲ್ಲಿ ಬರೆದಿದ್ದ ಉಪದೇಶಾಮೃತಗಳಲ್ಲಿ,

ದಾಸವರೇಣ್ಯ ಪುರಂದರ ದಾಸರೇನೋ ತಮ್ಮ ಗೋಪಾಳ ಬುಟ್ಟಿಯನ್ನು ಮುಂದೆ ಮಾಡಿದಾಗ ರಾಗಿಯ ಭಿಕ್ಷೆಯನ್ನು ಈಕ್ಷಿಸಿದೊಡನೆ :

*ರಾಗಿಯ ತಂದೀರಾ ಭಿಕ್ಷಕೆ ರಾಗಿಯ ತಂದೀರಾ,*
*ಯೋಗ್ಯರಾಗಿ, ಭೋಗ್ಯರಾಗಿ, ಭಾಗ್ಯವಂತರಾಗಿ...*

ಎಂದೆಲ್ಲ ರಾಗವಾಗಿ, ಸರಾಗವಾಗಿ ಹಾಡಿದ್ರು. ಈ ಬಗೆಯ 'ರಾಗಿ'ಯಾಗುವುದು ಸುಲಭ ವೇನಲ್ಲ; ಹೀಗಾಗಿ ಅನೇಕರು ಬೂದಿ ಬಳ್ಕೊಂಡು ಬೈರಾಗಿಗಳಾಗಿ ಬಯ್ಯುತ್ತ ಕೂಡ್ತಾರೆ, 'ನಮ್ಮ ಆಯಕೆ ಯಾವ ಲಾಯಕೇ ?' ಎಂದು ಹತಾಶೆಯ ವಿಷಾದ ರಾಗದಾಗ ಕುಂಯ್‌ಗುಡ್ತಾ ಕೂಡ್ತಾರ. ಆಳುವವರು ಬಲಶಾಲಿಗಳು; ಅಧಿಕಾರ ಹೊಂದಿದವರು ಹೊಲೆಗೆಡ್ತಾರ ಎಂದು ಇಂಗ್ಲಿಷ್ ಭಾಷೆಯ ನಾಣ್ಣುಡಿಯೊಂದಿದೆ : 'ಪಾವರ್ ಕರಪ್ಟ್ಸ್; ಅಬ್ಸೊಲ್ಯೂಟ್ ಪಾವರ್ ಕರಪ್ಟ್ಸ್ ಅಬ್ಸೂಲೂಟಲೀ'!

ಬಲವನ್ನು ನಿರ್ದೇಶಿಸಲು 'ಹಾರ್ಸ್ ಪಾವರ್' ಎಂಬ ಒಕ್ಕಣೆ ಇದೆಯಷ್ಟೇ. ರಾಜಕೀಯದಾಗ ಕುದುರೆ ವ್ಯಾಪಾರ, 'ಹಾರ್ಸ್ ಟ್ರೇಡಿಂಗ್'ಗೇ ಕಾರಣವೇ ಆಯಕೆಗೊಂಡ ಕುದುರೆಗಳ ''ಪಾವರ್ರೂ'' ಆಯ್ದು ಕಳಿಸಿದಾವ್ರು ಪಾವರ್‌ಲೆಸ್; ಆದ್ದರಿಂದ ಹೆಲ್ಪಲೆಸ್ ಹ್ಯಾಪ್ಲ್ಯಾಗಳಾಗೋದು !

'ನಾವು ಆಯ್ಕೆ ಮಾಡಿ ಕಳಿಸಿದ್ದು ಲಾಯಕ್ಕಾದ ಕುದುರೆಯಾಗಿಲ್ರಿ; ಬರ್‍ತಾ ಬರ್‍ತ ಅದು ಕತ್ತೆಗಿಂತ ಕಡೆಯಾಗಿದೆ' ಎಂದು ಸಾರಿದ್ರೂ ಅರಣ್ಯರೋದನವಾಗಿ ಬಿಡ್ತದ ! ಇದು ಲಾಗಾಯತ್ತಿಂದ ಬಂದ ದಿವ್ಯ ಭವ್ಯ ಪರಂಪರೆಯಾಗಿದೆ ನಮ್ಮ ನಾಡಿನದು.

ಅಂಥಾಂಗ ಇತ್ತೀಚಿನ ಸಾಂಕೇತಿಕ ಚಿತ್ರವನ್ನು ನಿರೂಪಿಸುತ್ತೇನೆ. ಭಾಗವತರು ತಾನೇ ಭಾರತದ ಭವ್ಯ ಪರಂಪರೆಯ ಗುಣಗಾನ ಮಾಳ್ಪವರು. 'ನೀ ತಿನ್ ನೀ ತಿನ್'ನೇ ಯೋಗ್ಯ ಎಂದು ಆಯಕೆ ಮಾಡಿದ್ರು ರಾಷ್ಟ್ರೀಯ ಪಕ್ಷದ ಅಧ್ಯಕ್ಷಗಿರಿಗೆ. ಈಗಾಗಲೇ ಎಂಥಾ ಪರಿ ತಿಂದುಂಡು ಗುಂಡು-ಗುಂಡಾಗಿದ್ದವ ''ನಾ ತಿನ್ನಲಾರೆ; ಇನ್ನು ತಿನ್ನಲಾರೆ'' ಎಂದ. ಅನ್ನಲಾಗದಷ್ಟು ಬೆಳೆದಾವ್ರು ಶಸ್ತ್ರಕ್ರಿಯೆಗೆ ಒಡ್ಡಿಕೊಂಡು ಕೊಬ್ಬು ಕಳೆದುಕೊಂಡ ಆಸಾಮಿ ಅಧಿಕಾರದ ಲಾಯಕ್ಕ ಲಾಯಕ್ಕಲ್ಲ ಅಂತ ಹಿಂಜರಿಯುವಂತಾದದ್ದು ವಿಶೇಷವಾದ ಸುದ್ದಿಯಾಯ್ತು, ಅಧಿಕಾರದಲ್ಲಿದ್ದವರು 'ಮೋಹನ'ಗಳಾಗಿದ್ದರೂ ಸೈ, ಮೌನಿಗಳಾಗಿದ್ದರೂ ಸೈ. ಅಧಿಕಾರದ ಲಾಯದಲ್ಲಿಯ ಕುದುರೆಗಳ ಲದ್ದಿ, ಗಂಜಳ ದೇಶಾದ್ಯಂತ ಅಷ್ಟು ಅಲ್ಲ ಸಪ್ತಸಮುದ್ರ ಪರ್ಯಂತ ಹಬ್ಬ್ಯಾನೇ ಇದೆ. ಅಧಿಕಾರಸ್ಥರಾಗಿ ಶುಭ್ರವಾಗಿ ಝಳ ಝಳ ಮೆರೆಯುತ್ತಲೇ ಸದಾಕಾಲ ಮೇಯುತ್ತ ಲದ್ದಿ, ಗಂಜಳ ವೃದ್ಧಿಯ ಸುದ್ದಿಯಲ್ಲಿಯೇ ಕುಪ್ರಸಿದ್ಧರಾಗುವ ಈ ಹಾರ್ಸು ಪಾವರ್‌ಗಳನ್ನು ಹಾರಿಸಿಬಿಡುವ ಅವಕಾಶ ಒದಗಿದಾಗ ಆಯುವವರೋ, ದನಕಾಯುವವರೋ ಆದ ಮತದಾರರು ಯೋಗ್ಯರಾಗಿ, ಭೋಗ್ಯರಾಗಿ, ಭಾಗ್ಯವಂತರಾಗಿ ಆಗುವ ಯೋಗ ಎಂದು ಒದಗುವುದೋ ? ಅದನ್ನು ಸಾಧ್ಯಗೊಳಿಸುವ ಕರ್ಮ ಯೋಗಿ ಯಾವಾಗ ಬರುವನೋ ! ಮೋಹನರೇ ಹೇಳಬೇಕು; ಭಾಗವತರೇ (ಕಣಿ) ಹೇಳಬೇಕು.


ಅನಂತ ಕಲ್ಲೋಳ
'ರಮಾರಮಣ', ನಂ. ೫೦೬, ಕುಲಕರ್ಣಿ ಬೀದಿ, ಬೆಳಗಾವಿ - ೫೯೦ ೦೦೧



೧೯೨೨ರ ಡಿಸೆಂಬರ್‌ನಲ್ಲಿ ಲೆನಿನರ ಅನಾರೋಗ್ಯ ಮತ್ತೊಮ್ಮೆ ಮರುಕಳಿಸಿತು. ಆದರೆ ೧೯೨೩ರ ಜನವರಿ ಹಾಗೂ ಫೆಬ್ರವರಿಗಳಲ್ಲಿ ಅವರು ಸ್ವಲ್ಪಮಟ್ಟಿಗೆ ಚೇತರಿಸಿಕೊಂಡರು; ಈ ಕಾಲದಲ್ಲಿ ಅವರು ''ಮಹಾಧಿವೇಶನಕ್ಕೆ ಬರೆದ ಪತ್ರ'', ''ದಿನಚರಿಯಿಂದ ಪುಟಗಳು'', ''ಸಹಕಾರದ ಕುರಿತು'', ''ನಮ್ಮ ಕ್ರಾಂತಿ'', ''ಕಾರ್ಮಿಕ ರೈತ ತನಿಖೆಯನ್ನು ನಾವು ಹೇಗೆ ಪುನಸ್ಸಂಘಟಿಸಬೇಕು'', ''ಕೆಲವರೇ ಮೇಲು, ಆದರೆ ಮೇಲಾಗಿರಬೇಕು'' ಎಂಬ ತಮ್ಮ ಸುಪ್ರಸಿದ್ಧ ಲೇಖನಗಳನ್ನು ಹೇಳಿ ಬರೆಸಿದರು. ಇವೇ ಅವರ ಕೊನೆಯ ಲೇಖನಗಳಾಗಿದ್ದವು.

ಅವರ ಅದಮ್ಯ ಸಂಕಲ್ಪ ಶಕ್ತಿ, ತಮ್ಮ ಜವಾಬ್ದಾರಿಕೆಯ ಅರಿವು, ದೇಶದ ಭವಿಷ್ಯತ್ತಿನ ಬಗೆಗೆ, ಅದರ ನಿರಂತರ ಪ್ರಗತಿಯ ಬಗೆಗೆ ಕಾಳಜಿ, ಇವು ಲೆನಿನರಿಗೆ ಅವರ ಅನಾರೋಗ್ಯ ಉಂಟುಮಾಡಿದ್ದ ಸಂಕಟದ ವಿರುದ್ಧ ಹೋರಾಡಲು ಮತ್ತು ಮಾನವ ಸಹಿಷ್ಣುತೆಯ ಮೇರೆಗಳಿಗೂ ಮೀರಿದಂತೆ ಕಂಡುಬಂದಂಥ ವಿಷಯಗಳನ್ನೂ ಸಾಧಿಸಲು, ಶಕ್ತಿ ಒದಗಿಸಿಕೊಟ್ಟವು. ತೀವ್ರವಾದ ಅನಾರೋಗ್ಯಕ್ಕೊಳಗಾಗಿದ್ದರೂ ಅವರು ಆರು ವಾರಗಳ ಅಲ್ಪ ಕಾಲಾವಧಿಯಲ್ಲೇ ಅನೇಕ ಪ್ರಮುಖ ಕೃತಿಗಳನ್ನು ರಚಿಸಿದರು.

ಲೆನಿನರ ಕೊನೆಯ ಪತ್ರಗಳ ಹಾಗೂ ಲೇಖನಗಳ ಮಹತ್ವ ಅಮೂಲ್ಯವಾದುದು. ನಿಕಟವಾಗಿ ಪರಸ್ಪರ ಹೆಣೆದುಕೊಂಡಿರುವ ಆ ಬರಹಗಳು ಸಾರತಃ ಒಂದು ಸಮಗ್ರ ಕೃತಿಯೇ ಆಗಿವೆ. ಅದರಲ್ಲಿ ಅವರು ಆ ಮುನ್ನಿನ ಬರಹಗಳಲ್ಲೂ ಭಾಷಣಗಳಲ್ಲೂ ಮಾಡಿದ್ದ ಪ್ರತಿಪಾದನೆಗಳನ್ನೂ ತೀರ್ಮಾನಗಳನ್ನೂ ಮುಂದುವರಿಸಿದರು, ಸೋವಿಯತ್ ಒಕ್ಕೂಟದಲ್ಲಿ ಸಮಾಜವಾದವನ್ನು ನಿರ್ಮಿಸುವ ಬೃಹತ್ ಯೋಜನೆಯ ವಿಶದೀಕರಣವನ್ನು

# ಕ್ರಾಂತಿಪುರುಷ ವ್ಲದೀಮಿರ್ ಇಲ್ಯಿಚ್ ಲೆನಿನ್

ಪೂರೈಸಿದರು ಮತ್ತು ಜಾಗತಿಕ ವಿಮೋಚನಾ ಚಳವಳಿಯ ಸಾಮಾನ್ಯ ಪ್ರತೀಕ್ಷೆಗಳ ಬೆಳಕಿನಲ್ಲಿ ರಶಿಯದ ಸಮಾಜವಾದಿ ಪರಿವರ್ತನೆಯ ಕಾರ್ಯಕ್ರಮವನ್ನು ರಚಿಸಿದರು.

ರಶಿಯವು ಸಮಾಜವಾದವನ್ನು ನಿರ್ಮಿಸಲು ಬೇಕಾದುದೆಲ್ಲವನ್ನೂ ಹೊಂದಿದ್ದಿತೆಂದು ಲೆನಿನ್ ಪರಿಗಣಿಸಿದ್ದರು. ಮುಖ್ಯ ಕಾರ್ಯಭಾರ, ಕೈಗಾರಿಕೆಯನ್ನು, ವಿಶೇಷವಾಗಿ ಭಾರಿ ಕೈಗಾರಿಕೆಯನ್ನು ಅಭಿವೃದ್ಧಿಗೊಳಿಸುವುದಾಗಿದೆ, ಆರ್ಥಿಕ ಹಾಗೂ ತಾಂತ್ರಿಕ ಹಿಂದುಳಿದಿರುವಿಕೆಯನ್ನು ಕೊನೆಗಾಣಿಸುವುದಾಗಿದೆ ಮತ್ತು ಜಗತ್ತಿನ ಅಗ್ರಗಾಮಿ ದೇಶಗಳ ಸಾಲಿಗೆ ಮುನ್ನಡೆಯುವುದಾಗಿದೆ. ಇದನ್ನು ಸಾಧಿಸಲು ಭಾರಿ ಕೈಗಾರಿಕೆಯನ್ನು ಅಭಿವೃದ್ಧಿಗೊಳಿಸುವುದು, ಇಡೀ ದೇಶವನ್ನು ಕೈಗಾರಿಕೀಕರಿಸುವುದು ಮತ್ತು ವಿದ್ಯುದೀಕರಿಸುವುದು, ಶ್ರಮ ಉತ್ಪಾದಕತೆಯನ್ನು ಹೆಚ್ಚಿಸುವುದು ಅವಶ್ಯ, ಎಂದು ಅವರು ತಿಳಿಸಿದರು.

ಸಮಾಜವಾದವನ್ನು ನಿರ್ಮಿಸಲು ಕಾರ್ಮಿಕ ವರ್ಗ ಹಾಗೂ ರೈತಾಪಿ ಜನರ ಮಧ್ಯೆ ಮೈತ್ರಿಕೂಟವನ್ನು ಬಲಗೊಳಿಸುವುದು ಅವಶ್ಯವೆಂದು ಲೆನಿನ್ ನಂಬಿದ್ದರು. ಕಾರ್ಮಿಕ ವರ್ಗವು ರೈತರಿಗೆ ನಾಯಕತ್ವ ನೀಡಬೇಕು, ಅವರನ್ನು ಸಮಾಜವಾದ ನಿರ್ಮಾಣಕಾರ್ಯದೊಳಕ್ಕೆ ಸೆಳೆಯಬೇಕು, ತಮ್ಮ ಸಣ್ಣಪುಟ್ಟ ಹಂಚಿಹೋದ ವೈಯಕ್ತಿಕ ಕೃಷಿಕ್ಷೇತ್ರಗಳನ್ನು ವಿಸ್ತೃತ ಪ್ರಮಾಣದ ಯಾಂತ್ರೀಕೃತ ಸಾಮೂಹಿಕ ಕೃಷಿಕ್ಷೇತ್ರಗಳನ್ನಾಗಿ ಪುನಸ್ಸಂಘಟಿಸುವುದಕ್ಕೆ ಅವರಿಗೆ ಸಹಾಯ ಮಾಡಬೇಕು. ರೈತರನ್ನು ಸಮಾಜವಾದ ನಿರ್ಮಾಣಕಾರ್ಯದೊಳಕ್ಕೆ ಸೆಳೆಯುವ ಏಕೈಕ ಮಾರ್ಗವೆಂದರೆ ಸಹಕಾರಿ ಸಂಸ್ಥೆಗಳ ಮಾರ್ಗ. ಸಹಕಾರಿ ಸಂಸ್ಥೆಗಳಲ್ಲಿ ರೈತರ ವೈಯಕ್ತಿಕ ಹಿತಗಳನ್ನು ರಾಜ್ಯದ ಹಾಗೂ ಇಡೀ ಸಮುದಾಯದ ಸಾಮಾನ್ಯ ಹಿತಗಳೊಂದಿಗೆ ಸಂಬಂಧಿಸುವುದು ಸಾಧ್ಯ. ಸೋವಿಯತ್ ರಾಜ್ಯವು ರೈತರಿಗೆ ಟ್ರಾಕ್ಟರುಗಳನ್ನೂ ಇತರ ಕೃಷಿ ಯಂತ್ರೋಪಕರಣಗಳನ್ನೂ ಸರಬರಾಜು ಮಾಡುವ ಮೂಲಕ ಸಹಕಾರಿ ಸಂಸ್ಥೆಗಳನ್ನು ಸಂಘಟಿಸುವುದಕ್ಕೆ ಸಹಾಯ ಮಾಡಬೇಕು. ನಾವು ಗ್ರಾಮಾಂತರ ಪ್ರದೇಶಗಳಿಗೆ ಒಂದು ಲಕ್ಷ ಪ್ರಥಮ ದರ್ಜೆಯ ಟ್ರಾಕ್ಟರುಗಳನ್ನು ಕೊಡಬಲ್ಲೆವಾದರೆ ಮತ್ತು ಚಾಲಕರುಗಳನ್ನು ಒದಗಿಸಬಲ್ಲೆವಾದರೆ, ರೈತರು ಕಮ್ಯೂನಿಸಂನ ಪರವಾಗಿ ಮತ ನೀಡಲಿರುವರು ಎಂದು ಲೆನಿನರು ೧೯೧೯ರಷ್ಟು ಹಿಂದೆಯೇ ಪಾರ್ಟಿಯ ಎಂಟನೆಯ ಮಹಾಧಿವೇಶನಕ್ಕೆ ಸಲ್ಲಿಸಿದ ವರದಿಯಲ್ಲಿ ತಿಳಿಸಿದ್ದರು.

ಲೆನಿನರ ಪ್ರಕಾರ, ಸಮಾಜವಾದ ನಿರ್ಮಾಣ ಕಾರ್ಯಭಾರವು ಸಾಂಸ್ಕೃತಿಕ ಕ್ರಾಂತಿಯೊಂದಿಗೆ ಸಂಬಂಧಿತವಾಗಿದ್ದಿತು. ಸಾಂಸ್ಕೃತಿಕ ಕ್ರಾಂತಿಯೂ ಪರಮ ಪ್ರಾಮುಖ್ಯತೆಯ ಕಾರ್ಯಭಾರ, ಸಾರ್ವಜನಿಕ ಶಿಕ್ಷಣಕ್ಕಾಗಿ ಎಷ್ಟು ಹಣ ನೀಡುವುದಕ್ಕೂ ಹಿಂದೆ ಮುಂದೆ ನೋಡಬಾರದು, ಎಂದವರು ಹೇಳಿದರು. ನಿರಕ್ಷರತೆಯನ್ನು ಶೀಘ್ರವಾಗಿ ಕೊನೆಗಾಣಿಸುವ, ಪ್ರಾಥಮಿಕ,

ಜಗತ್ತಿನ ದುಡಿಯುವ ಜನರ ನಾಯಕ, ಬೋಧಕ, ಮಾರ್ಕ್ಸ್ ಮತ್ತು ಏಂಗೆಲ್ಸರ ಕ್ರಾಂತಿಕಾರಿ ಸಿದ್ಧಾಂತದ ಪ್ರತಿಪಾದಕ, ರಶಿಯನ್ ಕಮ್ಯೂನಿಸ್ಟ್ ಪಾರ್ಟಿಯ ಸಂಘಟಕ, ಕ್ರಾಂತಿಯ ನಾಯಕ ಲೆನಿನ್‌ರ ೧೪೩ನೇ ಜನ್ಮದಿನ ಏಪ್ರಿಲ್ ೨೨. ರಶಿಯಾದಲ್ಲಿ ಸಮಾಜವಾದಿ ಸಮಾಜದ ಸ್ಥಾಪನೆಗಾಗಿ ಅವಿಶ್ರಾಂತವಾಗಿ ಶ್ರಮಿಸಿ ಬುನಾದಿ ನಿರ್ಮಿಸಿದಾತ ಲೆನಿನ್. ಆತನ ನಂತರ ಏನೇನೋ ಆಯಿತಾದರೂ ಅವರು ರೂಪಿಸಿದ ಸಿದ್ಧಾಂತಗಳು ಇವತ್ತಿಗೂ ಪ್ರಸ್ತುತ. ಈ ಮಹಾನ್ ನಾಯಕನನ್ನು ಸ್ಮರಿಸುತ್ತ ಅವರ ಜೀವನದ ಕೆಲವು ಆಯ್ದ ಭಾಗಗಳನ್ನು ಇಲ್ಲಿ ಪ್ರಕಟಿಸುತ್ತಿದ್ದೇವೆ.

–ಸಂ.

ಸೆಕೆಂಡರಿ, ವಿಶೇಷ ಹಾಗೂ ಉನ್ನತ ವಿದ್ಯಾಸಂಸ್ಥೆಗಳ ಜಾಲಬಂಧವನ್ನು ವಿಸ್ತರಿಸುವ, ವಿಜ್ಞಾನದ ಎಲ್ಲ ಶಾಖೆಗಳನ್ನೂ ವಿಸ್ತರಿಸುವ ಮತ್ತು ಜನರ ಮಧ್ಯದಿಂದಲೇ ಬುದ್ಧಿಜೀವಿಗಳನ್ನು ಸಿದ್ಧಗೊಳಿಸುವ ಕಾರ್ಯಭಾರವನ್ನು ಅವರು ಪಾರ್ಟಿಯ ಮುಂದಿರಿಸಿದರು.

ಲೆನಿನರು ಜನಸಮೂಹಗಳಿಗೆ ರಾಜ್ಯವನ್ನು ಸ್ವತಃ ನಡೆಸಬೇಕೆಂದು, ವ್ಯವಸ್ಥಾಪನೆಯ ತಂತ್ರವನ್ನು ಕರಗತಮಾಡಿಕೊಳ್ಳಬೇಕೆಂದು, ಸತತವಾಗಿ ಬೋಧಿಸಿದರು. ಅವರು ಅಧಿಕಾರಶಾಹಿಯ ವಿರುದ್ಧ, ದುಡಿಯುವ ಜನರ ಅಗತ್ಯತೆಗಳು ಮತ್ತು ಹಿತಗಳ ಬಗೆಗೆ ನಿರ್ದಯತೆಯಿಂದಿರುವುದರ ವಿರುದ್ಧ, ಕೆಲಸದ ಬಗೆಗೆ ಔಪಚಾರಿಕ ಮನೋಧರ್ಮದ ವಿರುದ್ಧ ಕಸುವಿನ ಹೋರಾಟ ನಡೆಸಿದರು. ಅವರ ಸ್ವಂತ ಜೀವನವೇ ಸ್ವಯಂಶಿಸ್ತು ಹಾಗೂ ದಕ್ಷತೆಗೆ ನಿದರ್ಶನವಾಗಿದ್ದಿತು. ಅವರು ಅಧ್ಯಕ್ಷತೆ ವಹಿಸಿದ್ದ ಜನತಾ ಕಮಿಸ್ಸಾರ್‌ಗಳ ಕೌನ್ಸಿಲ್‌ನ ಸಭೆಗಳು ಯಾವತ್ತೂ ಸುವ್ಯವಸ್ಥಿತ ನಿಷ್ಕೃಷ್ಟತೆಯೊಂದಿಗೆ ನಡೆಸಲ್ಪಡುತ್ತಿದ್ದವು. ಲೆನಿನರು ಆ ಸಭೆಗಳಿಗೆ ಎಂದೂ ಒಂದು ನಿಮಿಷವೂ ತಡವಾಗಿ ಬರುತ್ತಿರಲಿಲ್ಲ. ಭಾಷಣಕಾರರಿಗೆ ಮೂರರಿಂದ ಐದು ನಿಮಿಷಗಳವರೆಗಷ್ಟೆ ಮಾತನಾಡಲು ಅವಕಾಶ ನೀಡಲಾಗುತ್ತಿದ್ದಿತು. ಭಾಷಣಕಾರರು ಕರಾರುವಾಕ್ಕಾದ ತನಿಖೆ ಮಾಡಲಾದ ಸಂಗತಿಗಳನ್ನೂ ಸಂಖ್ಯೆಗಳನ್ನೂ ಮಾತ್ರ ನೀಡಬೇಕೆಂದೂ ಸ್ಪಷ್ಟವಾದ ಸಲಹೆಗಳನ್ನು ಮುಂದಿಡಬೇಕೆಂದೂ ಲೆನಿನರು ಒತ್ತಾಯಿಸುತ್ತಿದ್ದರು. ಕೇವಲ ಮಾತುಗಳ ಆರ್ಭಟ, ಅಸ್ಪಷ್ಟ ಹೇಳಿಕೆಗಳು, ಅನಿರ್ದಿಷ್ಟವಾದ ಹಾಗೂ ಸರಿಯಲ್ಲದ ಸುದ್ದಿ ಸಮಾಚಾರ ಇವುಗಳನ್ನು ಅವರು ಸಹಿಸುತ್ತಿರಲಿಲ್ಲ. ಬೇರೆ ಬೇರೆ ಸ್ಥಳಗಳಿಂದ ಬರುತ್ತಿದ್ದ ಪ್ರತಿನಿಧಿಗಳ ಮಾತುಗಳನ್ನೂ ಸಾಮಾನ್ಯ ನೌಕರರ ಅಭಿಪ್ರಾಯಗಳನ್ನೂ ಅವರು ಗಮನವಿತ್ತು ಕೇಳುತ್ತಿದ್ದರು. ಸಮಿತಿಯ ಕಾರ್ಯಗಳಿಗೆ ಹೊಸ ಜನರನ್ನು ನೇಮಕ ಮಾಡಲು ಮತ್ತು ಅವರಿಗೆ ವಿಶೇಷ ಕರ್ತವ್ಯಗಳನ್ನು ಗೊತ್ತುಪಡಿಸಿಕೊಡಲು ಅವರು ಯಾವತ್ತೂ ಸಿದ್ಧವಿರುತ್ತಿದ್ದರು.

ಕೆಲಸದಲ್ಲಿ ಸಾಮೂಹಿಕತಾವಾದವನ್ನು ಅವರು ಬಹಳವಾಗಿ ಮೆಚ್ಚುತ್ತಿದ್ದರು ಮತ್ತು ಉತ್ತೇಜನ ನೀಡುತ್ತಿದ್ದರು. ಪ್ರಮುಖ ಪ್ರಶ್ನೆಗಳನ್ನು ಪಾರ್ಟಿಯ ಕೇಂದ್ರ ಸಮಿತಿಯಲ್ಲಿ ಅಥವಾ ಜನತಾ ಕಮಿಸ್ಸಾರ್‌ಗಳ ಕೌನ್ಸಿಲ್‌ನಲ್ಲಿ ಚರ್ಚಿಸದೆಯೇ ಅವುಗಳ ಬಗೆಗೆ ನಿರ್ಧಾರಗಳನ್ನು ಕೈಗೊಳ್ಳುವುದು ತಪ್ಪೆಂದು ಅವರು ಭಾವಿಸಿದ್ದರು. ಅವರು ಎಲ್ಲ ಪ್ರಶ್ನೆಗಳನ್ನೂ ಜಾಗರೂಕತೆಯಿಂದ ಚರ್ಚಿಸಿ ಸಾಮೂಹಿಕವಾಗಿ ತೀರ್ಮಾನಿಸುವುದರ ಪರವಾಗಿದ್ದರು. ಸಾಮೂಹಿಕತಾವಾದವನ್ನು ಅವರು ಪಾರ್ಟಿ ಹಾಗೂ ರಾಜ್ಯ ನಾಯಕತ್ವದ ಪ್ರಧಾನ ಸೂತ್ರವೆಂದು ಪರಿಗಣಿಸಿದ್ದರು. ಲೆನಿನರ ಕಾಲದಲ್ಲಿ ಈ ಸೂತ್ರವನ್ನು ಎಂದೂ ಉಲ್ಲಂಘಿಸಲಾಗುತ್ತಿರಲಿಲ್ಲ.

ಸಾಮೂಹಿಕ ನಾಯಕತ್ವವು ಯಾವುದೇ ಕಾರ್ಯಕ್ಕೆ ಸಂಬಂಧಿಸಿ ಕಟ್ಟುನಿಟ್ಟಾದ ವೈಯಕ್ತಿಕ ಜವಾಬ್ದಾರಿಯನ್ನೇನೂ ಹೋಗಲಾಡಿಸದೆಂಬ ಅಂಶವನ್ನು ಲೆನಿನರು ಅದೇ ಹೊತ್ತಿನಲ್ಲಿ ಸ್ಪಷ್ಟಪಡಿಸಿದರು. ಎಲ್ಲ ಸರಕಾರೀ ಹಾಗೂ ಪಾರ್ಟಿ ಕಾರ್ಯಕರ್ತರೂ ಉಪಕ್ರಮವನ್ನು, ವೈಯಕ್ತಿಕ ಜವಾಬ್ದಾರಿಕೆಯ ಉನ್ನತ ಭಾವನೆಯನ್ನು ತೋರಬೇಕೆಂದೂ, ಎಲ್ಲ ಸರಕಾರೀ ಕಾನೂನು ಹಾಗೂ ನಿಯಮಗಳನ್ನೂ ಜಾರಿಗೆ ತರಲಾಗಿದೆಯೇ ಇಲ್ಲವೇ ಎಂಬುದನ್ನು ಕಟ್ಟುನಿಟ್ಟಾಗಿ ತನಿಖೆ ಮಾಡಬೇಕೆಂದೂ, ಒತ್ತಿ ತಿಳಿಸುತ್ತಿದ್ದರು.

ಲೆನಿನರೇ ಸ್ವತಃ ಕಟ್ಟುನಿಟ್ಟಾದ ಸ್ವಯಂಶಿಸ್ತಿಗೆ ಮಾದರಿಯಾಗಿದ್ದರು. ಪಾರ್ಟಿ ಹಾಗೂ ಸರಕಾರಿ ಅಧಿಕಾರಿಗಳೂ ಹಾಗೆಯೇ ಇರಬೇಕೆಂದು ಅವರು ಆಗ್ರಹಿಸಿದರು. ಪಾರ್ಟಿಯ ನಿರ್ಧಾರ ಅವರಿಗೆ ಶಾಸನವಾಗಿದ್ದಿತು. ಇತರರೂ ಇದೇ ಮನೋಧರ್ಮ ತಳೆಯಬೇಕೆಂದು ಅವರು ಒತ್ತಾಯಿಸಿದರು. ಪಾರ್ಟಿ ಶಿಸ್ತನ್ನು ಉಲ್ಲಂಘಿಸಿದ ವ್ಯಕ್ತಿ ಪಾರ್ಟಿಯ ಶತ್ರುಗಳಿಗೆ ಸಹಾಯ ಮಾಡುತ್ತಾನೆ ಎಂದು ಅವರು ಹೇಳುತ್ತಿದ್ದರು. ಲೆನಿನರು ವಿನಯ, ಸರಳತೆ ಹಾಗೂ ಇತರರ ಬಗೆಗೆ ಅನುಕಂಪ ಇವೇ ಮುಂತಾದ ಪ್ರೀತಿಪಾತ್ರ ಮಾನವ ಗುಣಗಳನ್ನು ಹೊಂದಿದ್ದರು. ತಮ್ಮ ಬಗೆಗೇ ಹೊಗಳಿಕೆ ಅಥವಾ ಶ್ಲಾಘನೆಯನ್ನು ಅವರು ಸಹಿಸದಾಗಿದ್ದರು.

ಲೆನಿನರು ಸಮಾಜವಾದದ ಶತ್ರುಗಳ ವಿಷಯದಲ್ಲಿ ನಿರ್ದಾಕ್ಷಿಣ್ಯರಾಗಿದ್ದರು. ಪಾರ್ಟಿ ಹಾಗೂ ರಾಜ್ಯ ಶಿಸ್ತನ್ನು ನಿರ್ಲಕ್ಷಿಸಿದವರ ಬಗೆಗೆ, ಅಸಡ್ಡೆ ಕೆಲಸ ಮಾಡಿದವರ ಬಗೆಗೆ ಅವರು ಸ್ವಲ್ಪವೂ ಕರುಣೆ ತೋರುತ್ತಿರಲಿಲ್ಲ, ಶಿಕ್ಷೆ ವಿಧಿಸಲೇಬೇಕೆಂದು ಒತ್ತಾಯಿಸುತ್ತಿದ್ದರು. ಕೆಲಸವನ್ನು ಅವಶ್ಯ ಬಿದ್ದರೆ ಹತ್ತು ಬಾರಿ ಮಾಡಬೇಕು, ಕಲಿಯಬೇಕು, ಏನೇ ಆಗಲಿ ಅದನ್ನು ಮಾಡಿ ಮುಗಿಸಬೇಕು, ಎಂದವರು ಹೇಳಿದರು.

*(ಸಂ. : ವಿ. ಐ. ಲೆನಿನ್ - ಸಂಕ್ಷಿಪ್ತ ಜೀವನ ಚರಿತ್ರೆ, ಪ್ರಗತಿ ಪ್ರಕಾಶನ, ಮಾಸ್ಕೋ)*

**ಅನುವಾದ : ಕೆ. ಎಲ್. ಗೋಪಾಲಕೃಷ್ಣರಾವ್**

# ಉದ್ಯಮಪತಿಗಳ ಅನುವರ್ತಿ –




**ಕೆ. ಎಸ್. ಪಾರ್ಥಸಾರಥಿ**

ಅತಿ ಹೆಚ್ಚುಕಾಲ ಹಣಕಾಸು ಮಂತ್ರಿಯಾಗಿರುವ ಚಿದಂಬರಂ ಅವರ ಆಧ್ಯಾತ್ಮಿಕ ಒಲವು ಚಿದಂಬರ ರಹಸ್ಯವೇನೂ ಅಲ್ಲ. ಮನಮೋಹನ ಹಾಗೂ ಮಾಂಟೆಕ್ ಸಿಂಗ್ ಮತ್ತು ಈತ ನಮ್ಮ ದೇಶದ ಉದ್ಯಮಪತಿಗಳು ಆರಾಧಿಸುವ ತ್ರಿಮೂರ್ತಿಗಳ ಪೈಕಿ ಅವರ ಅಪಾರ ಬೆಳವಣಿಗೆಗೆ ಇವರು ನೀಡಿರುವ ಕೊಡುಗೆಯೂ ಅಪಾರ. ವಯೋಧರ್ಮದಿಂದ ಇವರಲ್ಲಿ ಯಾರಾದರೂ ಒಬ್ಬರು ನಿವೃತ್ತರಾದರೂ ಉಳಿದವರು ಇನ್ನು ಬಹುಕಾಲ ನಮ್ಮನ್ನು ಬಾಧಿಸುತ್ತಾರೆ ಎಂದು ನಿರೀಕ್ಷಿಸಬಹುದು. ಇವರ್‍ಯಾರೂ ರಾಜಕೀಯವಾಗಿ ಜನಪ್ರಿಯ ನಾಯಕರಾಗಿ ಬಂದವರಲ್ಲ. ಈ ದೇಶದ ಪ್ರಧಾನಿಯನ್ನು ಉದ್ಯಮ ಲೋಕದವರು ನಿರ್ಧರಿಸುತ್ತಿದ್ದಾರೆ. ಕಳೆದ ಎರಡು ದಶಕಗಳಿಂದ ಬೂರ್ಷ್ವಾ ಪಕ್ಷಗಳು ಅವರಿಗೆ ಬೆಂಬಲ ನೀಡುವುದು ಕರ್ತವ್ಯವಾಗುತ್ತದೆ. ಬಜೆಟ್ ಅನ್ನುವುದು ಕೇವಲ ಲೆಕ್ಕಪತ್ರವಷ್ಟೇ; ಬಹುಮುಖ್ಯ ಆರ್ಥಿಕ ಚಟುವಟಿಕೆಗಳು ಸರ್ಕಾರದ ವ್ಯಾಪ್ತಿಗೆ ಬರುವುದಿಲ್ಲ, ಬರಬಾರದು ಎನ್ನುವುದು ಇವರ ಧೋರಣೆ. ಪಬ್ಲಿಕ್ ಪ್ರೈವೇಟ್ ಪಾಲುಗಾರಿಕೆ ಅನ್ನುವುದಕ್ಕೆ ಇವರು ವಿಶಿಷ್ಟ ಅರ್ಥ ನೀಡಿದ್ದಾರೆ. ನೀತಿಗಳನ್ನು ಸರ್ಕಾರ ಮಾಡಿಕೊಡುತ್ತದೆ. ಆರ್ಥಿಕತೆ ಮಾರುಕಟ್ಟೆಯಲ್ಲಿ ನಿರ್ಧರಿಸಿದಂತೆ ಅನಿಯಂತ್ರಿತ, ಅದೇ ಮುಕ್ತ ಆರ್ಥಿಕ ನೀತಿ. ಆರ್ಥಿಕ ಯೋಜನೆಗಳು ಅಂದರೆ ನಾವು ಅಂದು ಅರಿತಿದ್ದು ಅದು ಹಲವು ನೀತಿ ನಿರೂಪಣೆ ಮತ್ತು ಹೂಡಿಕೆಗಳಿಂದ ಬಹುಮುಖ್ಯವಾಗಿ ಸಮಾಜದ ಪುನರ್‌ನಿರ್ಮಾಣದ ಕೆಲಸ - ಕೇವಲ ಜಿಡಿಪಿಯ ಆರ್ಥಿಕ ಪ್ರಗತಿಯೇ ಉದ್ದೇಶವಲ್ಲ; ಅದು ಗುಣಾತ್ಮಕವಾಗಿದ್ದು, ಬಹುಜನ ಕ್ಷೇಮ ಸಾಧಕವಾಗಿರಬೇಕು ಮುಂತಾಗಿ. ಆದರೆ ಈಗ ಅದು ಕೇವಲ ಜಿಡಿಪಿಯನ್ನು ಹೆಚ್ಚಿಸಿದರೆ ಸಾಕು, ಮಿಕ್ಕವೆಲ್ಲ ತಂತಾವೇ ಆಗುತ್ತವೆ ಅನ್ನುವ ರೀತಿ. ಉದ್ಯೋಗ ನಿರ್ಮಾಣವಾಯ್ತೊ, ಬಡತನ ನಿವಾರಣೆ ಆಯಿತೊ, ಶಿಕ್ಷಣ, ಆರೋಗ್ಯ ವೃದ್ಧಿಯಾಯ್ತೊ, ಸಮಾಜದ ಹಲವು ಹಿಂದುಳಿಕೆಗಳು ಸ್ವಲ್ಪವಾದರೂ ಸರಿಪಡಿಸಲಾಯ್ತೊ ಮುಂತಾಗಿ ಯೋಜನೆಯ ಸಾಧನೆಯನ್ನು ಹಲವು ರೀತಿ ಅಳೆಯುತ್ತಿದ್ದ ಕಾಲ ಹೋಯಿತು. ಭಾರತದಲ್ಲಿ ಎಷ್ಟು ಜನ ಶತಕೋಟಿ ಸರದಾರರಾದರು, ಜಗತ್ತಿನ ಪಟ್ಟಿಯಲ್ಲಿ ಅವರ ಸ್ಥಾನ ಪ್ರಪ್ರಥಮವೇ ಹೀಗೆಲ್ಲ ಗಮನಿಸಲಾಗುತ್ತಿದೆ ಈಗ. ಸಂಪತ್ತಿನ ಕೇಂದ್ರೀಕರಣ ಸರಿಯಲ್ಲ ಅನ್ನುವ ತಿಳುವಳಿಕೆಯೇ ಇಂದು ಸರಿಯಲ್ಲ ಎಂದಾಗಿದೆ. ಇಪ್ಪತ್ತು ವರ್ಷಗಳ ಸತತ ಖಾಸಗೀ ಪರ ವ್ಯಾಖ್ಯೆಯಿಂದ ಜಿಡಿಪಿ ಗಣನೀಯವಾಗಿ ಹೆಚ್ಚಿದ್ದರೂ ಇಂದು ಈ ಖಾಸಗೀ ವ್ಯವಸ್ಥೆಯೂ ತನ್ನದೇ ಮಾರ್ಗದಲ್ಲಿ ಮುಂದುವರಿಯಲಾಗದೆ ತತ್ತರಿಸುವ ಪರಿಸ್ಥಿತಿ ಏಕೆ ಉಂಟಾಯ್ತು ಅವರು ಆರಿಸಿಕೊಂಡ ಮಾರ್ಗ ಸರಿಯಿದ್ದರೆ ? ಹೀಗೆಲ್ಲಾ ನಿದ್ದೆ ಕೆಡಿಸಿದ ಚಿಂತೆಗಳು ತಲೆಹಾಕಿದ್ದೂ ಚಿದಂಬರಂ ೨೦೧೩ರ ಸಾಲಿಗೆ ತಮ್ಮ ಔಪಚಾರಿಕ ಬಜೆಟ್ ಮಂಡಿಸಿದಾಗ; ಅದಕ್ಕೆ ಮುನ್ನಾದಿನ ಅವರ, ಆರ್ಥಿಕ ಸಲಹಾಕಾರ ರಘುರಾಂ ರಾಜ, ಅಮೆರಿಕದಲ್ಲಿ ತರಪೇತಿ ಪಡೆದ ಅರ್ಥಶಾಸ್ತ್ರಜ್ಞ ತಯಾರಿಸಿದ ಆರ್ಥಿಕ ಸಮೀಕ್ಷೆ ಮಂಡಿಸಿದಾಗ; ಅದಕ್ಕೂ ಮುನ್ನ ರೈಲ್ವೆ ಬಜೆಟ್ ಮಂಡಿಸಿದಾಗ ಯುಪಿಎ-೨ರ ಐದು ವರ್ಷ ಮುಗಿಯುತ್ತಿದ್ದು, ಬರಲಿರುವ ಚುನಾವಣೆ ಎದುರಿಸಲು ಈ ಬಜೆಟ್ಟಿನಲ್ಲಿ ಏನಾದರೂ ಜನರನ್ನು ಮರುಳು ಗೊಳಿಸುವ ತಂತ್ರಗಳನ್ನು ನಿರೀಕ್ಷಿಸಿದವರಿಗೂ ಇವು ನಿರಾಸೆ ಉಂಟುಮಾಡಿದುವು. ರಾಜಕೀಯ ವಾಗಿ ಗಮನಿಸಿದರೆ, ಯುಪಿಎ-೨ಕ್ಕೆ ಸವಾಲೆಸೆಯಬಹುದಿದ್ದ ಭಾಜಪ ಪರಿವಾರ ದುರ್ಬಲ ವಾಗಿರುವುದು ಮತ್ತು ಮೂರನೆಯ ರಂಗವೊಂದು ರೂಪಿತವಾಗಬಹುದಾದ ಸಂಭವವೂ ಕಾಣಿಸದಿರುವುದು ಬಹುಶಃ ಯುಪಿಎ-೨ಕ್ಕೆ ಧೈರ್ಯ ತಂದಿರಬಹುದು. ಚುನಾವಣೆಗಾಗಿ ಏನೂ ವೇಷ ತೊಡುವ ಅಗತ್ಯವಿಲ್ಲ ಎಂದು ಎನಿಸಿರಬಹುದು. ಪರಿಣಾಮವಾಗಿ ಈ ಬಜೆಟ್ಟು ಚಿದಂಬರಂ ಬಹಳ ಕಾಲದಿಂದ ಬಯಸಿದ್ದ ಕೇವಲ ಲೆಕ್ಕಪತ್ರ ಮಂಡನೆ; ಇದರಲ್ಲಿ ರಾಷ್ಟ್ರದ ಬೆಳವಣಿಗೆಯನ್ನು ನಿರ್ದೇಶಿಸುವ ಪುನರ್‍ರಚಿಸುವ ದಿಶಾಸೂಚಕಗಳೇನೂ ಕಂಡು ಬಂದಿಲ್ಲ. ಅಭ್ಯಾಸಬಲದಿಂದ ಯೋಜನೆಯ ಕೆಲವು ಪಳೆಯುಳಿಕೆಗಳನ್ನು ಯೋಜನೆ ಎಂದು ಕರೆಯಲಾಗುವುದಿಲ್ಲ. ಇಂದಿನ ಯೋಜನಾಮಂಡಲಿಯ ಕೆಲಸವೇ ಇನ್ನು ಹಲವು ವರ್ಷಗಳಲ್ಲಿ ಯೋಜನಾ ಆಯೋಗವನ್ನೇ ಕದ ಮುಚ್ಚುವುದು.

ಇನ್ನು ಬಜೆಟ್ಟಿನಲ್ಲಿ ಹಲವು ಕ್ಷೇತ್ರಗಳಿಗೆ ಮೀಸಲಿಟ್ಟಿರುವ ಹಣರಾಶಿಯ ಬಗ್ಗೆ ನಂಬಿಕೆ ಬರುವಂಥದು ಏನೂ ಇಲ್ಲ. ಒಟ್ಟು ಯೋಜನೆಯ ಗಾತ್ರ ಕಳೆದ ಬಜೆಟ್ಟಿನಲ್ಲಿ ಇದ್ದದ್ದಕ್ಕಿಂತ ತುಸು ಕಡಿಮೆಯ ಒಟ್ಟಾರೆ ಹನ್ನೆರಡನೆಯ ಯೋಜನೆಯ ಗಾತ್ರವನ್ನೇ ಎರಡನೆಯ ವರ್ಷದಲ್ಲೇ ಮೊದಲ ಅಂದಾಜಿನಲ್ಲಿ ಶೇ. ೪ರಷ್ಟು ಈಗಾಗಲೇ ಕಡಿತ ಮಾಡಲಾಗಿದೆ. ಆದರೆ ೨೦೧೨-೧೩ರ ಬಜೆಟ್ಟಿನಲ್ಲಿ ನಿಗದಿಮಾಡಿದ್ದ ಯೋಜನಾ ವೆಚ್ಚದಲ್ಲಿ, ಪುನರ್ವಿಮರ್ಶಿತ ಅಂಕಿಯಂತೆ ಈಗಾಗಲೇ ಕಳೆದ ವರ್ಷದ ಅಂದಾಜು ಯೋಜನಾ ವೆಚ್ಚದಲ್ಲಿ ಶೇ. ೧೯ರಷ್ಟು ಕಡಿಮೆಯಾಗಿದೆ. ಈ ವರ್ಷದ ಯೋಜನಾ ವೆಚ್ಚದಲ್ಲಿ ಹಾಗೆಯೇ ಮುಂದೆ ಕಡಿತ ಮಾಡುವುದಿಲ್ಲ ಎಂದೇನೂ ಖಾತ್ರಿಯಿಲ್ಲ. ವರ್ಷ ಪ್ರಾರಂಭದಲ್ಲಿ ಬಜೆಟ್ ಮಂಡಿಸುವುದು, ಆದರೆ ವರ್ಷಾಂತ್ಯದ ವೇಳೆಗೆ ಯೋಜನೆ, ಸಾಮಾಜಿಕ ಕ್ಷೇತ್ರಗಳು ಮುಂತಾದುವುಗಳೆಲ್ಲವುಗಳಲ್ಲೂ ಶೇ. ೧೫ರಿಂದ ೨೫ರವರೆಗೆ ಕಡಿತ ಮಾಡುವುದಾದರೆ ಬಜೆಟ್‌ಗೆ ಏನು ಮರ್ಯಾದೆ ಉಳಿಯುತ್ತದೆ ? ಈಗ ಈ ರೀತಿಯ ಕಡಿತ ರಕ್ಷಣಾ ಕ್ಷೇತ್ರವನ್ನು ಬಿಟ್ಟಿಲ್ಲ. ಇದಕ್ಕೆ ಮುಖ್ಯ ಕಾರಣ ಬಜೆಟ್ಟಿನ ಖರ್ಚಿಗೆ ತಕ್ಕಂತೆ ಸಂಪನ್ಮೂಲ ಸಂಗ್ರಹಿಸುವ ಪ್ರಯತ್ನಮಾಡದಿರುವುದು. ಇಷ್ಟೆಲ್ಲಾ ಹಣದ ಕೊರತೆ ಇರುವಾಗಲೂ ಈ ಬಜೆಟ್ಟಿನಲ್ಲೂ ಸುಮಾರು ೭೦,೦೦೦ ಕೋಟಿ ರೂ.ಗಳಷ್ಟು ತೆರಿಗೆ ವಿನಾಯ್ತಿ ಉದ್ಯಮಿಗಳಿಗೆ ಮುಂದುವರಿದಿದ್ದು, ಕೋಟ್ಯಾಧಿಪತಿಗಳು ನೀಡುವ ತೆರಿಗೆಯ ಮೇಲೆ ಶೇ. ೧೦ರಷ್ಟು ಸೆಸ್ ಹೆಚ್ಚಿಸಿರುವುದು ತಮಾಷೆಯಾಗಿ ಕಾಣುತ್ತದೆ. ಇದೇ ಕಾಲದಲ್ಲಿ ದೇಶದ ಆರ್ಥಿಕತೆ ಸತತ ಶೇ. ೫ ಅಥವಾ ಹೆಚ್ಚಿದಷ್ಟು ವಿಕಾಸವಾಗಿದ್ದು ತೆರಿಗೆ ನೀಡಬಲ್ಲ ಸಾಮರ್ಥ್ಯ ಹೆಚ್ಚಿದೆ. ಹಾಗೆಯೇ ಆರ್ಥಿಕ ಬಿಕ್ಕಟ್ಟಿನಡಿ ಸಿಕ್ಕು ನಡೆಯುತ್ತಿರುವ ಮಧ್ಯಮ ವರ್ಗಕ್ಕೆ ೨೦೦೦ ರೂಪಾಯಿ ಕರ ವಿನಾಯ್ತಿ ನೀಡಿರುವುದು ಯಾವ ಪ್ರಯೋಜನ ? ಇಡೀ ಬಜೆಟ್ಟಿನಲ್ಲಿ ಬೆಲೆ ಏರಿಕೆ ಮತ್ತು ಹಣದುಬ್ಬರಗಳ ಪರಿಹಾರ ಕುರಿತ ಯಾವುದೇ ನೀತಿ ಇಲ್ಲ. ಅವು ಬೆಳೆಯುತ್ತಿರುವ

ಆರ್ಥಿಕತೆಗೆ ಸಹಜವೆಂತಲೇ ಅಥವಾ ಅಂತರರಾಷ್ಟ್ರೀಯ ಆರ್ಥಿಕ ಬಿಕ್ಕಟ್ಟಿನ ಪರಿಣಾಮವೆಂತಲೇ ಸುಳ್ಳು ಹೇಳಲಾಗುತ್ತಿದೆ. ಮೊದಲಿಗೆ ಬೆಳವಣಿಗೆಯ ದರ ನಿರೀಕ್ಷೆಗಿಂತ ತೀರ ಕುಸಿದಿದೆ. ಅಷ್ಟೆಲ್ಲ ನೆರವು ಪಡೆದ ಖಾಸಗೀ ಕ್ಷೇತ್ರ ಸೊರಗಿದೆ. ಉದ್ಯೋಗವಂತೂ ಸೃಷ್ಟಿಯಾಗಲೇ ಇಲ್ಲ. ಅಂತರ ರಾಷ್ಟ್ರೀಯವಾಗಿ ಯೂರೋಪ್ ಮತ್ತು ಅಮೆರಿಕ, ಜಪಾನ್ ವ್ಯವಸ್ಥೆಗಳು ಬಜೆಟ್ ಕೊರತೆ ನೀಗಿಸಲು ಧಾವಿಸದೆ, ಹೂಡಿಕೆಯನ್ನು ಹೆಚ್ಚಿಸುವ ಮಾರ್ಗ ಹಿಡಿದಿವೆ. ಆದರೆ ನಮ್ಮ ಸರ್ಕಾರ ಎಂದೋ ಬೇರೆ ಸಂದರ್ಭದಲ್ಲಿ ಅಂತರ ರಾಷ್ಟ್ರೀಯ ಹಣಕಾಸು ಸಂಸ್ಥೆ ವಿಧಿಸಿದ್ದ ವಿತ್ತೀಯ ಕೊರತೆಯ ಮಿತಿಯನ್ನು ಸಾಧಿಸಲು ಅದೊಂದು ವ್ರತವೆಂಬಂತೆ ಹೆಣಗಾಡುತ್ತಿದೆ. ಇದಕ್ಕಾಗಿ ಯೋಜನಾ ವೆಚ್ಚವನ್ನು, ಸಾಮಾಜಿಕ ವೆಚ್ಚಗಳನ್ನು ಕಡಿತ ಮಾಡುತ್ತಿದೆ; ಆದರೆ ತೆರಿಗೆ ಸಂಗ್ರಹ ಹೆಚ್ಚಿಸುವುದಿಲ್ಲ, ತೆರಿಗೆಗಳ್ಳರ ಮೇಲೆ ಕ್ರಮ ಜಾರಿ ಮಾಡುವುದಿಲ್ಲ. ಕಳೆದ ಐದು ವರ್ಷಗಳಲ್ಲಿ ಖಾಸಗಿ ಕ್ಷೇತ್ರಕ್ಕೆ ೫ ಲಕ್ಷ ಕೋಟಿಗೂ ಹೆಚ್ಚು ಪ್ರತ್ಯಕ್ಷ, ಪರೋಕ್ಷ ನೆರವು ನೀಡಿ ತನ್ನ ಬಜೆಟ್ ಕೊರತೆ ಉಂಟುಮಾಡಿಕೊಂಡಿದೆ. ಆದರೆ ಖಾಸಗಿ ಕ್ಷೇತ್ರದಲ್ಲಿ ಈ ನೆರವುಗಳು ಹೂಡಿಕೆಯೂ ಆಗಲಿಲ್ಲ; ಉದ್ಯಮ ವಿಕಾಸವೂ ಆಗಲಿಲ್ಲ, ಉದ್ಯೋಗವೂ ಸೃಷ್ಟಿಯಾಗಲಿಲ್ಲ; ಕೊನೆಗೆ ರಫ್ತು ಹೆಚ್ಚಿಸಿ, ವಿದೇಶೀ ವಿನಿಮಯ ಸಂಗ್ರಹಿಸಿ, ಚಾಲ್ತಿ ಲೆಕ್ಕದ ಕೊರತೆಯನ್ನು ನೀಗಿಸಲು ಸಹಾಯವೂ ಮಾಡಲಿಲ್ಲ. ಖಾಸಗಿ ಕ್ಷೇತ್ರ, ಮಾರುಕಟ್ಟೆ ಇವನ್ನು ಸಾಧಿಸುತ್ತವೆ ಅಂತ ಸಾರ್ವಜನಿಕ ಕ್ಷೇತ್ರವನ್ನು ಸೊರಗಿಸಲಾಯ್ತು. ಅದೇ ಸಮಯ ಉತ್ಪಾದನೆ ಅಪಾರ ಕುಗ್ಗಿರುವಾಗ, ಪೆಟ್ರೋಲ್ ಡೀಸಲ್ ಬೆಲೆ, ಅನಿಲ ಬೆಲೆ ಏರಿಸಿ, ಯೋಜನಾ ವೆಚ್ಚ, ಸಾರ್ವಜನಿಕ ಕ್ಷೇತ್ರದ ವೆಚ್ಚ ಕಡಿತ ಮಾಡಿ, ನಮ್ಮ ಆರ್ಥಿಕತೆಯಲ್ಲಿ ತೀವ್ರ ಬಿಕ್ಕಟ್ಟು ಉಂಟು ಮಾಡಿವೆ. ಅದು ಹಣದುಬ್ಬರ ಮತ್ತು ಬೆಲೆ ಏರಿಕೆಯಾಗಿ, ನಿಯಂತ್ರಣಕ್ಕೆ ಸಿಗುತ್ತಿಲ್ಲ. ಈ ಸರ್ಕಾರದ ಆರ್ಥಿಕ ನೀತಿ - ಈ ಬಜೆಟ್ಟಿನಲ್ಲಿ ಬಜೆಟ್ಟು ಕೊರತೆ ಕಡಿಮೆ ಮಾಡುವ ವಿಷಯ ಬಿಟ್ಟು, ಜನಸಾಮಾನ್ಯರ ಕುರಿತ ಯಾವ ಕಾಳಜಿಯೂ ಇಲ್ಲ. ಅದರ ಆದ್ಯತೆ ಖಾಸಗಿ ಹಿತ.

ಹೌದು ಒಂದೆರಡು ಕಾಳಜಿಗಳನ್ನು ಹೊರಗೆಡವಿದ್ದಾರೆ. ಹೆಂಗಸರ ಪ್ರತ್ಯೇಕ ಬ್ಯಾಂಕ್ ಮಾಡುತ್ತಾರಂತೆ ! ಇದರ ಅವಶ್ಯಕತೆ ಇತ್ತೆ ? ಬೆಂಗಳೂರಿನ ಸ್ವಸ್ತಿಕ್ ವೃತ್ತದಲ್ಲಿ ಸಿಂಡಿಕೇಟ್ ಬ್ಯಾಂಕ್ ಸಂಪೂರ್ಣ ಮಹಿಳಾ ವ್ಯವಸ್ಥಿತ ಬ್ಯಾಂಕ್ ಶಾಖೆ ಮಾಡಿ ಹತ್ತಾರು ವರ್ಷಗಳೇ ಆದುವು. ಇರುವ ಸಾರ್ವಜನಿಕ ಬ್ಯಾಂಕುಗಳೇ ಇನ್ನು ಹೆಚ್ಚು ಸಂಖ್ಯೆಯಲ್ಲಿ ಮಹಿಳಾ ಶಾಖೆ ತೆರೆಯಬಹುದಿತ್ತು. ಬ್ಯಾಂಕಿನ ಶಾಖೆಗಳಲ್ಲಿ ನಮಗೆ ಬೇಕಾದದ್ದು; ಬ್ಯಾಂಕಿನ ಹಣಕಾಸು ನೀತಿಯನ್ನು ಮಹಿಳಾ ಸ್ನೇಹಿಯಾಗಿ ಪರಿವರ್ತಿಸುವುದು. 'ನಿರ್ಭಯ ನಿಧಿ' ಮುಂತಾದುವೆಲ್ಲಾ ಚುನಾವಣಾ ಘೋಷಣೆಗಳು. ಅವಕ್ಕೆ ನಿಗದಿಯಾದ ಹಣ ಕಳಪೆ ಹಾಗೂ ಅವೂ ಮುಂದಿನ ವರ್ಷದ ವೇಳೆಗೆ ಕಡಿತಕ್ಕೆ ಒಳಗಾಗಬಹುದು. ಚಪ್ಪಾಳೆ ಗಿಟ್ಟಿಸುವ ಅಲ್ಲೊಂದು ಇಲ್ಲೊಂದು ಕಾರ್ಯಕ್ರಮಗಳ ಪಟ್ಟಿ, ಒಟ್ಟಾರೆ ಅಭಿವೃದ್ಧಿಯ ದಿಶಾಸೂಚಕಗಳಲ್ಲ. ರಸ್ತೆ ಸಾರಿಗೆಯಂತ ಮೂಲಭೂತ ಸೌಕರ್ಯಗಳ ವೃತ್ತಿಗೆ, ರಸ್ತೆ ಮುಂತಾದವಕ್ಕೆ ಒಂದು ಟ್ರಿಲಿಯನ್ ಡಾಲರ್ ಬೇಕು, ಇದರ ಪ್ರಗತಿಯ ಮೇಲೆ ಹೂಡಿಕೆ ಮತ್ತು ಅಭಿವೃದ್ಧಿ ಅವಲಂಬಿಸಿದೆ ಎಂದು ಹಲವು ವರ್ಷಗಳಿಂದ ಡಂಗುರ ಹೊಡೆಯುವ ಈ ಸರ್ಕಾರ, ಇದರಲ್ಲಿ ಸರ್ಕಾರದ ಪಾತ್ರ ಏನೂ ಇಲ್ಲ ಅನ್ನುವಂತೆ ವರ್ತಿಸಿದೆ. ನಮ್ಮ ಖಾಸಗಿ ಕ್ಷೇತ್ರವಾಗಲೀ, ವಿದೇಶೀ ಹೂಡಿಕೆಯಾಗಲಿ ಬರುತ್ತಲೇ ಇಲ್ಲ. ಸಂಪಾದಿಸಿದ ಅಲ್ಪಸ್ವಲ್ಪ ವಿದೇಶೀ ವಿನಿಮಯವನ್ನು ನಮ್ಮ ಉದ್ಯಮಪತಿಗಳೂ ದೇಶದಲ್ಲಿ ಆಂತರಿಕವಾಗಿ ಏನೂ ಅವಕಾಶವೇ ಇಲ್ಲವೆನ್ನುವಂತೆ ವಿದೇಶದಲ್ಲಿ ಹೂಡಿಕೆ ಮಾಡುತ್ತಿದ್ದಾರೆ. ವಾರ್ಷಿಕ ಭಾರತ ಪಡೆಯುತ್ತಿರುವ ವಿದೇಶೀ ಹೂಡಿಕೆಗಿಂತ, ವಿದೇಶದಲ್ಲಿ ಹೂಡುವ ಹಣವೇ ಹೆಚ್ಚು (ವಾರ್ಷಿಕ ಸುಮಾರು ೭ ಬಿಲಿಯನ್ ಡಾಲರ್) ಮೂಲಭೂತ ಸೌಕರ್ಯ, ಶಿಕ್ಷಣ ಮತ್ತು ಆರೋಗ್ಯ ಕ್ಷೇತ್ರಗಳಲ್ಲಿ ಅಪಾರ ವಿಕಾಸವಾಗದೆ, ಆರ್ಥಿಕತೆ ಊರ್ಜಿತವಾಗುವುದಿಲ್ಲ. ಈ ಕ್ಷೇತ್ರದ ಹೂಡಿಕೆ ಸರ್ಕಾರದಿಂದಲೇ ಆಗಬೇಕೆಂದು ಬಂಡವಳಿಗ ರಾಷ್ಟ್ರಗಳೂ ಅರಿತಿವೆ. ಅವರನ್ನು ಎಲ್ಲದರಲ್ಲೂ ಅನುಸರಿಸುವ ತವಕಉಳ್ಳ ನಮ್ಮ ಆಡಳಿತ ವರ್ಗಕ್ಕೆ ಇದೇಕೆ ಕಾಣಿಸುವುದಿಲ್ಲ ? ಶಿಕ್ಷಣ ಕ್ಷೇತ್ರಕ್ಕೆ ನೀಡಿರುವ ಹಣ ಏನೇನೂ ಸಾಲದೆಂದು ಆ ಖಾತೆಯ ಮಂತ್ರಿಯೇ ಹೇಳಿದ್ದಾರೆ. ಇನ್ನು ಖಾಸಗೀಕರಣ ಮಾಡಹೊರಟಿರುವ ಆರೋಗ್ಯ ಕ್ಷೇತ್ರ ಆ ಸೇವೆ ಬಡವರಿಗೆ ದಕ್ಕದಂತೆ ಮಾಡುತ್ತಿದೆ. ಬಜೆಟ್ಟಿನಲ್ಲಿ ಸಾರ್ವಜನಿಕ ಕ್ಷೇತ್ರವನ್ನು, ಬಲಪಡಿಸುವ ಯಾವ ಸೂಚನೆಯೂ ಇಲ್ಲ. ನೀಡಿರುವ ಹಣ ಯಥಾಸ್ಥಿತಿ ಕಾಯಲು ಸಾಲದು. ಸಾರ್ವಜನಿಕ ಕ್ಷೇತ್ರವನ್ನು, ದೂರ ಸಂಚಾರದಂಥ ಲಾಭದಾಯಕಗಳನ್ನು ಬೇಕಂತಲೇ ಸೊರಗಿಸಿ, ಪುಡಿಕಾಸಿಗೆ ಮಾರಿ, ತನ್ನ ಬಜೆಟ್ ಕೊರತೆ ನೀಗಿಸುವ ಈ ನೀತಿಗೆ ಧಿಕ್ಕಾರ !

ನಿರೀಕ್ಷಿತ ಆದಾಯ ಕಳೆದ ಮೂರು ವರ್ಷವೂ ಕಡಿಮೆಯಾಗಿದೆ. ಹಾಗಿರುವಾಗ ಮುಂದಿನ ವರ್ಷ ಹೆಚ್ಚುತ್ತದೆ ಎಂದು ತೋರಿಸಿ, ಅದಕ್ಕನುಗುಣವಾಗಿ ಹಣ ಹಂಚಿಕೆ ಮಾಡಿರುವುದು ಎಷ್ಟು ಸರಿ ? ತೆರಿಗೆಯನ್ನು ಹೆಚ್ಚಿಸದೆ, ಆರ್ಥಿಕ ಅಭಿವೃದ್ಧಿ ದರ ಹೆಚ್ಚುತ್ತದೆ ಎಂದು ಭಾವಿಸಿ,

| | ೨೦೧೧-೧೨ ವಾಸ್ತವಿಕ | ೨೦೧೨-೧೩ ಬಜೆಟ್ ಅಂದಾಜು | ೨೦೧೨-೧೩ ಪರಿಷ್ಕೃತ ಅಂದಾಜು | ೨೦೧೩-೧೪ ಬಜೆಟ್ ಅಂದಾಜು |
|---|---|---|---|---|
| ತೆರಿಗೆ ಆದಾಯ | ೭೫೧೪೩೭ | ೯೩೫೬೮೫ | ೮೭೧೮೨೮ | ೧೦೫೬೩೩೧ |
| ಬಂಡವಾಳ ಆದಾಯ | ೫೫೨೯೨೮ | ೫೫೫೨೪೧ | ೫೫೮೯೯೮ | ೬೦೮೯೬೭ |
| ಒಟ್ಟು ಆದಾಯ | ೧೩೦೪೩೬೫ | ೧೪೯೦೯೨೫ | ೧೪೩೦೮೨೫ | ೧೬೬೫೨೯೭ |
| ಯೋಜನೇತರ ವೆಚ್ಚ | ೮೯೧೯೯೦ | ೯೬೯೯೦೦ | ೧೦೦೧೬೩೮ | ೧೧೦೯೯೭೫ |
| ಯೋಜನಾ ವೆಚ್ಚ | ೪೧೨೩೭೫ | ೫೨೧೦೨೫ | ೪೨೯೧೮೭ | ೫೫೫೩೨೨ |
| ಒಟ್ಟು ವೆಚ್ಚ | ೧೩೦೪೩೬೫ | ೧೪೯೦೯೨೫ | ೧೪೩೦೮೨೫ | ೧೬೬೫೨೯೭ |
| ಕಂದಾಯ ಕೊರತೆ | ೩೯೪೩೪೮ | ೩೫೦೪೨೪ | ೩೯೧೨೪೫ | ೩೭೯೮೩೮ |
| ವಿತ್ತೀಯ ಕೊರತೆ | ೫೧೫೯೯೦ | ೫೧೩೫೯೦ | ೫೨೦೯೨೫ | ೫೪೨೪೯೯ |
| ಮೂಲ ಕೊರತೆ | ೨೪೨೮೪೦ | ೧೯೩೮೩೧ | ೨೦೪೨೫೧ | ೧೭೧೮೧೪ |

ತನ್ಮೂಲಕ ಹೆಚ್ಚು ತೆರಿಗೆ ವಸೂಲಾಗುತ್ತದೆ ಎಂದು ಊಹಿಸುವುದು ಎಂಥ ಜಾಣ್ಮೆ? ಈ ಕೆಳಗಿನ ಬಜೆಟ್ ಮಾಹಿತಿ ನೋಟ ಇದನ್ನು ಸೂಚಿಸುತ್ತಿದೆ.

ಕಳೆದ ಮೂರು ತಿಂಗಳಿನಿಂದ ರೇಟಿಂಗ್ ಏಜೆನ್ಸಿಗಳು ಭಾರತದ ಆರ್ಥಿಕ ವಿಶ್ವಾಸಾರ್ಹತೆಯನ್ನು ಕೆಳಕ್ಕಿಳಿಸುವ ಬೆದರಿಕೆ ಹಾಕುತ್ತಲೇ ಇವೆ. ಅವು ವಾಣಿಜ್ಯಲೋಕಕ್ಕೆ ನೆರವಾಗುವ ಹಲವು ಸುಧಾರಣೆಗಳನ್ನು ಬಯಸುತ್ತವೆ ಹಾಗೂ ಯಾವುದು ಹೇಗೇ ಇರಲಿ ಬಜೆಟ್ ಕೊರತೆಯನ್ನು ಶೇ. ೩ರ ಒಳಗೆ ಇರುವಂತೆ ನಿಭಾಯಿಸಬೇಕು ಅನ್ನುತ್ತವೆ. ಕಾರ್ಮಿಕರ ಕಾನೂನು, ಭೂ ವಶೀಕರಣದ ಕಾನೂನು ಮುಂತಾದುವನ್ನು ವಾಣಿಜ್ಯ ಪರವಾಗಿ ಸಡಿಲಗೊಳಿಸಬೇಕು ಎನ್ನುವುದು ಸುಧಾರಣೆಯ ವಿಷಯ. ಈಗ ಇವನ್ನೆಲ್ಲ ಮಾಡುವ ಇಂಗಿತ ಈ ಬಜೆಟ್ಟಿನಲ್ಲಿ ನೀಡಿದ್ದು, ಸದ್ಯಕ್ಕೆ ರೇಟಿಂಗ್ ಏಜೆನ್ಸಿಗಳು ಶಾಭಾಸ್ ಹೇಳುತ್ತಿವೆ. ಹೂಡಿಕೆ ಮಾಡುವವರಿಗೆ ಹಲವಾರು ಅನುಕೂಲಗಳನ್ನು ಕಲ್ಪಿಸುವುದರ ಜೊತೆಗೆ ವಿದೇಶೀ ವಿನಿಮಯದ ಒಳಹರಿವಿಗೆ ಅನುಕೂಲವಾಗುವಂತೆ ಅವುಗಳ ಮೂಲವನ್ನು ಪ್ರಶ್ನಿಸದ ನೀತಿ ಜಾರಿಯಾಗಿದೆ. ಬೆಳವಣಿಗೆಯ ಹೆಚ್ಚಳ, ಉದ್ಯೋಗದ ಅಭಿವೃದ್ಧಿ ಮತ್ತು ಜನತೆಯ ಆದಾಯ ಹೆಚ್ಚಿಸುವುದು ಈ ಬಜೆಟ್ಟು ತನ್ನ ಕೆಲಸ ಅಲ್ಲ ಅನ್ನುವಂತೆ ವರ್ತಿಸಿದೆ. ಶ್ರೀಮಂತರ ಮೇಲಿನ ತೆರಿಗೆ ಮತ್ತು ೧೦ ಕೋಟಿಗೆ ಹೆಚ್ಚು ಆದಾಯದ ಕಂಪನಿಗಳ ಮೇಲೆ ಹೆಚ್ಚಿಸಿರುವ ಶೇ. ೧೦ ಸರ್ ಛಾರ್ಜ್ ಅಥವಾ ಐದು ಲಕ್ಷ ಆದಾಯದವರಿಗೆ ೨,೦೦೦/- ರೂ.ಗಳಷ್ಟು ತೆರಿಗೆ ರಿಯಾಯ್ತಿ ಇವು ಕೇವಲ ಒಂದು ವರ್ಷಕ್ಕಷ್ಟೆ ಅನ್ನುವಾಗ, ಹೆಚ್ಚುತ್ತಿರುವ ಸಂಪತ್ತಿನ ಕೇಂದ್ರೀಕರಣದತ್ತ ಈ ಬಜೆಟ್ಟಿಗೆ ಸ್ವಲ್ಪವೂ ಆತಂಕವಿದ್ದಂತಿಲ್ಲ. ಬಜೆಟ್ಟು ಕೊರತೆ ನೀಗಿಸುವುದರಲ್ಲೇ ಅರ್ಧ ಬಜೆಟ್ ಭಾಷಣ ವ್ಯರ್ಥವಾಗಿದ್ದೂ, ಅದು ಹೂಡಿಕೆಯ ಮೇಲೆ ಬೀರುವ ಋಣಾತ್ಮಕ ಪರಿಣಾಮವನ್ನು ಲೆಕ್ಕಿಸಿಯೇ ಇಲ್ಲ. ಷೇರುಪೇಟೆ ಕೇಳಲು ಇಚ್ಛಿಸುವ ಸಿಹಿ ಮಾತುಗಳನ್ನು ಅವರ ಭಾಷಣ ಸುರಿಸಿದೆಯಷ್ಟೆ. ಬರುವ ದಿನಗಳಲ್ಲಿ ಈ ಬಜೆಟ್ಟಿನ ಬಗ್ಗೆ ತಲೆ ಕೆಡಿಸಿಕೊಳ್ಳುವುದೇ ಬೇಡ ಅಂತ ಅನ್ನಿಸುತ್ತೆ. ಹರೀಶ ಖಡೆ ನಮ್ಮ ನಾಡಿನ ಅತ್ಯಂತ ಪ್ರಜ್ಞಾವಂತ ಪತ್ರಕರ್ತ. ಅವರು ಬಜೆಟ್ಟಿಗೆ ಮುನ್ನಾದಿನ ಬರೆದ ಲೇಖನದಲ್ಲಿ ''ಕಾರ್ಪೊರೇಟ್‌ಗಳು ಬೊಗಳೆಗೆ ಇನ್ನಾದರೂ ಮಣಿಯದಿರಿ'' ಅಂತ ಹೇಳಿದರು. ಸರ್ಕಾರ ಉದ್ಯಮಿಗಳು ಅದನ್ನು ನಿಯಂತ್ರಿಸುವುದನ್ನು ತಡೆಯಬೇಕು ಎಂದರು. ಈ ಸಂಬಂಧ ಸ್ವಲ್ಪವೂ ಅನೈತಿಕವಾಗ ಬಾರದು ಎಂದಿದ್ದರು. ಅವರು ಹೇಳಿದ ಮತ್ತೆ ಕೆಲವು ವಿಷಯಗಳು ಗಮನಾರ್ಹ. ಬಜೆಟ್ ಅನ್ನುವುದು ಆಳುವ ಪಕ್ಷದ ಸಿದ್ಧಾಂತದ ಒಲವು ಪ್ರಕಟಿಸಬೇಕು. ಅದರಲ್ಲಿ ಸಾರ್ವಜನಿಕ ನೈತಿಕತೆಗೆ ಅವಕಾಶ ನೀಡಬೇಕು. ಸರ್ಕಾರ ವಿಧಿಸುವ ತೆರಿಗೆಗಳನ್ನು ಜನ ಸಂತೋಷದಿಂದ ನೀಡಲು ಮುಂದಾಗುವಂತೆ ಇರಬೇಕು. ಅದು ಪ್ರಜಾಪ್ರಭುತ್ವ ವಿಧಿಸುವ ಅತ್ಯುನ್ನತ ಹೊಣೆಗಾರಿಕೆ. ಅರ್ಥಶಾಸ್ತ್ರಿಯೊಬ್ಬ ಹೇಳುತ್ತಾನೆ : ಬಂಡವಾಳವನ್ನು ಬೆಂಬಲಿಸಿ; ಬಂಡವಳಿಗನನ್ನಲ್ಲ. ಆದರೆ ನಮ್ಮ ನಾಯಕರುಗಳು ತಮತಮಗೆ ಬೇಕಾದ ಉದ್ಯಮಪತಿಯನ್ನು ಬೆಂಬಲಿಸುವುದನ್ನೇ ನೀತಿಯಾಗಿಸಿದ್ದಾರೆ. ಈ ಬಜೆಟ್ಟೂ ಇದೇ ದಾರಿಯನ್ನು ತುಳಿದಿದೆ. ಮುಂಬಯಿ ವಾಣಿಜ್ಯಲೋಕದ ಬೆಂಬಲ ಇದ್ದರೆ ಸಾಕು ತಾವು ಪುನಃ ಚುನಾವಣೆ ಗೆದ್ದು ಬರುತ್ತೇವೆ ಎಂದು ಯುಪಿಎ-೨ ಭಾವಿಸಿದಂತಿದೆ. ಈ ಸರ್ಕಾರ ಜನರಿಂದ ತುಂಬ ದೂರ ಸಾಗಿದೆ.

**ಕೆ. ಎಸ್. ಪಾರ್ಥಸಾರಥಿ**
೨೪೭, 'ವನಸಿರಿ', ಟೆಲಿಕಾಂ ಬಡಾವಣೆ, ವಿದ್ಯಾನಗರ, ಬೆಟ್ಟಹಲಸೂರು ಅಂಚೆ, ಬೆಂಗಳೂರು - ೫೬೨ ೧೫೭

# ಭಾರತೀಯ ಬ್ಯಾಂಕಿಂಗ್ ಪದ್ಧತಿ



ಪುರಾತನ ಕಾಲದಲ್ಲಿಯೂ ಒಂದಲ್ಲ ಒಂದು ರೀತಿಯಲ್ಲಿ ಬ್ಯಾಂಕಿಂಗ್ ವ್ಯವಸ್ಥೆ ಅಸ್ತಿತ್ವದಲ್ಲಿದ್ದಿತು. ಮನು ಹಾಗೂ ಕೌಟಿಲ್ಯರ ಬರವಣಿಗೆಗಳಲ್ಲಿ ಹಾಗೂ ಯೇಸು ಕ್ರಿಸ್ತನ ಉಪದೇಶಗಳಲ್ಲಿ ಬ್ಯಾಂಕಿಂಗ್ ಪದ್ಧತಿ ಉಲ್ಲೇಖಿಸಲಾಗಿದೆ. ಆಧುನಿಕ ಬ್ಯಾಂಕಿಂಗ್ ಪದ್ಧತಿಯು ಔದ್ಯೋಗಿಕ ಕ್ರಾಂತಿಯ ನಂತರ ಅಸ್ತಿತ್ವಕ್ಕೆ ಬಂದಿತು. ಔದ್ಯೋಗಿಕ ಕ್ರಾಂತಿಯ ನಂತರ ಬೃಹತ್ ವ್ಯವಹಾರ ಸಂಘಟನೆಗಳು ಅಸ್ತಿತ್ವಕ್ಕೆ ಬಂದವು. ಈ ಪದ್ಧತಿಯ ಸಂಘಟನೆಯು ಸಣ್ಣ ಆದಾಯವಿರುವ ಜನರಿಗೆ, ದೊಡ್ಡ ಕೈಗಾರಿಕೆ ಮತ್ತು ಉದ್ಯಮಗಳ ಷೇರುದಾರರಾಗಲು ಪ್ರೋತ್ಸಾಹ ನೀಡಿತು. ಆದಾಗ್ಯೂ ಕೆಲವು ವರ್ಗದ ಜನರು ಕಂಪನಿಯ ಶೇರುಗಳಲ್ಲಿ ತಮ್ಮ ಹಣವನ್ನು ತೊಡಗಿಸಲು ಸಿದ್ಧವಿರಲಿಲ್ಲ. ಆದರೆ, ಮರುಪಾವತಿಯ ಭರವಸೆಯೊಂದಿಗೆ ತಮ್ಮ ಉಳಿತಾಯದ ಹಣದ ಮೇಲೆ ಸ್ವಲ್ಪ ಬಡ್ಡಿಯನ್ನು ನೀಡಿದಲ್ಲಿ ಅವರು ತಮ್ಮ ಹಣ ತೊಡಗಿಸಲು ಆಸಕ್ತರಾಗಿದ್ದರು. ಆದ್ದರಿಂದ ಸಹಜವಾಗಿಯೇ ಅವರಿಗೆ ಒಪ್ಪಿಗೆಯಾದ ಷರತ್ತುಗಳೊಂದಿಗೆ ಹಣವನ್ನು ಸಂಗ್ರಹಿಸಿ ಅದನ್ನು ಅವಶ್ಯವಿರುವವರಿಗೆ ಒದಗಿಸುವ ಆರ್ಥಿಕ ಸಂಸ್ಥೆಗಳ ಸ್ಥಾಪನೆಯ ಅವಶ್ಯಕತೆ ಉಂಟಾಯಿತು. ಅಂತೆಯೇ ಕೂಡು ಬಂಡವಾಳ ಬ್ಯಾಂಕುಗಳೆಂಬ ಬೃಹತ್ ಸಂಖ್ಯೆಯ ಆರ್ಥಿಕ ಸಂಸ್ಥೆಗಳು ಔದ್ಯೋಗಿಕ ಕ್ರಾಂತಿಯ ನಂತರ ಸ್ಥಾಪನೆಯಾದವು. ಹೀಗಾಗಿ ಬ್ಯಾಂಕುಗಳು ಇತ್ತೀಚಿನ ದಿನಗಳಲ್ಲಿ ಹೇರಳವಾಗಿ ಬೆಳೆದಿವೆ.

ಬ್ಯಾಂಕ್ ಎಂಬ ವಿದೇಶಿ ಪದದ ಮೂಲ ಅರ್ಥವು ರಾಶಿ ಎಂಬುದಾಗಿದೆ. ಇಟಲಿ ಭಾಷೆಯಲ್ಲಿ ಬ್ಯಾಂಕೋ ಎಂಬ ಶಬ್ದಕ್ಕೆ ಹಣದ ಕೂಡಿ ಬೀಳುವಿಕೆ ಎಂಬುದಾಗಿದೆ. ಫ್ರೆಂಚ್ ಭಾಷೆಯಲ್ಲಿ ಬ್ಯಾಂಕೋ ಎಂಬುದರ ಅರ್ಥ ಸಂಗ್ರಹಣೆ ಎಂಬುದಾಗಿದೆ. ಸಾಮಾನ್ಯವಾದ ಅರ್ಥದಲ್ಲಿ ಹಣದ ಕೊಡ-ಕೊಳ್ಳುವ ವ್ಯವಹಾರವನ್ನು ಮಾಡುವ ಸಂಸ್ಥೆಗೆ ಬ್ಯಾಂಕ್ ಎಂದು ಹೆಸರಿಸಲಾಗಿದೆ.

ಮೊಟ್ಟ ಮೊದಲ ಬ್ಯಾಂಕ್ ಇಟಲಿಯಲ್ಲಿ ಸ್ಥಾಪನೆಯಾಯಿತು. ಅದೇ ಮಾದರಿಯ ಮೇಲೆ ಬೇರೆ ದೇಶಗಳಲ್ಲಿಯೂ ಬ್ಯಾಂಕುಗಳು ತೆರೆಯಲ್ಪಟ್ಟವು. ೧೩ ಹಾಗೂ ೧೪ನೆಯ ಶತಮಾನಗಳಲ್ಲಿ ಹಣಕಾಸಿನ ವ್ಯವಹಾರ ಮತ್ತು ವ್ಯಾಪಾರಗಳಲ್ಲಿ ಚೆನ್ನಾಗಿ ನುರಿತು ಯೂರೋಪಿನ ಮುಖ್ಯ ಪಟ್ಟಣಗಳಲ್ಲಿ ತಮ್ಮ ಉದ್ಯೋಗ ಮೇಲ್ಮೈಯನ್ನು ಸ್ಥಾಪಿಸಿದರು. ಈ ವ್ಯಾಪಾರಿಗಳು ಕಂದಾಯದ ಭದ್ರತೆಯ ಮೇಲೆ ಬೇರೆ ದೇಶದ ಅರಸರಿಗೆ ಸಾಲ ನೀಡುತ್ತಿದ್ದರು.

ಇಂಗ್ಲೆಂಡ್ ದೇಶದಲ್ಲಿ ವ್ಯಾಪಾರಿಗಳು ತಮ್ಮ ಹಣವನ್ನು ಸುರಕ್ಷತೆಗಾಗಿ ದೊರೆಯ ಟಂಕಸಾಲೆಯಲ್ಲಿ ಇಡುತ್ತಿದ್ದರು. ಒಮ್ಮೆ ದೊರೆಯು ವ್ಯಾಪಾರಿಗಳ ಹಣವನ್ನು ವಶಪಡಿಸಿಕೊಂಡು ಹಣವನ್ನು ಬಹಳ ಕಾಲದ ನಂತರ ಹಿಂತಿರುಗಿಸಿದನು. ಹೀಗಾಗಿ ವ್ಯಾಪಾರಿಗಳಿಗೆ ದೊರೆಯ ಮೇಲೆ ವಿಶ್ವಾಸ ಸಡಿಲವಾಗಿ ಅವರು ಮುಂದೆ ತಮ್ಮ ಹಣವನ್ನು ಚಿನಿವಾಲರಲ್ಲಿ ಇಡಲಾರಂಭಿಸಿದರು. ಯಾಕೆಂದರೆ ಚಿನಿವಾಲರು ಭದ್ರವಾದ ತಿಜೋರಿಗಳನ್ನು ತಮ್ಮ ಚಿನ್ನಾಭರಣಗಳಿಗಾಗಿ ಇಟ್ಟುಕೊಂಡಿದ್ದರು. ಆದ್ದರಿಂದ ಜನತೆ ತಮ್ಮ ಉಳಿಕೆಯ ಹಣ ಹಾಗೂ ಆಭರಣಗಳನ್ನು ಚಿನಿವಾಲರಲ್ಲಿ ಇಡುವದನ್ನು ಮುಂದುವರಿಸಿದರು. ಚಿನಿವಾಲರು ತಮ್ಮ ಸೇವೆಗಾಗಿ ಶುಲ್ಕವನ್ನು ಗ್ರಾಹಕರಿಂದ ವಸೂಲು ಮಾಡುತ್ತಿದ್ದರು.

ಹೀಗೆ ಚಿನಿವಾಲರು ಅಥವಾ ಅಕ್ಕಸಾಲಿಗರು ಅನುಭವದಿಂದ ತಮ್ಮಲ್ಲಿ ಸುರಕ್ಷತೆಗಾಗಿ ಇಟ್ಟ ಎಲ್ಲಾ ಹಣವನ್ನು ಜನರು ಏಕಕಾಲಕ್ಕೆ ಮರಳಿ ಪಡೆಯುವುದಿಲ್ಲ ಮತ್ತು ಒಟ್ಟು ಹಣದ ಕೆಲ ಭಾಗವನ್ನು ಮಾತ್ರ ಪಡೆಯುತ್ತಾರೆ ಎಂಬುದನ್ನು ಕಂಡುಕೊಂಡರು. ಆಗ ಅವರಿಗೆ ತಮ್ಮಲ್ಲಿ ಉಳಿಯುತ್ತಿದ್ದ ಹೆಚ್ಚಿನ ಹಣದ ಉಪಯೋಗ ಏಕೆ ಪಡೆಯಬಾರದು ಎಂದು ತೋರಿತು. ಅದೂ ಅಲ್ಲದೆ ಅಕ್ಕಸಾಲಿಗರನ್ನು ಜನರು ಪದೇ ಪದೇ ಸಾಲ ಕೇಳುತ್ತಿದ್ದರು. ಹೀಗಾಗಿ ಅಕ್ಕಸಾಲಿಗರು ತಮ್ಮಲ್ಲಿ ಸುರಕ್ಷತೆಗಾಗಿ ಇಟ್ಟ ಹಣದ ಭಾಗಾಂಶವನ್ನು ಬಡ್ಡಿದರದ ಮೇಲೆ ಸಾಲ ನೀಡಲು ಪ್ರಾರಂಭಿಸಿದರು. ಅದರ ಜೊತೆಗೆ ಚಿನಿವಾಲರು ಜನರು ತಮ್ಮಲ್ಲಿ ಠೇವಣಿ ಇಟ್ಟ ಬಗ್ಗೆ ರಸೀತಿಗಳನ್ನು ಕೊಡುತ್ತಿದ್ದರು. ಮುಂದೆ ಜನರು ಚಿನಿವಾಲರ ಮೇಲಿನ ವಿಶ್ವಾಸದಿಂದ ಈ ರಸೀತಿಗಳನ್ನು ಹಣದಂತೆ ಸ್ವೀಕರಿಸಲು ಪ್ರಾರಂಭಿಸಿದರು. ಈ ಪದ್ಧತಿಯು ಬ್ಯಾಂಕ್ ನೋಟುಗಳ ಉಗಮಕ್ಕೆ ಕಾರಣವಾಯಿತು. ಜನತೆ ಠೇವಣಿ ಇಟ್ಟ ಹಣವನ್ನು ಲಿಖಿತ ಪತ್ರದ ಮೂಲಕ ಮರಳಿ ಪಡೆಯತೊಡಗಿದಾಗ ಚೆಕ್ಕುಗಳ ಪದ್ಧತಿ ಬೆಳೆಯಿತು. ಈ ರೀತಿಯಾಗಿ ಬ್ಯಾಂಕುಗಳು ಸ್ಥಾಪನೆಯಾಗಿ ಅನೇಕ ಬದಲಾವಣೆಗಳಾದ ನಂತರ ಈಗಿನ ಆಧುನಿಕ ಬ್ಯಾಂಕಿಂಗ್ ಪದ್ಧತಿ ಬೆಳೆದು ಬಂದಿತು. ಹೀಗಾಗಿ ಆಧುನಿಕ ಬ್ಯಾಂಕಿಂಗ್ ಪದ್ಧತಿಯ ತಳಹದಿಯನ್ನು ಚಿನಿವಾಲರು ಹಾಕಿದರೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

ಬ್ಯಾಂಕಿಂಗ್ ಪದ್ಧತಿಯು ಭಾರತಕ್ಕೇನೂ ಹೊಸದಲ್ಲ. ಹಿಂದಿನ ದಿನಗಳಲ್ಲಿ ಶ್ರೀಮಂತ ಜಮೀನುದಾರರು ರೈತರು ಅಥವಾ ಇತರರಿಗೆ ಹಣವನ್ನು ಸಾಲವಾಗಿ ನೀಡುತ್ತಿದ್ದರು. ಆದರೆ ಸಾಲದ ಹಣದ ಮೇಲೆ ಹೆಚ್ಚಿನ ಬಡ್ಡಿ ನೀಡಬೇಕಾಗಿತ್ತು. ಸಾಲದ ಹಣವನ್ನು ವಾಪಸ್ಸು ಪಡೆಯುವ ವಿಷಯದಲ್ಲಿದ್ದ ಅನಿಶ್ಚಿತತೆಯೇ ಹೆಚ್ಚಿನ ಬಡ್ಡಿದರಕ್ಕೆ ಕಾರಣವಾಗಿತ್ತು. ಚಾಣಕ್ಯನ ಅರ್ಥಶಾಸ್ತ್ರದಲ್ಲಿ ಬಡ್ಡಿ ದರದ ವಿಷಯದಲ್ಲಿ ಅನುಸರಿಸಬೇಕಾದ ನೀತಿ ನಿಬಂಧನೆಗಳನ್ನು ಕುರಿತು ಹೇಳಲಾಗಿದೆ. ಅತ್ಯಂತ ಪ್ರಾಚೀನವಾದ ಮನು ಧರ್ಮಶಾಸ್ತ್ರದಲ್ಲಿ ಮನು ಹಣವನ್ನು ಇತರರಲ್ಲಿ ಸಂಗ್ರಹಿಸುವ ವಿಷಯವನ್ನು ಈ ರೀತಿ ಹೇಳಿದ್ದಾನೆ. ''ಒಬ್ಬ ಬುದ್ಧಿವಂತನಾದವನು ಸತ್ಕುಲದಲ್ಲಿ ಜನಿಸಿರುವ, ಗುಣವಂತನಾದ, ಸಾರಾಸಾರ ವಿಚಾರಗಳನ್ನರಿತ ಮತ್ತು ಶ್ರೀಮಂತರೂ, ಗೌರವಸ್ಥರೂ ಆದ ಅನೇಕ ಸಂಬಂಧಿಗಳಿರುವಂತಹವನೊಬ್ಬನ ಬಳಿ ತನ್ನ ಹಣವನ್ನು ಠೇವಣಿಯಾಗಿಡುವನು.'' (ಇದು 'ಮನು'ವಿನ ವರ್ಗದೃಷ್ಟಿಕೋನ ! - ಸಂ.) ಹೀಗೆ ಹಣ ಸ್ವೀಕರಿಸುವುದು ಹಾಗೂ ಸಾಲ ಕೊಡುವುದು ನಮ್ಮ ದೇಶದಲ್ಲಿ ಹಿಂದಿನಿಂದಲೂ ರೂಢಿಯಲ್ಲಿದ್ದವು ಎಂಬುದು ಪ್ರಾಚೀನ ಗ್ರಂಥಗಳಿಂದ ತಿಳಿಯುವುದು. ಒತ್ತೆ ಇಟ್ಟ ಆಭರಣಗಳ ಮೇಲೆ ಸಾಲಕೊಡುವುದು ರೂಢಿಯಲ್ಲಿತ್ತು.

ಬ್ಯಾಂಕುಗಳು ಭಾರತದಲ್ಲಿ ಸ್ಥಾಪನೆಯಾಗುವವರೆಗೂ ವ್ಯಾಪಾರಕ್ಕೆ ಬೇಕಾಗುವ ಹಣವನ್ನು ಸ್ಥಳೀಯ ಜಮೀನುದಾರರು, ಉತ್ತರದ ಮಾರ್ವಾಡಿಗಳು, ಬನಿಯಾಗಳು, ವೈಶ್ಯರು ಮತ್ತು ಪಾರ್ಸಿಗಳು ಒದಗಿಸುತ್ತಿದ್ದರು. ಬ್ಯಾಂಕುಗಳ ಸ್ಥಾಪನೆಯಾಗುವ ಮುನ್ನ ಸಾಹುಕಾರರ ಪ್ರಭಾವವೇ ಅಧಿಕವಾಗಿದ್ದಿತು. ಈಸ್ಟ್ ಇಂಡಿಯಾ ಕಂಪನಿ ದಿನೇ ದಿನೇ ವೃದ್ಧಿಸುತ್ತಿರುವ ವ್ಯಾಪಾರಕ್ಕೆ ಹಣದ ಪೂರೈಕೆ ಸಾಕಾಗಲಿಲ್ಲವಾದ್ದರಿಂದ ಅನೇಕ ವಿದೇಶಿ ಬ್ಯಾಂಕುಗಳು ಕಲ್ಕತ್ತಾದಲ್ಲಿ ಪ್ರಾರಂಭಗೊಂಡವು. ಅವುಗಳ ಹಣದ ಲೇವಾದೇವಿಯೊಂದಿಗೆ ಉಡುಪುಗಳು, ಗಾಜು, ಮದ್ಯ, ಇವುಗಳ ವಹಿವಾಟನ್ನು ತೂಗಿಸಿಕೊಂಡು ಹೋಗುತ್ತಿದ್ದವು.

ಬ್ಯಾಂಕುಗಳ ಮೇಲೆ ಸಾಮಾಜಿಕ ನಿಯಂತ್ರಣವನ್ನು ಸರಿಸಿದ ಉದ್ದೇಶಗಳ ಸಾಧನೆಯನ್ನು ತ್ವರಿತಗೊಳಿಸಲು ಭಾರತ ಸರಕಾರ ೧೯೬೯ರಲ್ಲಿ ೧೪ ಬ್ಯಾಂಕುಗಳನ್ನು ಹಾಗೂ ೧೯೮೦ರಲ್ಲಿ ೬ ಬ್ಯಾಂಕುಗಳನ್ನು ರಾಷ್ಟ್ರೀಕರಣಗೊಳಿಸಲಾಯಿತು. ಯಾಕೆಂದರೆ ಮೊದಲನೆಯ ಮತ್ತು ಎರಡನೆಯ ಮಹಾಯುದ್ಧದ ನಂತರ ಬ್ಯಾಂಕುಗಳ ಬೆಳವಣಿಗೆ ತೀವ್ರತರವಾಗಿತ್ತು. ಆದರೆ ಅನೇಕ ದೋಷಗಳನ್ನು ಒಳಗೊಂಡಿದ್ದವು ಹಾಗೂ ಬ್ಯಾಂಕುಗಳ ದಿವಾಳಿತನ ಅಧಿಕವಾಗಿದ್ದಿತು. ಈ ಎಲ್ಲಾ ಕೊರತೆಗಳನ್ನು ನಿವಾರಿಸಲು ಬ್ಯಾಂಕುಗಳು ಸರಿಯಾಗಿ ಕಾರ್ಯನಿರ್ವಹಿಸುವಂತೆ ಮಾಡಲು ಹಾಗೂ ಠೇವಣಿದಾರರ ಹಿತಾಸಕ್ತಿಗಳನ್ನು ಸಂರಕ್ಷಿಸುವ ದೃಷ್ಟಿಯಿಂದ ಬ್ಯಾಂಕುಗಳನ್ನು ರಾಷ್ಟ್ರೀಕರಣಗೊಳಿಸಲಾಯಿತು.

ಬ್ಯಾಂಕುಗಳ ರಾಷ್ಟ್ರೀಕರಣದಿಂದ ದೇಶದ ಸಮಸ್ಯೆಗಳೆಲ್ಲ ದೂರವಾಗಿ ಅಭಿವೃದ್ಧಿ ಸಾಧಿಸುವುದೆಂಬ ಮಹತ್ವಾಕಾಂಕ್ಷೆಯ ಅಗತ್ಯವಿಲ್ಲ. ಆದರೆ ಲಾಭವೇ ಮುಖ್ಯವೆಂದು ಪರಿಗಣಿಸದೆ, ದಕ್ಷತೆ, ಸೇವೆಗಳಿಗೆ ಮಾನ್ಯತೆ ನೀಡಿ ಬ್ಯಾಂಕಿಂಗ್ ಉದ್ಯಮವನ್ನು ದೇಶಾದ್ಯಂತ ವಿಸ್ತರಿಸಿ ಕ್ರಮೇಣ ಅಭಿವೃದ್ಧಿ ಸಾಧಿಸುವುದೇ ರಾಷ್ಟ್ರೀಕರಣದ ಉದ್ದೇಶ. ದೇಶದ ನಾಗರಿಕರಲ್ಲಿರುವ ಉಳಿತಾಯದ ಹಣವನ್ನು ಠೇವಣಿಗಳ ರೂಪದಲ್ಲಿ ಸಂಗ್ರಹಿಸಿ, ಅದನ್ನು ಅಭಿವೃದ್ಧಿ ಕಾರ್ಯಗಳಿಗೆ ಒದಗುವಂತೆ ಮಾಡುವುದರಲ್ಲಿ ಬ್ಯಾಂಕುಗಳು ಮಹತ್ತರ ಪಾತ್ರ ನಿರ್ವಹಿಸುತ್ತಲಿವೆ. ಆಗ ರಾಷ್ಟ್ರೀಕರಣದ ಕ್ರಮ ಹೆಚ್ಚು ಸಾರ್ಥಕವಾಗುತ್ತದೆ.

**ಡಾ|| ಪಿ. ಕೆ. ಕುಲಕರ್ಣಿ**
ಅಸಿಸ್ಟೆಂಟ್ ಪ್ರೊಫೆಸರ್ ಆಫ್ ಕಾಮರ್ಸ್, ಗವರ್ನಮೆಂಟ್ ಫಸ್ಟ್ ಗ್ರೇಡ್ ಕಾಲೇಜ್, ಶಹಾಪುರ - ೫೮೫ ೨೨೩, ಯಾದಗಿರಿ ಜಿಲ್ಲೆ



## ವೈದೇಹಿ

*ಸ. ಉಷಾ*

**ಪುಟ : ೯೨**

**ಬೆಲೆ : ರೂ. ೬೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

*ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಕನ್ನಡ ಸಾಹಿತಿಗಳಲ್ಲಿ ಇಬ್ಬರು ಮಾತ್ರ ಮಹಿಳೆಯರು. ಅವರಲ್ಲೊಬ್ಬರು ಶ್ರೀಮತಿ ವೈದೇಹಿ. ಬದುಕನ್ನು – ಅದರಲ್ಲೂ ಸ್ತ್ರೀಯ ಪಾಲಿಗೆ ಬಂದ ಬದುಕನ್ನು ವಿಶೇಷವಾಗಿ ಅವಲೋಕಿಸಿ ಅದರಲ್ಲೇನಿದೆ ಎಂದು ಬಗೆದು ನೋಡುತ್ತ ಅಲ್ಲಿ ಕಂಡ ಸತ್ಯವನ್ನು ಬರಹವಾಗಿ ದಾಖಲಿಸಿದವರು. ಗೃಹಿಣಿ-ತಾಯಿ-ಸೋದರಿ-ಮಡದಿ-ಮಗಳು ಮುಂತಾಗಿ ವಿವಿಧ ಹಂತಗಳಲ್ಲಿನ ಜವಾಬ್ದಾರಿ ನಿರ್ವಹಿಸುವ ಆಕೆಯ ಸ್ಥಾನಮಾನದಲ್ಲಿ ಕಂಡುಬರುವ ಕೊರತೆಯೇನು ? ಅದಕ್ಕೆ ಆಕೆಯೂ ಎಷ್ಟರಮಟ್ಟಿಗೆ ಕಾರಣಳು ? ಇದನ್ನು ನೈಜ ಪಾತ್ರ ಚಿತ್ರಣದ ಮೂಲಕ ನಿರೂಪಿಸುವುದು ಇವರ ವೈಶಿಷ್ಟ್ಯ. ಇವರ ಕಥೆ ಓದುತ್ತಲೋ, ಕವನ ಹಾಡುತ್ತಲೋ ಅಲ್ಲಿ ಹುದುಗಿದ 'ಹಾಲಿನ ಜತೆಗಿರುವ ಬೆಣ್ಣೆ'ಯಂತಹ ತಿರುಳನ್ನು ಮನಗಾಣಬಹುದು. ಸ್ತ್ರೀಗೆ ಸ್ವಾತಂತ್ರ್ಯ - ಗೌರವ ಬೇಕು ನಿಜ; ಹಾಗೆಂದು ವೈದೇಹಿ ಸ್ತ್ರೀವಾದವೆಂಬ ಮಡುವಿನಲ್ಲಿ ವಿಪರೀತ ಆಳಕ್ಕಿಳಿದವರಲ್ಲ – ಹಟಹಿಡಿದು ಅದರ ಬೆನ್ನು ಹತ್ತಿದವರೂ ಅಲ್ಲ. ಲಯ ತಪ್ಪದೆ ಎಚ್ಚರವಾಗಿ ನಡೆದುಬಂದವರು. ಒಟ್ಟಿನಲ್ಲಿ ಈ ಕೃತಿಯ ಲೇಖಕಿ ಶ್ರೀಮತಿ ಸ. ಉಷಾ ಅಂದಂತೆ ''ಸೂಕ್ಷ್ಮಮನಸ್ಸಿನ ಲೇಖಕಿ ಬದುಕು ತನಗೆ ಒದಗಿಸಿದ ವರ್ಣ ಪಟ್ಟಿಕೆಯ ಎಲ್ಲ ಬಣ್ಣಗಳು ಸಾಹಿತ್ಯದಲ್ಲಿ ಪ್ರತಿಫಲನಗೊಳ್ಳುವಂತೆ ಬರೆದಿದ್ದಾರೆ'' ಎಂಬ ಮಾತು ವೈದೇಹಿ ಸಾಹಿತ್ಯದಲ್ಲಿ ನೂರಕ್ಕೆ ನೂರು ಸತ್ಯ. ನವಕರ್ನಾಟಕ ಹೊರತಂದಿರುವ ಸಾಹಿತ್ಯ ಸಂಪದ ಮಾಲೆಯಲ್ಲಿ ಸೇರ್ಪಡೆಗೊಂಡ ಈ ಪುಸ್ತಕದಲ್ಲಿ ವೈದೇಹಿ ರಚಿಸಿದ ಸಾಹಿತ್ಯದ ಸಾರಾಂಶ – ಆಕೆಯ ಬದುಕಿನ ವಿವರಗಳು ಲಭ್ಯವಿವೆ.*

## ಭೂಮಿಯಷ್ಟು ಬದುಕು (ಮಲಯಾಳಂ ಸಣ್ಣ ಕಥೆಗಳು)

*ಅರ್ಷಾದ್ ಬತೇರಿ; ಕನ್ನಡಕ್ಕೆ : ಡಾ|| ಪಾರ್ವತಿ ಜಿ. ಐತಾಳ್*

**ಪುಟ : ೧೦೪** **ಬೆಲೆ : ರೂ. ೬೫**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೯೫, ಬೆಂಗಳೂರು - ೫೬೦ ೦೦೧

*ವಿಶಿಷ್ಟವಾದ ಇಲ್ಲಿನ ಕತೆಗಳು ಮನುಷ್ಯನ ಆಳ ಮನಸ್ಸಿನೊಳಗಿನ ನಿಜದ ದನಿಗಳನ್ನು ಹಿಡಿದಿಟ್ಟುಕೊಂಡ ರೂಪಕಾತ್ಮಕ ಬಯಕೆಗಳು. ಬದುಕಿನಲ್ಲಿ ಕೈಮೀರಿದ ಘಟನೆಗಳು ನಡೆದು ತಲ್ಲಣಗೊಂಡಾಗ ಮನಸ್ಸು ದುಸ್ಸಾಧ್ಯವಾದ ಪರಿಹಾರವೊಂದನ್ನು ಬಯಸುತ್ತದೆ. ನಿಜದಲ್ಲಿ ಸಂಭವನೀಯವಲ್ಲದ ಅಸಾಧ್ಯವಾದುದೊಂದು ಕಲ್ಪನೆಯ ಸಾಮ್ರಾಜ್ಯದಲ್ಲಿ ಗರಿಗೆದರಿ ಹಾರಲಾರಂಭಿಸುತ್ತದೆ. ಅದು ದ್ವೇಷದ ಕಿಡಿಯಾಗಿ ಹಿಂಸಾಪ್ರವೃತ್ತಿಯ ಕಡೆಗೋ ಪ್ರೀತಿಯ ಸೆಲೆಮೂಡಿ ಒಳಿತಿನ ಕಡೆಗೋ ಚಲಿಸಬಹುದು. ಇಂದು ಸಮಾಜದಲ್ಲಿ ಬಲವಾಗಿ ಬೇರೂರಿದ ಹಿಂಸೆ ಕ್ರೌರ್ಯಗಳು, ಅಸಹಜ ವರ್ತನೆಗಳು, ಸುಲಿಗೆ, ಅಸಹಾಯಕತೆಗಳು ಎಲ್ಲವನ್ನೂ ಹೊಟ್ಟೆಪಾಡಿಗಾಗಿ ಎಂದು ಕ್ಷಮಿಸಿ ತಳ್ಳಿಹಾಕುವಂತಿಲ್ಲ. ಇವೆಲ್ಲಾ ಯಾಕೆಂದು ಕೂಗಿ ಕೇಳಬೇಕು. ಹೃದಯಹೀನ ನಡವಳಿಕೆಯನ್ನು ಪ್ರಶ್ನಿಸಿ ಪ್ರೀತಿಯ ಸೆಲೆ ಉಕ್ಕುತ್ತಿಲ್ಲವೇ ಎಂದು ವಿಚಾರಿಸಬೇಕು. ಕೋಮು ಸಂಘರ್ಷಗಳಾದಾಗ ಮನುಷ್ಯನಿಗೆ ಮನುಷ್ಯನ ಪರಿಚಯ ಆಗುವುದಿಲ್ಲವೇ ಎಂದು ಮರುಗಬೇಕು. ಭಯದ ಕಲ್ಪನೆಯಲ್ಲಿ ತೇಲಿ ತೇಲಿ ಹೋಗಬೇಕಾದ ಅವಶ್ಯಕತೆ ಇದೆಯೇ ಎಂದೂ ವಿಮರ್ಶಿಸಬೇಕು. ಹೌದು, ಇಲ್ಲಿನ ಕತೆಗಳು ಇವನ್ನೆಲ್ಲ ಮಾಡಿವೆ. ಸಹಜತೆ-ಅಸಹಜತೆ ಮಧ್ಯೆ ಜೋಕಾಲಿ ಜೀಕುತ್ತ ಸ್ವಭಾವಗಳನ್ನು ಪರಿಚಯಿಸಿವೆ. ಕಣ್ಮುಂದೆ ಕಾಣುವ ದೃಶ್ಯಕ್ಕಿಂತ ಪರದೆಯ ಹಿಂದಿನ ತಾಳಮೇಳಗಳು ಮುಖ್ಯವಾಗುತ್ತವೆ. ಒಟ್ಟಿನಲ್ಲಿ ನಾವು ಒಳಿತಿಗೆ ವಿದಾಯ ಹೇಳುವುದನ್ನು ಬಿಡಬೇಕೆಂದು ಸಾರಿ ಹೇಳುವ ಕತೆಗಳು....*



## ನೂರೆಂಟು ನಾಯಿ ಬೊಗಳಿದರೇನು (ವಡಿಕೆಪ್ಪ ತಾತನ ತತ್ವಪದ ಸಂಗ್ರಹ, ಜೀವನ ಚರಿತ್ರೆ)

*ಡಾ|| ಸಿ. ಬಿ. ಚಿಲ್ಕಾರಾಗಿ*

**ಪುಟ : ೧೯೦** **ಬೆಲೆ : ರೂ. ೧೦೦**

**ಅದಿತಿ ಪ್ರಕಾಶನ,** ಲಿಂಗಸೂಗೂರು - ೫೮೪ ೧೨೨, ರಾಯಚೂರು ಜಿಲ್ಲೆ

*ಆತ್ಮತತ್ವ - ಪರಮಾತ್ಮತತ್ವ ಇವೆರಡರ ಭೇದ ಅಳಿದು ಅ-ದ್ವಯತದ ಕಲ್ಪನೆ ಮೂಡಿಸುವಲ್ಲಿ ಶ್ರಮಿಸಿ, ಭಕ್ತಿಮಾರ್ಗದ ಮೂಲಕವೇ ವಿಚಾರವಂತಿಕೆಯನ್ನು ಪ್ರಚುರಪಡಿಸಿದವರು ತತ್ವ ಪದಕಾರರು. ತಾಳ-ತಂಬೂರಿ ನುಡಿಸುತ್ತ, ಬದುಕಿನಲ್ಲಿ ತಾವು ಕಂಡ ಅನುಭವಾಮೃತವನ್ನು ಹಾಡುಗಳಲ್ಲಿ ಹೊರಹೊಮ್ಮಿಸುತ್ತ, ಊರೂರು ತಿರುಗಿ ಜನಜಾಗೃತಿ ಮೂಡಿಸಿದವರಿವರು. ಇಲ್ಲಿ ಸಂಗ್ರಹಿಸಲಾದ ತತ್ವಪದಗಳನ್ನು ರಚಿಸಿ ಹಾಡಿದ ವಡಿಕೆಪ್ಪ ತಾತ ಸಂಸಾರದ ಪಥದಲ್ಲೇ ಸಾಗಿ ಪಾರಮಾರ್ಥದ ಗುರಿ ಸಾಧಿಸಿದವರಲ್ಲಿ ಪ್ರಮುಖರು. ಈ ಪದಗಳೆಲ್ಲ ಒಂದು ಪ್ರಾದೇಶಿಕ ನುಡಿಕಟ್ಟಿನ ಪ್ರಕಾರಕ್ಕೆ ಒಳಗಾಗಿದ್ದು ಆಡುಮಾತಿನ ಧಾಟಿಯಲ್ಲೇ ಇರುವುದರಿಂದ ಅರ್ಥೈಸಿಕೊಳ್ಳುವುದು ಕಷ್ಟವೇನಲ್ಲ. ಕೆಲವು ಸಂದರ್ಭಗಳಲ್ಲಿ ಗೂಢಾರ್ಥಗಳು ಇರುವುದು ನಿಜವಾದರೂ ಸಮಯ ಸಂದರ್ಭಗಳ ಅರಿವಿರುವವರಿಗೇನೂ ಇವು ಅಂಥ ಕಬ್ಬಿಣದ ಕಡಲೆಗಳಲ್ಲ. ನೀತಿಬೋಧೆ, ಉಪದೇಶ, ಬುದ್ಧಿವಾದಗಳೆಲ್ಲ ಕೆಲಸಕ್ಕೆ ಬಾರದಿದ್ದರೆ ಒಂದೆರಡು ಕಟುಮಾತು - ಗೇಲಿಗಳೂ ಇರುವ ಈ ಬೋಧೆ ಜನರನ್ನು ಸನ್ಮಾರ್ಗಕ್ಕೆ ಸಾಗಲು ತಿಳಿಸುವ ಪ್ರಯತ್ನವಷ್ಟೆ. ಈ ಜಗತ್ತಿನ ಬಣ್ಣ ಇಂಥದು; ಇಲ್ಲಿನ ವ್ಯವಹಾರಗಳು ಹೀಗೆ; ಇದರ ಹದವನ್ನರಿತು ಬಾಳು; ದುರಾಶೆ ಬೇಡ, ದುರ್ಬುದ್ಧಿ ಬೇಡವೆಂಬ ಕರೆಗಳಿವೆ. ಇವನ್ನು ರಚಿಸಿ ಹಾಡಿದ ವಡಿಕೆಪ್ಪ ತಾತ ನಡೆದಾಡಿದ – ಬಾಳಿ ಬದುಕಿದ ಸ್ಥಳಗಳಲ್ಲಿ ಸಂಚರಿಸಿ ಅವರ ಪದಗಳನ್ನು ಕಲೆಹಾಕಿ ನಮಗಾಗಿ ಸಂಗ್ರಹಿಸಿಕೊಟ್ಟವರು ಡಾ|| ಸಿ. ಬಿ. ಚಿಲ್ಕಾರಾಗಿ. ವಿಶ್ವಾಸಕ್ಕೆ ಹೆಸರಾದ ನಾಯಿಯನ್ನು ವಚನದಲ್ಲಿ ಸಾಲುಗಳಿವೆಯೆಂದು ಶೀರ್ಷಿಕೆಗೆ ಆಯ್ದು ಕೇವಲವಾಗಿ ಕಂಡಿದ್ದು ನೋವು ತರುವ ವಿಷಯ.*

**– ಇಂದಿರಾಕುಮಾರಿ,** *೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨*

## ಮಿಲೇನಿಯಂ ಕವಿತೆಗಳು

*ಡಾ|| ದೊಡ್ಡರಂಗೇಗೌಡ*

**ಪುಟ : ೩೨ + ೩೨೦ = ೩೫೨** **ಬೆಲೆ : ರೂ. ೧೮೦**

**ಅರ್ಕಾವತಿ ಪ್ರಕಾಶನ,** ನಂ. ೨, ೯೧/೧, ೨ನೇ ಮುಖ್ಯರಸ್ತೆ, ವಿ. ಆರ್. ಬ್ಲಾಕ್, ಜಿ. ಆರ್. ನಗರ, ಬೆಂಗಳೂರು - ೫೬೦ ೦೪೦

*ಸಾಹಿತ್ಯ, ಸಂಗೀತ, ಸಿನಿಮಾ – ಈ ಮೂರು ಕ್ಷೇತ್ರಗಳ ತ್ರಿವೇಣಿ ಸಂಗಮದಂತಿರುವ ಡಾ|| ದೊಡ್ಡ ರಂಗೇಗೌಡರ 'ಮಿಲೇನಿಯಂ ಕವಿತೆಗಳು' ಸುಮಾರು ೨೬೬ ಕವನಗಳನ್ನೊಳಗೊಂಡ ಕಾವ್ಯಕೃತಿ. ಕಾವ್ಯದ ವಸ್ತು ಯಾವುದಾಗಿರಬೇಕು ? ಎಂಬ ಪ್ರಶ್ನೆಗೆ ನಿರ್ದಿಷ್ಟ ಉತ್ತರವನ್ನು ಕೊಡುವುದು ಕಷ್ಟ, ಏಕೆಂದರೆ ಪ್ರತಿಭಾವಂತನಾದ ಕವಿ ಯಾವ ಸಂಗತಿಯ ಬಗೆಗೆ ಬೇಕಾದರೂ ಬರೆಯಬಲ್ಲ. ಅಂತಹ ಕವಿಪ್ರತಿಭೆ ದೊಡ್ಡರಂಗೇಗೌಡರದು. ಈ ಕೃತಿಯಲ್ಲಿ ವಿಭಿನ್ನ ಬಗೆಯ ಕವಿತೆಗಳಿವೆ. ನಮ್ಮ ಭಾವನೆಗಳನ್ನು, ನೆನಪುಗಳನ್ನು ಮೆಲುಕು ಹಾಕುವಂತೆ ಮಾಡುವ, ಲಯಬದ್ಧವಾಗಿ, ಮೌನವಾಗಿ ಮನದಲ್ಲೇ ಹಾಡಿಕೊಳ್ಳಬಹುದಾದ ಜನಪದ ಶೈಲಿಯ ಸೊಗಡನ್ನು ಹೊಂದಿರುವ ಕವನಗಳಿವೆ. ಸಮಾಜದ ವಿಮರ್ಶೆ ಮಾಡುವ, ರಾಜಕೀಯ ಭ್ರಷ್ಟಾಚಾರವನ್ನು ಬಯಲು ಮಾಡುವ, ರೈತರ ಬಂಡಾಯ-ಬವಣೆಗಳನ್ನು, ಚಿತ್ರಿಸುವ ಹಲವು ಕವನಗಳು ಈ ಸಂಕಲನದಲ್ಲಿವೆ. ವಿಶ್ವವ್ಯಾಪಿ ಕನ್ನಡ, ಒಂದೇ ಕರ್ನಾಟಕ, ಕನ್ನಡದ ಜಯಭೇರಿ, ನಾಡು-ನುಡಿ-ನಮನ, ಎದ್ದೇಳಿ ಕನ್ನಡಿಗರೇ ಇನ್ನಾದರೂ – ಹೀಗೆ ಕನ್ನಡನಾಡು-ನುಡಿಯನ್ನು ಕುರಿತು ಬರೆದ ಹಲವು ಉತ್ತಮ ಕವನಗಳು ನಮ್ಮ ಮನಸ್ಸನ್ನು ಹಿಡಿದಿಡುತ್ತವೆ. ಈ ಕೃತಿಯ ವಿಶೇಷತೆಯೆಂದರೆ ಬೇರೆ ಬೇರೆ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿರುವ ಹಲವು ಸಾಧಕರ ವ್ಯಕ್ತಿ ಚಿತ್ರಣಗಳನ್ನು ಒಳಗೊಂಡಿರುವುದು, ಅಷ್ಟೇ ಅಲ್ಲದೆ ತಮ್ಮ ವಿದೇಶಿ ಪ್ರವಾಸದ ಅನುಭವಗಳನ್ನು ಕಾವ್ಯವಾಗಿಸಿರುವುದು. ಭಾಷೆ ಸರಳವಾಗಿದ್ದು, ಯಾವುದೋ ಒಂದು ಲಯಕ್ಕೆ ಇಲ್ಲಿನ ಕವನಗಳೆಲ್ಲ ಒಗ್ಗಿಕೊಂಡಿದೆಯೆನಿಸುತ್ತದೆ. ಒಟ್ಟಿನಲ್ಲಿ ನಮ್ಮ ಕನ್ನಡ ಜನಪ್ರಿಯ ಸಾಹಿತ್ಯದ ಪ್ರಾತಿನಿಧಿಕ ಕವಿ 'ಡಾ|| ದೊಡ್ಡರಂಗೇಗೌಡರು' ಎಂಬ ಮಾತನ್ನು ಇಲ್ಲಿನ ಕವನಗಳು ಋಜುವಾತುಪಡಿಸುತ್ತವೆ.*

## ಮನೋಮಿ

*ಕಮಲಾದಾಸ್*

**ಪುಟ : ೧೭೭ + vii** **ಬೆಲೆ : ರೂ. ೧೨೦**

**ಚಂದ್ರಗಿರಿ ಪ್ರಕಾಶನ,** ೨-೨೧-೧೬೩೧/೨, ಸೂಕ್ಷ್ಮ ತರಂಗನಿಲಯ ರಸ್ತೆ, ಮಂಗಳೂರು - ೫೭೫ ೦೦೬

ಮನೋಮಿ ಮತ್ತು ಬಲೆ ಸಾರಾ ಅಬೂಬಕ್ಕರ್ ಅವರು ಅನುವಾದಿಸಿರುವ ಎರಡು ಜೋಡಿ ಕಾದಂಬರಿಗಳ ಗುಚ್ಛ. ಇವುಗಳಲ್ಲಿ ಮೊದಲನೆಯದು 'ಮನೋಮಿ'. ಇದು ಇಂಗ್ಲಿಷ್ ಮತ್ತು ಮಲೆಯಾಳಂ ಭಾಷೆಗಳಲ್ಲಿ ಸಾಹಿತ್ಯರಚನೆ ಮಾಡಿರುವ ಕಮಲಾದಾಸ್ ಅವರ ಅನುವಾದಿತ ಕೃತಿ. ಇದರ ಶೀರ್ಷಿಕೆಯೇ ವಿಶಿಷ್ಟವೆನಿಸುತ್ತದೆ. ಇದು ಕಾದಂಬರಿಯ ಹೆಸರೂ ಹೌದು. ಕಾದಂಬರಿಯೊಳಗಿನ ಪ್ರಧಾನಪಾತ್ರದ ಹೆಸರೂ ಹೌದು. ಬೌದ್ಧರ ಪವಿತ್ರ ಯಾತ್ರಾಸ್ಥಳಗಳಾದ ಸಾರಾನಾಥ ಮತ್ತು ಬುದ್ಧಗಯಾ ನೋಡಲು ಶ್ರೀಲಂಕಾದಿಂದ ಭಾರತಕ್ಕೆ ಬಂದ ಸಿಂಹಳೀಯನ ಕುಟುಂಬದ ವಿವರಗಳನ್ನು ನೀಡುವುದರೊಂದಿಗೆ ಆರಂಭ ಗೊಳ್ಳುವ ಕಾದಂಬರಿಯು ಶ್ರೀಲಂಕಾ ದೇಶದಲ್ಲಿನ ಜನಾಂಗೀಯ ಘರ್ಷಣೆಗಳನ್ನು ಹಂತಹಂತವಾಗಿ ಬಿಚ್ಚಿಡುತ್ತದೆ. ಒಂದು ಕಾಲಕ್ಕೆ ತಮಿಳರು ಮತ್ತು ಸಿಂಹಳೀಯರು ಸಾಮರಸ್ಯದಿಂದ ಬದುಕುತ್ತಿದ್ದರು. ಮುಂದೆ ೧೯೮೦ರ ದಶಕದಿಂದ ಈಚೆಗೆ ಕೆಲವೇ




ಕೆಲವು ಕಾಣದ ಕೈಗಳ ಕೈವಾಡದಿಂದ ಆ ಸಾಮರಸ್ಯ ಹೇಗೆ ಕದಡುತ್ತಾ ಹೋಯಿತು ಎಂಬುದನ್ನು ಈ ಕಾದಂಬರಿ ದಾಖಲಿಸುತ್ತದೆ (ಇಲ್ಲಿ ಬಾಂಗ್ಲಾ ಲೇಖಕಿ 'ತಸ್ಲಿಮಾ ನಸ್ರೀನ್'ರ 'ಲಜ್ಜಾ' ಕಾದಂಬರಿಯ ನೆನಪು ಮೂಡುತ್ತದೆ). ಎಲ್ಲಾ ಕಾಲ ಗಳಲ್ಲೂ, ಎಲ್ಲಾ ಸಮಾಜಗಳಲ್ಲೂ ಧರ್ಮ, ದೇಶ, ಭಾಷೆಗಳ ಹೆಸರಿನಲ್ಲಿ ನಡೆಯುವ ಭಯೋತ್ಪಾದನೆಗೆ ಹೇಗೆ ಜನಸಾಮಾನ್ಯರು ಬಲಿಪಶುಗಳಾಗುತ್ತಾರೆ ಎಂಬುದಕ್ಕೆ ಈ ಕೃತಿ ಒಂದು ಕೈಗನ್ನಡಿ. 'ಬಲೆ' ಕಾದಂಬರಿಯು ಮುಸ್ಲಿಂ ಜನಾಂಗದ ಮಹಿಳೆಯರ ಬದುಕನ್ನು ಚಿತ್ರಿಸಿರುವ ಮಲೆಯಾಳಂ ಲೇಖಕಿ ಬಿ. ಎಮ್. ಸುಹರಾರವರ ಕೃತಿ. ಅನುವಾದಕರಾದ 'ಸಾರಾ' ಅವರೇ ಮುಸ್ಲಿಂ ಸಮಾಜದ ಚಿತ್ರಣವನ್ನು ತಮ್ಮ ''ಚಂದ್ರಗಿರಿಯ ತೀರದಲ್ಲಿ '' ಎಂಬ ಕಾದಂಬರಿಯಲ್ಲಿ ನೀಡಿದ್ದಾರಾದರೂ ಕಾದಂಬರಿಯಲ್ಲಿ ನಾವು ಕೇರಳದ ವಿಶಿಷ್ಟ ಸಂಸ್ಕೃತಿಯ ಹಿನ್ನೆಲೆಯಲ್ಲಿ ಮುಸ್ಲಿಂ ಸಮಾಜದ ನೋವು-ನಲಿವುಗಳ ಚಿತ್ರಣವನ್ನು ಕಾಣಬಹುದು. ಇಡೀ ಪುರುಷ ಪ್ರಧಾನ ಸಮಾಜವೇ ಮಹಿಳೆಯ ಪಾಲಿಗೆ ಹೇಗೆ ಬಲೆಯಾಗಿ ಪರಿಣಮಿಸಿ, ಬಂಧಿಸಿ ಸ್ವಾತಂತ್ರ್ಯವನ್ನು ಕಿತ್ತುಕೊಂಡಿದೆ ಎಂಬುದನ್ನು ಮೂಲಲೇಖಕಿ ನಿರೂಪಿಸಿದ್ದಾರೆ. ಅದನ್ನು ಅಷ್ಟೇ ಪರಿಣಾಮಕಾರಿಯಾಗಿ ಸಾರಾ ಅಬೂಬಕ್ಕರ್ ಅವರು ಅನುವಾದಿಸಿದ್ದಾರೆ. ಎರಡೂ ಕಾದಂಬರಿಗಳು ಕನ್ನಡ ಅನುವಾದಕ್ಷೇತ್ರಕ್ಕೆ ಅಪರೂಪದ ಕೊಡುಗೆಗಳು.

## ನೀಲಿಗ್ರಾಮ

*ವಿ. ಆರ್. ಕಾರ್ಪೆಂಟರ್*




**ಪುಟ : ೧೫೦** **ಬೆಲೆ : ರೂ. ೧೩೫**

**ಸಂಸ್ಕೃತಿ ಪ್ರಕಾಶನ, ಡಾ|| ಸುಭಾಷ್ ಭರಣಿ ಸಾಂಸ್ಕೃತಿಕ ವೇದಿಕೆ,** ಆದರ್ಶ ಕಾಲೋನಿ, ಕಂಟೋನ್ಮೆಂಟ್, ಬಳ್ಳಾರಿ-೫೮೩೧೦೪

ಪಯಣವೆನ್ನುವುದು ಪಯಣಿಗನ ಆಸಕ್ತಿ, ಅಭಿರುಚಿಗಳಿಗೆ ತಕ್ಕಂತೆ ಭಿನ್ನ ಭಿನ್ನ ಅನುಭವಗಳನ್ನು ಕೊಡುತ್ತದೆ. ದಿಕ್ಕು-ದೆಸೆ ಇಲ್ಲದ ಸಂಚಾರವೂ ಸಹ ನಿರೀಕ್ಷಿಸದ ಅನುಭವಗಳನ್ನು ಕಟ್ಟಿ ಕೊಡುವುದುಂಟು. 'ಕಾರ್ಪೆಂಟರ' 'ನೀಲಿಗ್ರಾಮ' ಕಾದಂಬರಿ ಯಲ್ಲಿನ ಪಯಣ ಪ್ರಕ್ರಿಯೆ ಪಯಣವೂ ಹೌದು. ಚಾರಣವೂ ಹೌದು, ಶೋಧವೂ ಹೌದು ಹಾಗೂ ಪಲಾಯನವೂ ಹೌದು, ಇಲ್ಲಿನ ನಿರೂಪಣೆ, ಕಥಾಹಂದರ ೫೦ರ ದಶಕದ ನವ್ಯ ಕಾದಂಬರಿಗಳನ್ನು ನೆನಪಿಸುತ್ತದೆ. ಭ್ರಮೆ, ಕಲ್ಪನೆ, ಕನಸು, ಭಯ. ಅವಾಸ್ತವ ಸಂಗತಿಗಳೇ ಕಾದಂಬರಿಯಲ್ಲಿ ತುಂಬಿಕೊಂಡು ಗೊಂದಲ-ಗೋಜಲನ್ನುಂಟು ಮಾಡುತ್ತವೆ. ಮನುಷ್ಯನ ಅಪ್ರಜ್ಞಾಪೂರ್ವಕ ಸ್ಥಿತಿಯ ಅಸಂಗತ ಅಂಶಗಳು, ವಾಸ್ತವ ಸಂಗತಿಗಳೊಂದಿಗಿನ ಸಂಘರ್ಷ ಕಾದಂಬರಿಯ ಸ್ವರೂಪವನ್ನು ಪಡೆದಿವೆ. ಲೇಖಕನ ಆತ್ಮಚರಿತ್ರೆಯ ದಾಟಿಯ ಗೀಳು ಇಲ್ಲಿಯೂ ಇಣುಕಿ ನೋಡಿದೆ. ಕಾದಂಬರಿಯ ಗೋಜಲುಗಳು ಸ್ವಸ್ಥ ಸಮಾಜದ ಕನಸು ಕಾಣುತ್ತಿರುವ ಪ್ರಜ್ಞಾವಂತ ಸಮುದಾಯ ತಲುಪಿರುವ ಸ್ಥಿತಿಗೆ ಸಂಕೇತದಂತಿದೆ. ನಗರಗಳನ್ನು, ಜಾತಿ-ಧರ್ಮಗಳನ್ನು ಮಠ-ಮಾನ್ಯ ಗಳನ್ನು, ಚುನಾವಣೆಗಳನ್ನು ಕೇಂದ್ರವಾಗಿಟ್ಟುಕೊಂಡ ಅಭಿವೃದ್ಧಿಯ ಮಾದರಿಗಳು, ಅವಶೇಷ ವಾಗುತ್ತಿರುವ ಗ್ರಾಮ ಭಾರತ, ಉಳ್ಳವರ ಭ್ರಷ್ಟರ ಮುಖವಾಡವಾಗುತ್ತಿರುವ ಡೆಮಾಕ್ರಸಿ, ಸಮ ಸಮಾಜದ ಆಶೋತ್ತರಗಳಿಗೆ ತಿಲಾಂಜಲಿಯಿತ್ತಿರುವ ಪ್ರಭುತ್ವಗಳು, ದೇಶದ ಭವಿಷ್ಯವನ್ನು ಪರಕೀಯ ಬಂಡವಾಳಿಗರ ಮರ್ಜಿಗೆ ಒಪ್ಪಿಸುತ್ತಿರುವ ಆಳುವ ವರ್ಗಗಳ ಒಪ್ಪಂದಗಳು, ಹೆಚ್ಚುತ್ತಿರುವ ಅತ್ಯಾಚಾರಗಳು – ಇವೆಲ್ಲ ಪ್ರಜ್ಞಾವಂತ ಸಮುದಾಯ ಭ್ರಮ ನಿರಸನಗೊಂಡ ಸ್ಥಿತಿಯನ್ನು ಸಂಕೇತಿಸುತ್ತಿರುವಂತಿದೆ. ಈ ಸಮಸ್ಯೆಗಳಿಗೆ ಕಾಡು ಗಳಲ್ಲಿ ಪರಿಹಾರ ಕಂಡುಕೊಳ್ಳುವ ಅಥವಾ ಇನ್ನಾವುದೋ ಪ್ರಕ್ರಿಯೆಯಲ್ಲಿ ತೊಡಗಿ ತಮ್ಮೊಳಗಿನ ಪ್ರತಿಭಟನೆಯ ಕಾವನ್ನು ಶಮನಗೊಳಿಸಿಕೊಳ್ಳುವ ನಿಟ್ಟಿನಲ್ಲಿ ಪ್ರಜ್ಞಾವಂತ ಸಮುದಾಯದ ಪಲಾಯನವನ್ನು ಕಾದಂಬರಿ ಖಂಡಿಸುತ್ತದೆ. ಒಟ್ಟಿನಲ್ಲಿ ಭಾರತೀಯ ಪ್ರಜ್ಞಾವಂತ ಸಮುದಾಯ ಎಚ್ಚೆತ್ತುಕೊಳ್ಳಬೇಕಾದ, ನಮ್ಮ ಸುತ್ತಲಿನ ಜಡಸಮುದಾಯಕ್ಕೆ ನಾವೇ ಚುಚ್ಚುಮದ್ದು ನೀಡಬೇಕಾದ ಅನಿವಾರ್ಯತೆಯನ್ನು ಕೃತಿ ಮನಗಾಣಿಸುತ್ತದೆ.

**– ರಮೇಶ ಕೋಲಾರ**

*ಪ್ರಥಮ ದರ್ಜೆ ಸಹಾಯಕರು, ಕರ್ನಾಟಕ ಲೋಕಾಯುಕ್ತ, ಕೋಲಾರ - ೫೬೩ ೧೦೧*

## ಸಾದರ ಸ್ವೀಕಾರ

**ಉಮಾಶಂಕರ ಜೋಶಿ ಕವಿತೆಗಳು**

*ಸಂ. ಹಾಗೂ ಅನುವಾದ : ಪ್ರೊ|| ಕಾಶೀನಾಥ ಅಂಬಲಗೆ*

**ಪುಟ : xii + ೭೨ = ೮೪** **ಬೆಲೆ : ರೂ. ೭೫**

**ಡಾ|| ರಾಮಧಾರಿ ಸಿಂಹ ದಿನಕರ ಕವಿತೆಗಳು**

*ಸಂ. ಹಾಗೂ ಅನುವಾದ : ಪ್ರೊ|| ಕಾಶೀನಾಥ ಅಂಬಲಗೆ*

**ಪುಟ : ೬೮** **ಬೆಲೆ : ರೂ. ೫೦**

**ಆಜ್ಞೇಯ ಕವಿತೆಗಳು** *ಸಂ. ಹಾಗೂ ಅನುವಾದ : ಪ್ರೊ|| ಕಾಶೀನಾಥ ಅಂಬಲಗೆ*

**ಪುಟ : ೪೮** **ಬೆಲೆ : ರೂ. ೪೦**

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು

**ಪ್ರಗತಿ ಪ್ರಕಾಶನ,** ಜಯನಗರ, ವಿಶ್ವವಿದ್ಯಾಲಯ ರಸ್ತೆ, ಕಲಬುರ್ಗಿ - ೫೮೫ ೧೦೫

**ಕನ್ನಡ ಹಾಗೂ ತೆಲುಗು ದೇಸಿ ಛಂದಸ್ಸು**

*ವಿರೂಪಾಕ್ಷಪ್ಪ ಮಾರಮ್ಮನಹಳ್ಳಿ*

**ಪುಟ : viii + ೧೪೪ = ೧೫೨** **ಬೆಲೆ : ರೂ. ೧೨೦**

**ಬಂಡಾರ ಪ್ರಕಾಶನ,** ಮಸ್ಕಿ-೫೮೪೧೨೪, ರಾಯಚೂರು ಜಿಲ್ಲೆ

**ಬೇಲಿ !** (ಸಾಮಾಜಿಕ ನಾಟಕ)

*ರಚನೆ : ಟಿ. ಲಿಂಗಣ್ಣ ಚೊಟ್ಟನ ಹಳ್ಳಿ*

**ಪುಟ : ೧೧೨** **ಬೆಲೆ : ರೂ. ೬೦**

**ಸುಚಿತಾ ಪ್ರಕಾಶನ,** ನಂ. ೨೦, ಟೈಪ್ - ೧, ಬ್ಲಾಕ್ - **V**, ಬಿಆರ್‌ಸಿ ಕ್ಯಾಂಪಸ್, ನಿಮ್ಹಾನ್ಸ್ ಕ್ವಾರ್ಟರ್ಸ್, ಹೊಸೂರು ರಸ್ತೆ, ಬೆಂಗಳೂರು - ೫೬೦ ೦೨೯

**ನಾ ಕಂಡ ಕನಸು** (ಕಾದಂಬರಿ)

*ರಚನೆ : ಟಿ. ಲಿಂಗಣ್ಣ ಚೊಟ್ಟನ ಹಳ್ಳಿ*

**ಪುಟ : ೧೦೨ + xii** **ಬೆಲೆ : ರೂ. ೧೨೦**

**ಅರುಣರಾಗ** (ಕವನ ಸಂಕಲನ)

*ರಚನೆ : ಅರುಣ್‌ಕುಮಾರ್ ಚೊಟ್ಟನ ಹಳ್ಳಿ*

**ಪುಟ : xvi + ೭೬** **ಬೆಲೆ : ರೂ. ೧೦೦**

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು

**ಶ್ರೀ ಚಿಕ್ಕಮ್ಮ ತಾಯಿ ಪ್ರಕಾಶನ,** ನಂ. ೨೦, ಟೈಪ್ - ೧, ಬ್ಲಾಕ್ - **V**, ಬಿಆರ್‌ಸಿ ಕ್ಯಾಂಪಸ್, ನಿಮ್ಹಾನ್ಸ್ ಕ್ವಾರ್ಟರ್ಸ್, ಹೊಸೂರು ರಸ್ತೆ, ಬೆಂಗಳೂರು - ೫೬೦ ೦೨೯

**ಕನ್ನಡಿಯನ್ನು ನೋಡಲಾರೆ** (ಕಥಾ ಸಂಕಲನ)

*ಸುಧಾ ಚಿದಾನಂದ ಗೌಡ*

**ಪುಟ : xii + ೧೪೮ = ೧೬೦** **ಬೆಲೆ : ರೂ. ೨೦೦**

**ಸುಯೋಧನ ಪ್ರಕಾಶನ,** ಹಗರಿಬೊಮ್ಮನಹಳ್ಳಿ-೫೮೩೨೧೨

**ಮೊದಲು ಮನಸು ಕಟ್ಟಿ** (ಕವನ ಸಂಕಲನ)

*ಶ್ರೀಮತಿ ಮಾಲಾ ಬಡಿಗೇರ*

**ಪುಟ : viii + ೪೮ = ೫೬** **ಬೆಲೆ : ರೂ. ೫೦**

**ಬೆರಗು ಪ್ರಕಾಶನ,** 'ಶರಧಿ' ಮರಿಯಮ್ಮನ ಗುಡಿ ಹತ್ತಿರ, ಅಂಚೆ : ಭಾಗ್ಯನಗರ - ೫೮೩ ೨೩೮, ಕೊಪ್ಪಳ ತಾಲೂಕು, ಕೊಪ್ಪಳ ಜಿಲ್ಲೆ

**ಭಾಗ್ಯದಾ ಬಳೆಗಾರ ಹೋಗಿ ಬಾ ತವರೀಗೆ** (ನಾಲ್ಕು ನಾಟಕಗಳು) *ಬಶೀರ ಅಹ್ಮದ ಹೊಸಮನಿ*

**ಪುಟ : ೧೨೪** **ಬೆಲೆ : ರೂ. ೭೫**

**ಹೊಸಮನಿ ಪ್ರಕಾಶನ,** 'ಹೊಸಮನಿ ಕುಟೀರ', ಸಂ. ೧-೪-೧೪೯/೩೩, ದಾತಾರನಗರ, ರಾಯಚೂರು-೫೮೪೧೦೧

**ಗೋಪಾಲಕೃಷ್ಣ ಪೈ** *ಡಾ|| ಗೀತಾ ಶೆಣೈ*

**ಪುಟ : ೧೨೦** **ಬೆಲೆ : ರೂ. ೬೦**

**ಶ್ರೀನಿವಾಸ ವೈದ್ಯ** *ಡಾ|| ಮಾಲತಿ ಪಟ್ಟಣಶೆಟ್ಟಿ*

**ಪುಟ : ೮೮** **ಬೆಲೆ : ರೂ. ೬೦**

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧




## ನಭಾವಲೋಕನ

ಆಕಾಶದ ಬಣ್ಣ ನೀಲಿಯಿಂದ ಬೂದು ಬಣ್ಣಕ್ಕೆ ತಿರುಗುವ ಸಂದರ್ಭ ಈ ತಿಂಗಳಿನದು. ಕಳೆದ ತಿಂಗಳು ಕೆಲವರಿಗೆ ಮಾತ್ರ ದರ್ಶನ ಭಾಗ್ಯ ಒದಗಿಸಿದಂತಹ ಧೂಮಕೇತುಗಳು ಈ ಬಗೆಯ ಆಕಾಶದಲ್ಲಿ ಕಾಣುವುದೂ ಇಲ್ಲ. ಅಷ್ಟೇಕೆ ? ಕ್ಷೀಣ ನಕ್ಷತ್ರಗಳೂ ಕಾಣುವುದಿಲ್ಲ. ಆದ್ದರಿಂದ, ಸಂಜೆಯ ಆಕಾಶದಲ್ಲಿ ಗುರುಗ್ರಹವೊಂದೇ ಕಾಣಬಹುದಾದ ಸಾಧ್ಯತೆ ಇದೆ. ಆದರೂ ಅತಿ ಪ್ರಕಾಶಮಾನವಾದ ನಕ್ಷತ್ರ ಲುಬ್ಧಕ (ಸಿರಿಯಸ್) ಮತ್ತು ಎರಡನೇ ಸ್ಥಾನ ಪಡೆದ ಅಗಸ್ತ್ಯ (ಕೆನೋಪಸ್) ನಿಚ್ಚಳವಾಗಿ ಕಾಣುತ್ತವೆ. ಗುರುಗ್ರಹದ ಪಕ್ಕದ ವೃಷಭ ರಾಶಿಯಲ್ಲಿ ರೋಹಿಣಿ, ಕೃತ್ತಿಕಾ ಇವುಗಳೂ ಕಾಣುವುವು. ನೆತ್ತಿಯ ಮೇಲೆ ಮಹಾವ್ಯಾಧ (ಒರೈಯನ್) ಪುಂಜ ಕಾಣುವುದು. ಅದರ ತುಸು ಉತ್ತರಕ್ಕೆ ಪಂಚಕೋಣ ಆಕೃತಿಯ ವಿಜಯಸಾರಥಿ (ಆರಿಗಾ) ಕಾಣುವುದು. ಪೂರ್ವದಲ್ಲಿ ಸಿಂಹರಾಶಿ ಕಾಣುವುದು. ಚಂದ್ರನಿಲ್ಲದಾಗ ದಕ್ಷಿಣದಲ್ಲಿ ಅಗಸ್ತ್ಯದ ಆಸುಪಾಸಿನಲ್ಲಿ ಆಕಾಶಗಂಗೆಯ ಹರಿವನ್ನು ನೋಡಬಹುದು. ಸಂಜೆ ದಿಗಂತದ ಅಂಚಿನಲ್ಲಿ ಮಂಗಳಗ್ರಹ ವಂತೂ ಇದೆ. ಆದರೆ, ಅದನ್ನು ಗುರುತಿಸುವುದು ಕಷ್ಟ. ಪ್ರಕಾಶಮಾನವಾದ ಶುಕ್ರಗ್ರಹ ಈಗ ಸಂಜೆಯ ಆಕಾಶಕ್ಕೆ ಬಂದಿದೆ. ೬ರಂದು ಅದು ಮಂಗಳಗ್ರಹದ ಪಕ್ಕದಲ್ಲಿ ಇರುವ ಸಂದರ್ಭದಲ್ಲಿ ಮಂಗಳವನ್ನು ಗುರುತಿಸುವ ಪ್ರಯತ್ನ ಮಾಡಬಹುದು. ಆದರೆ ಸೂರ್ಯನಿಂದ ಕೇವಲ ಎರಡು ಡಿಗ್ರಿ ಅಂತರದಲ್ಲಿ ಇರುವುದರಿಂದ ಈ ಪ್ರಯತ್ನ ಯಶಸ್ವಿಯಾಗಲಾರದು. ೧೮ರಂದು ಸೂರ್ಯನನ್ನು ಹಾದು ಮಂಗಳ ಆ ಮುಂದೆ ಬೆಳಗಿನ ಜಾವ ಕಾಣುತ್ತದೆ.

ಶುಕ್ರಗ್ರಹ ದಿನೇದಿನೇ ಮೇಲೇರಿ ತಿಂಗಳ ಕೊನೆಗೆ ಸ್ಪಷ್ಟವಾಗಿ ಕಾಣುತ್ತದೆ. ಹೀಗೆ ತಿಂಗಳ ಕೊನೆಗೆ ಪಶ್ಚಿಮದ ಅಂಚಿನಲ್ಲಿ ಶುಕ್ರ ಏರಿದ ಹಾಗೆ ಪೂರ್ವದ ಅಂಚಿನಲ್ಲಿ ಶನಿಗ್ರಹವೂ ಕಾಣುತ್ತದೆ. ೨೮ರಂದು ವಿಯುತಿ. ಅಂದರೆ ಸೂರ್ಯಾಸ್ತವಾಗುವಾಗ ಶನಿ ಉದಯಿಸುತ್ತದೆ. ಒಟ್ಟಿನಲ್ಲಿ ತಿಂಗಳ ಕೊನೆಗೆ ಸಂಜೆಗೆ ಮೂರು ಗ್ರಹಗಳು ನೋಡಲು ಸಿಗುತ್ತವೆ ಎಂದಾಯಿತು.

ಬುಧಗ್ರಹ ಬೆಳಗಿನ ಜಾವ ಕಾಣುತ್ತದೆ. ತಿಂಗಳ ಮೊದಲ ವಾರದಲ್ಲಿ ಐದೂವರೆಗೆ ಸ್ಪಷ್ಟವಾಗಿ ಕಾಣುತ್ತದೆ. ೮ರಂದು ರೇಖಾ ಚಂದ್ರ ಅದರ ಪಕ್ಕದಲ್ಲಿಯೇ ಕಾಣುತ್ತದೆ.

ಇದೇ ರೀತಿ ಸಂಜೆಯ ಆಕಾಶದಲ್ಲಿ ರೇಖಾಚಂದ್ರ ೧೪ರಂದು ಗುರುಗ್ರಹದ ಪಕ್ಕದಲ್ಲಿ ಕಾಣುವುದು. ೨೪ರಂದು ಚಂದ್ರನ ಸ್ಥಾನ ಗಮನಿಸಿ; ಪುನಃ ೨೫ರಂದು ಗಮನಿಸಿ, ಅದು ಚಿತ್ರಾ ನಕ್ಷತ್ರವನ್ನು ದಾಟಿ ಬಂದಿರಬೇಕೆಂಬುದು ಸ್ಪಷ್ಟವಾಗುತ್ತದೆ. ಈ ಪುಟ್ಟ ಗ್ರಹಣ-ಆಚ್ಛಾದನೆ ನಮಗೆ ಕಾಣುವುದಿಲ್ಲ.

ಏಪ್ರಿಲ್ ೨೫ರ ಸಂಜೆ ಶನಿ, ಚಿತ್ರಾಗಳ ನಡುವೆ ಪೂರ್ಣಚಂದ್ರ

೨೫ರ ಸಂಜೆ ಪೂರ್ಣಚಂದ್ರ ಚಿತ್ರಾ ಮತ್ತು ಶನಿಗ್ರಹಗಳ ನಡುವೆ ಕಾಣುವುದು. ಹುಣ್ಣಿಮೆಯ ಚಂದ್ರ ಚಿತ್ರಾ ನಕ್ಷತ್ರದ ಪಕ್ಕ ಇರುವ ಕಾರಣ ಈ ತಿಂಗಳ ಹೆಸರು ಚೈತ್ರ ಎಂದಾಗಿದೆ.

೨೫ರ ಹುಣ್ಣಿಮೆ ಚಂದ್ರನದೊಂದು ವಿಶೇಷವಿದೆ. ಮಧ್ಯರಾತ್ರಿ ೧ ಗಂಟೆಗೆ ಅದನ್ನು ನೋಡಿ, ಉತ್ತರದ ಅಂಚು ಮಾತ್ರ ಸ್ವಲ್ಪ ಕುಂದಿದೆ ಎನ್ನಬಹುದು. ಅದು ವಾಸ್ತವದಲ್ಲಿ ಗ್ರಹಣ. ಭೂಮಿಯ ನೆರಳಿನ ಅಂಚನ್ನು ಚಂದ್ರ ಸವರಿಕೊಂಡು ಹೋಗುವುದು. ಇದು ಪಾರ್ಶ್ವಗ್ರಹಣ ಮಾತ್ರ. ಆದ್ದರಿಂದ ಹುಣ್ಣಿಮೆಯ ಬೆಳಕಿನಲ್ಲಿ ವ್ಯತ್ಯಾಸವೇನೂ ಕಾಣಲಾರದು. ಚಂದ್ರನ ಆಚೀಚೆ ಇರುವ ಚಿತ್ರಾ ನಕ್ಷತ್ರ ಮತ್ತು ಶನಿಗ್ರಹಗಳು ಆಗ ಸ್ಪಷ್ಟವಾಗಿ ಕಾಣುವ ಸಾಧ್ಯತೆ ಇದೆ. ಭೂಮಿಯ ನೆರಳಿನಲ್ಲಿ ಪಾರ್ಶ್ವಛಾಯೆ ಹಾಗೂ ಪೂರ್ಣಛಾಯೆ ಎಂಬ ಎರಡು ಭಾಗಗಳಿವೆ. ಚಂದ್ರ ಮೊದಲು ಪಾರ್ಶ್ವಛಾಯಾ ಪ್ರದೇಶವನ್ನು ಪ್ರವೇಶಿಸಿದಾಗ (ರಾತ್ರಿ ೨೩:೩೨ಕ್ಕೆ) ಬರಿಗಣ್ಣಿಗೆ ಯಾವುದೇ ವ್ಯತ್ಯಾಸ ಕಾಣುವುದಿಲ್ಲ. ಅದು ಪೂರ್ಣಛಾಯಾ ಪ್ರದೇಶವನ್ನು ಪ್ರವೇಶಿಸುವುದು (೨೬ರ) ಬೆಳಗಿನ ೦೧:೨೨ಕ್ಕೆ. ಆ ಮುಂದೆ ಅದರ ಅಂಚು ಸ್ವಲ್ಪ ಕುಂದಬಹುದು. ಹೀಗೆ ದಟ್ಟ ನೆರಳಿನಲ್ಲಿ ಸಾಗಿ ೦೧:೫೩ಕ್ಕೆ ಹೊರಬರುತ್ತದೆ. ಆದ್ದರಿಂದ ಗ್ರಹಣದ ಅವಧಿ ಕೇವಲ ೩೧ ನಿಮಿಷಗಳು ಮಾತ್ರ. ಅದು ಪಾರ್ಶ್ವಛಾಯಾ ಪ್ರದೇಶದಿಂದ ಹೊರಬರುವುದು ೦೩:೪೩ಕ್ಕೆ. ಆದರೂ ಅದರ ಪರಿಣಾಮವೇನೂ ಬರಿಗಣ್ಣಿಗೆ ತಿಳಿಯುವುದಿಲ್ಲ. ಆದ್ದರಿಂದ ರಾತ್ರಿ ಒಂದೂವರೆಯ ಹೊತ್ತಿಗೆ ಚಂದ್ರನನ್ನು ನೋಡಿ; ಗ್ರಹಣದ ಸುಳಿವು ಸಿಗುತ್ತದೆಯೇ ಪರೀಕ್ಷಿಸಿ.

ಈ ತಿಂಗಳ ಕೊನೆಯಲ್ಲಿ ಉಲ್ಕಾವೃಷ್ಟಿಯಿದೆ. ಲಿರಿಡ್ಸ್ ಎಂಬ ಹೆಸರಿನ ಈ ವೃಷ್ಟಿಯ ಉಲ್ಕೆಗಳು ೨೨ರಂದು ಗರಿಷ್ಠ - ಅಂದರೆ ಗಂಟೆಗೆ ೧೦-೨೦ ಕಾಣಬಹುದು.

### ಖಗೋಳ ದಿನಚರಿ

| | |
|---|---|
| ೫ | ಚಾಂದ್ರಮಾಸದ ಕೊನೆಯ ಪಾದ - ಚಂದ್ರೋದಯ ನಡುರಾತ್ರಿಗೆ |
| ೬ | ಮಂಗಳ - ಶುಕ್ರ ಜೋಡಿ* |
| ೮ | (ಮುಂಜಾವು) ಬುಧ - ಚಂದ್ರ ಜೋಡಿ* |
| ೧೦ | ಅಮಾವಾಸ್ಯೆ ೧೫:೦೫ಕ್ಕೆ; ಚಂದ್ರ - ಶುಕ್ರ ಜೋಡಿ |
| ೧೪ | ಗುರು - ಚಂದ್ರ ಜೋಡಿ* |
| ೧೫ | ಭೂಮಿ-ಚಂದ್ರ ನಡುವೆ ಗರಿಷ್ಠ ಅಂತರ |
| ೧೮ | ಚಾಂದ್ರಮಾಸದ ಮೊದಲ ಪಾದ |
| ೨೧- ೨೩ | ಲಿರಿಡ್ಸ್ ಉಲ್ಕಾವೃಷ್ಟಿ* |
| ೨೫ | ಚಿತ್ರಾ - ಚಂದ್ರ ಜೋಡಿ (ಆಚ್ಛಾದನೆ ಕಾಣುವುದಿಲ್ಲ) |
| ೨೬ | ಹುಣ್ಣಿಮೆ ೦೧:೨೬ಕ್ಕೆ ಚಂದ್ರ - ಶನಿ ಜೋಡಿ<br>ಮುಂಜಾವು ಪಾರ್ಶ್ವ ಗ್ರಹಣ*<br>೦೧:೨೨ರಿಂದ ೦೧:೫೩ರವರೆಗೆ ಕೇವಲ ಅರ್ಧ ಗಂಟೆ ಮಾತ್ರ |
| ೨೭ | ಚಂದ್ರ - ಭೂಮಿ ನಡುವೆ ಕನಿಷ್ಠ ಅಂತರ |
| ೨೮ | ಶನಿ ಗ್ರಹದ ವಿಯುತಿ (ಸೂರ್ಯಾಸ್ತಕ್ಕೆ ಶನಿ ಉದಯಿಸುವುದು) |

(* ಛಾಯಾಗ್ರಹಣಕ್ಕೆ ಸದವಕಾಶ)

ಡಾ॥ ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರು ತಾರಾಲಯ
ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

# ಸರ್ವ ಜನತೆಯ ಹಕ್ಕುಗಳಿಗಾಗಿ ಹೋರಾಡಿದ ಡಾ|| ಬಾಬಾ ಸಾಹೇಬ ಅಂಬೇಡ್ಕರ್

**ಎಚ್. ಎಸ್. ಬೇನಾಳ**

**ಸ್ವಾ**ತಂತ್ರ್ಯ ಪ್ರತಿಯೊಬ್ಬ ಮನುಷ್ಯನ ಪ್ರಥಮ ಅವಶ್ಯಕತೆಯಾಗಿದೆ. ಸ್ವಾತಂತ್ರ್ಯವಿದ್ದಾಗಲೇ ವ್ಯಕ್ತಿ ತನ್ನ ಮನದ ಭಾವನೆಗಳನ್ನು, ವಿಚಾರಗಳನ್ನು ಸ್ಪಷ್ಟವಾಗಿ, ವ್ಯಕ್ತಪಡಿಸಬಲ್ಲನು. ಒಂದು ವೇಳೆ ಮನುಷ್ಯ ಸ್ವತಂತ್ರನಲ್ಲದಿದ್ದರೆ, ಆತನ ವಿಚಾರ ಎಷ್ಟೇ ಮಹತ್ವಪೂರ್ಣ ಹಾಗೂ ಜನಹಿತಕಾರಿಯಾಗಿದ್ದರೂ ಅದನ್ನು ಅವನು ಅಭಿವ್ಯಕ್ತಿಗೊಳಿಸಲು ಸಾಧ್ಯವಿಲ್ಲ. ಹೀಗಿರುವಾಗ ಆತನ ವಿಚಾರಗಳು ಮೆಲ್ಲ ಮೆಲ್ಲಗೆ ಮರೆತುಹೋಗುತ್ತವೆ. ಸ್ವಾತಂತ್ರ್ಯವಿರುವ ವ್ಯಕ್ತಿ ತನ್ನ ಮಾನವೀಯ ಮೌಲ್ಯಗಳ ಜೊತೆ ಅಧಿಕಾರಗಳನ್ನು ಗಳಿಸಿಕೊಳ್ಳಬಲ್ಲ ಮತ್ತು ಅದನ್ನು ಉಪಯೋಗಿಸಬಲ್ಲ. ಒಬ್ಬ ಮನುಷ್ಯನಿಗೆ ಮನುಷ್ಯನಾಗುವ ಯಾವ ಸಾಮಾನ್ಯ ಅಧಿಕಾರವಿದೆಯೋ, ಆ ಅಧಿಕಾರವನ್ನು ಭಾರತೀಯ ಸಮಾಜದಲ್ಲಿ ಬ್ರಾಹ್ಮಣ, ಪುರೋಹಿತ ವರ್ಗ ವಶಪಡಿಸಿಕೊಂಡಿದೆ. ಈ ಜನರಿಂದ ನಮ್ಮ ಮಾನವೀಯ ಅಧಿಕಾರ ಹಿಂತಿರುಗಿ ಕಳೆದುಕೊಳ್ಳುವಲ್ಲಿ ಎಳ್ಳಷ್ಟೂ ಕೊರತೆ ಉಳಿಸಬಾರದು ಎಂದು ಮಹಾತ್ಮ ಜ್ಯೋತಿರಾವ್ ಫುಲೆ ಹೇಳಿದ್ದನ್ನು ಈ ಸಂದರ್ಭದಲ್ಲಿ ನೆನೆಯುತ್ತಾ... ನಾನು ಕೆಲವೊಂದು ಪ್ರಶ್ನೆಗಳನ್ನು ತಮ್ಮ ಗಮನಕ್ಕೆ ತರಲು ಇಚ್ಛಿಸುತ್ತೇನೆ. ಅಂಬೇಡ್ಕರ್ ಎಂಬ ಹೆಸರು ಕೇಳಿದರೆ ಕೆಲವು ವರ್ಗದ ಜನ ಯಾಕೆ ಮೂಗು ಮುರಿಯುತ್ತಾರೆ ? ಮತ್ತು ಅವರನ್ನು ಒಂದು ಕೋಮಿಗೆ ಸೇರಿದ ದೃಷ್ಟಿಯಿಂದ ಕಾಣುತ್ತಾರೆ ? ಎಂಬುವುದಕ್ಕೆ ನನಗೆ ಮಹಾತ್ಮ ಜ್ಯೋತಿರಾವ್ ಫುಲೆ ಅವರು ಹೇಳಿರುವ ಮಾತು ಪದೇ ಪದೇ ನೆನಪಿಗೆ ಬರುತ್ತದೆ. ಯಾಕೆಂದರೆ ನಮ್ಮ ಜನರು ಭಾರತೀಯ ಸಮಾಜದಲ್ಲಿ ಬ್ರಾಹ್ಮಣ, ಪುರೋಹಿತ ವರ್ಗ ವಶಪಡಿಸಿಕೊಂಡಿರುವ ಅವರ ಮಾನವೀಯ ಅಧಿಕಾರವನ್ನು, ಹಿಂತಿರುಗಿ ಕಸಿದುಕೊಳ್ಳುವಲ್ಲಿ ವಿಫಲರಾಗಿದ್ದಾರೆಂದೇ ಅರ್ಥ ಅಲ್ಲವೆ ?

ನಮಗೆ ಸ್ವಾತಂತ್ರ್ಯ ಬಂದು ೬೩ ವರ್ಷ ಆಗಿಹೋಗಿದೆ. ಆದರೂ ಕೂಡ ನಮ್ಮ ಜನರು ಭಾರತಕ್ಕೆ ಸಂವಿಧಾನ ರಚಿಸಿದ ಮನುಷ್ಯನ ಬಗ್ಗೆ ಈ ರೀತಿ ಮೌನವಹಿಸಿರುವುದು ಈ ದೇಶದ ದುರಂತ, ಅಷ್ಟೆ. ಮತ್ತು ನಮ್ಮ ಇತಿಹಾಸದಲ್ಲಿ ಡಾ|| ಬಾಬಾ ಸಾಹೇಬ ಅಂಬೇಡ್ಕರ್ ಅವರ ಬಗ್ಗೆ ಏನೇನೋ ಹೇಳಲಾಗಿದೆ. ಆದರೆ ಅವರ ಜೀವನದ ನೈಜ ಅದ್ಭುತ ಸಾಧನೆಗಳನ್ನು ಮತ್ತು ಅವರು ಅಲಂಕರಿಸಿದ ಹುದ್ದೆಗಳನ್ನು ಮುಚ್ಚಿಟ್ಟಿದ್ದಾರೆ ! ಅಲ್ಲದೆ ಅವರು ಬ್ರಿಟಿಷ್ ಸರ್ಕಾರದಲ್ಲಿ ಮಂತ್ರಿಯಾಗಿದ್ದುದರ ಬಗ್ಗೆ ಮಾತನಾಡುವುದಿಲ್ಲ. ಒಂದು ವೇಳೆ ಮಾತನಾಡಿದರೆ ಅಂಬೇಡ್ಕರ್ ಅವರು ಈ ದೇಶದ ಪ್ರಬಲ ನಾಯಕರಾಗುತ್ತಾರೆನ್ನುವ ಭಯದಿಂದಲೋ ಅಥವಾ ಹೊಟ್ಟೆಕಿಚ್ಚಿನಿಂದಲೋ... ಅವರ ಬಗ್ಗೆ ಪ್ರಸ್ತಾಪಿಸುತ್ತಿಲ್ಲ!

ಆದರೂ ಇಂದು ಅಂಬೇಡ್ಕರ್ ಈ ದೇಶದ ಮಹಾನ್ ಮೇಧಾವಿ, ಪ್ರಗತಿಪರ ಚಿಂತಕ, ಮಹಾನ್ ಹೋರಾಟಗಾರ, ಧೀಮಂತ ರಾಜಕಾರಣಿ ಎಂದು ಇಡೀ ಜಗತ್ತೇ ೨೦೧೨ನೇ ವರ್ಷದಲ್ಲಿ ಮಾತನಾಡುವಾಗ ಭಾರತೀಯರು ಅವರ ಚಿಂತನೆಗಳನ್ನು ಅರಿತುಕೊಳ್ಳಬೇಕು. ಅಲ್ಲದೇ ಅವರ ಆಲೋಚನೆಗಳ ಬಗ್ಗೆ ಹಿಂದಿಗಿಂತಲೂ ಈಗ ತಿಳಿದುಕೊಳ್ಳುವುದು ಹೆಚ್ಚಿನ ಅಗತ್ಯವಿದೆ.

ಅದಕ್ಕಾಗಿ ಇಂದು ನಾವುಗಳು ಅವರು ರಚಿಸಿರುವ ಸಂವಿಧಾನದ ಬಗ್ಗೆ ಮೊದಲು ಅರಿತುಕೊಳ್ಳಬೇಕಾಗಿದೆ. ಆ ಸಂವಿಧಾನದ ಉಳಿವು-ಅಳಿವಿನ ಬಗ್ಗೆ ಅವರು ಹೇಳಿದ ಮಾತುಗಳನ್ನು ನೆನಪಿಸಿಕೊಳ್ಳುವದು ಬಹಳ ಅವಶ್ಯವಾಗಿದೆ. ಆದುದರಿಂದ ಅವರ ಸುಮಾರು ಎರಡು ವರ್ಷ, ಹನ್ನೊಂದು ತಿಂಗಳು, ಹದಿನೆಂಟು ದಿನಗಳ ನಿರಂತರ ಶ್ರಮದಿಂದ ಸಂವಿಧಾನದ ಪ್ರಾಥಮಿಕ ಕರಡನ್ನು ಸಿದ್ಧಪಡಿಸಲಾಯಿತು. ಈ ಮೂರು ವರ್ಷಗಳ ಅವಧಿಯಲ್ಲಿ ೬.೪ ಕೋಟಿ ಹಣ ಇದಕ್ಕೆ ವೆಚ್ಚವಾಯಿತು. ಸುಮಾರು ೧೧೪ ದಿನಗಳ ಕಾಲ ಕರಡು ಸಂವಿಧಾನದ ಬಗ್ಗೆ ಚರ್ಚೆ ನಡೆದು ನವೆಂಬರ್ ೨೬, ೧೯೪೯ರಂದು ಅಂಗೀಕರಿಸಲಾಯಿತು. ೩೯೫ ವಿಧಿಗಳು, ೮ ಅನುಸೂಚಿಗಳು, ೨೨ ಅಧ್ಯಾಯಗಳಿಂದ ಕೂಡಿದ ಸಂವಿಧಾನವು ಜನವರಿ ೨೬, ೧೯೫೦ರಂದು ಜಾರಿಗೆ ಬಂದಿತು.



ಡಾ|| ಬಾಬಾ ಸಾಹೇಬ ಅಂಬೇಡ್ಕರ್ ಹೋರಾಟ ಮಾಡಿದ ಹೆಚ್ಚಿನ ವಿಚಾರಗಳಲ್ಲಿ ಸಂಪೂರ್ಣ ಸ್ವಾತಂತ್ರ್ಯ ಹಾಗೂ ಸಮಾನತೆಗೆ ಅವಕಾಶಗಳನ್ನು ಪಡೆದುಕೊಳ್ಳುವದರಿಂದ ವಂಚಿತರಾಗಿದ್ದವರು, ಹೆಚ್ಚಿನ ಮಂದಿ ಸವರ್ಣೀಯರೇ ಹೊರತು ಇತರೆ ಕೆಳವರ್ಗದವರಾದ ಅಸ್ಪೃಶ್ಯರಾಗಲಿ, ಹಿಂದುಳಿದವರಾಗಲಿ ಅಲ್ಲವೇ ಅಲ್ಲ! ಏಕೆಂದರೆ ಶಿಕ್ಷಣವಾಗಲಿ, ಆಸ್ತಿಯಾಗಲಿ, ಇವರಿಗೆ ನಿಲುಕದೆ ಇದ್ದ ವಿಚಾರಗಳು. ಇದರಿಂದ ಲಾಭ ಪಡೆಯುತ್ತಿದ್ದವರು ಬ್ರಾಹ್ಮಣರು ಹಾಗೂ ಮೇಲ್ವರ್ಗದವರೇ ಆಗಿದ್ದರು. ಯಾಕೆಂದರೆ ಒಂದು ಸಾಮಾನ್ಯ ಪ್ರಾಣಿಯ ಜೀವಕ್ಕಿಂತಲೂ ಕಡೆಗಣಿಸಿದ ಅಸ್ಪೃಶ್ಯರಿಗಾಗಲಿ, ದಲಿತರಿಗಾಗಲಿ, ವ್ಯಕ್ತಿ ಸ್ವಾತಂತ್ರ್ಯವೆಂಬುವುದೇ ಇಲ್ಲದೆ ಇರುವ ಸಂದರ್ಭದಲ್ಲಿ ಮಹಿಳೆಯರ ಪರವಾದ ಇವರ ಎಲ್ಲಾ ಹೋರಾಟಗಳು ದಲಿತ ಮಹಿಳೆಯರನ್ನು, ಅಸ್ಪೃಶ್ಯರನ್ನು ಹೊರತಾಗಿಯೇ ಇದ್ದವು. ಮೇಲು-ಕೀಳೆಂಬ ಭೇದವೆಣಿಸದೆ, ಜಾತಿ-ಧರ್ಮಗಳೆಂದು ಯೋಚಿಸದೆ ಇಡೀ ಭಾರತೀಯ ಮಹಿಳೆಯರ ಪರವಾಗಿ ಡಾ|| ಬಾಬಾ ಸಾಹೇಬ ಅಂಬೇಡ್ಕರ್ ನಿಂತಿದ್ದರು.

ಸಂವಿಧಾನ ಅಂಗೀಕರಿಸುವ ಸಂದರ್ಭದಲ್ಲಿ ಡಾ|| ಬಾಬಾ ಸಾಹೇಬ ಅಂಬೇಡ್ಕರ್ ದೇಶದ ಜನತೆಗೆ ಒಂದು ಸಂದೇಶ ಸಾರಿದರು :

''ಇಂದು ನಮ್ಮ ದೇಶಕ್ಕೆ ಸಂಪೂರ್ಣ ಸ್ವಾತಂತ್ರ್ಯ ಬಂದಿದೆ. ಗಣರಾಜ್ಯ ಸ್ಥಾಪನೆ ಆಗುತ್ತದೆ. ಕೆಲವರು ಸಂವಿಧಾನವು ಒಳ್ಳೆಯದು ಎನ್ನುತ್ತಾರೆ. ಇನ್ನೂ ಕೆಲವರು ಒಳ್ಳೆಯದಲ್ಲ ಎನ್ನುತ್ತಾರೆ. ಒಂದು ಸಂವಿಧಾನ ಒಳ್ಳೆಯದು ಅಥವಾ ಕೆಟ್ಟದ್ದು ಆಗುವುದು ಅದರಲ್ಲಿ ಏನು ಬರೆದಿದ್ದಾರೆ ಎನ್ನುವದರಿಂದಲ್ಲ, ಅದು ಒಳ್ಳೆಯದು ಅಥವಾ ಕೆಟ್ಟದ್ದು ಎಂದು ಪರಿಗಣಿಸಲ್ಪಡುವುದು. ಅದನ್ನು ಆಚರಣೆಯಲ್ಲಿ ತರುವ ಜನರಿಂದ. ಅವರು ಒಳ್ಳೆಯವರಾದರೆ ಒಳ್ಳೆಯ ಸಂವಿಧಾನ, ಕೆಟ್ಟವರಾದರೆ ಕೆಟ್ಟ ಸಂವಿಧಾನ.'' ಈ ಮಾತು ಇಂದಿನ ರಾಜಕೀಯ ಸ್ಥಿತಿಯಲ್ಲಿ ಸತ್ಯವಾಗಿದೆ.

೧೯೪೯ರಲ್ಲಿ ಡಾ|| ಬಾಬಾ ಸಾಹೇಬ ಅಂಬೇಡ್ಕರ್ ಮತ್ತೊಂದು ಎಚ್ಚರಿಕೆಯ ಮಾತನ್ನು ಹೇಳಿದರು : ''ಬಹುಕಾಲದಿಂದ ನಾವು ಸ್ವತಂತ್ರರಾಗಿದ್ದೆವು. ಈಗ ಸ್ವಾತಂತ್ರ್ಯ ಪಡೆದಿದ್ದೇವೆ. ನನಗಿರುವ ಅಂಜಿಕೆ ಮತ್ತು ಸಂದೇಹ ಏನೆಂದರೆ ಈ ಸ್ವಾತಂತ್ರ್ಯವನ್ನು ನಾವು ಉಳಿಸಿಕೊಳ್ಳುತ್ತೇವೆಯೇ ? ನಾವು ಈ ದೇಶದಲ್ಲಿರುವ ಜಾತಿ, ಮತ, ಪಂಥ, ಅಸಮಾನತೆಯನ್ನು ತೊಲಗಿಸದಿದ್ದರೆ ಅನೈಕ್ಯತೆ ಉಂಟಾಗಿ ಮತ್ತೆ ನಾವು ದಾಸ್ಯದಲ್ಲಿ ಬಿದ್ದು ಹೋದೇವು. ಅಂತಹ ಕಾಲ ಬಾರದಿರಲಿ ಎಂದು ನಾನು ಆಶಿಸುತ್ತೇನೆ.''

ಅದಕ್ಕಾಗಿ ಇಂದು ಪ್ರತಿಯೊಬ್ಬ ಭಾರತೀಯ ವಿಚಾರವಂತ ಪ್ರಜೆ ನಮ್ಮ ದೇಶದ ಬಗ್ಗೆ ಚಿಂತಿಸಿ, ಗಣರಾಜ್ಯದ ರಚನೆ ಮತ್ತು ರಚನೆಯಲ್ಲಿ ಶ್ರಮವಹಿಸಿದ ಆದರ್ಶ ವ್ಯಕ್ತಿಗಳ, ತತ್ವ ನಿಷ್ಠೆಗಳ ಬಗ್ಗೆ ಸಂವಿಧಾನದಲ್ಲಿ ಅಳವಡಿಸಿರುವ, ಹಕ್ಕು ಮತ್ತು ಕರ್ತವ್ಯಗಳ ಬಗ್ಗೆ ಚಿಂತಿಸಬೇಕಾಗಿದೆ.

ಯಾಕೆಂದರೆ ಇಂದಿನ ದಿನಗಳಲ್ಲಿ ರಾಜ್ಯ, ರಾಷ್ಟ್ರಗಳಲ್ಲಿ ಭ್ರಷ್ಟಾಚಾರದ ಬಗ್ಗೆ ಮಾತನಾಡುತ್ತಿದ್ದಾರೆ. ಈ ವಿಷಯ ಕುರಿತು ೧೯೫೧ರಲ್ಲಿ ಲೋಕಸಭೆಯ ಪ್ರಥಮ ಸಾರ್ವತ್ರಿಕ ಚುನಾವಣೆಗೆ ಡಾ|| ಬಾಬಾ ಸಾಹೇಬ ಅಂಬೇಡ್ಕರ್, ಅವರು, ತಮ್ಮದೇ ರಾಜಕೀಯ ಪಕ್ಷವಾದ ಪರಿಶಿಷ್ಟ ಜಾತಿಗಳ ಒಕ್ಕೂಟದ ವತಿಯಿಂದ ಅಭ್ಯರ್ಥಿಗಳನ್ನು ಕಣಕ್ಕಿಳಿಸಿದ್ದರು. ಅಭ್ಯರ್ಥಿಗಳ ಪರವಾಗಿ ಅಂಬೇಡ್ಕರ್ ಪ್ರಚಾರವನ್ನು ಸಹ ಕೈಗೊಂಡಿದ್ದರು. ಆ ಸಂದರ್ಭ ೧೯೫೧ ಅಕ್ಟೋಬರ್, ೨೯ರಂದು ಪಂಜಾಬ್‌ನ ಪಾಟಿಯಾಲದಲ್ಲಿ ಏರ್ಪಡಿಸಿದ್ದ ಪ್ರಚಾರ ಸಭೆಯಲ್ಲಿ ಅಂಬೇಡ್ಕರ್ ಅವರು ಅಕ್ಷರಶಃ ಗುಡುಗಿದ್ದರು. ಆ ದಿನ ಅಂಬೇಡ್ಕರ್ ಅವರು ಗರಂ ಆಗಿದ್ದು ಭ್ರಷ್ಟಾಚಾರದ ವಿರುದ್ಧ, ಅವರ ರಾಜಕೀಯ ಶತ್ರುಗಳಾದ ಕಾಂಗ್ರೆಸ್ಸಿಗರು ನಡೆಸುತ್ತಿದ್ದ ಸ್ವಜನ ಪಕ್ಷಪಾತ ಮತ್ತು ಕಪ್ಪು ಹಣದ ದಂಧೆಯ ವಿರುದ್ಧ!

ಇಲ್ಲಿ ಇನ್ನೊಂದು ವಿಷಯವನ್ನು ನಿಮ್ಮ ಮುಂದಿಡಲು ಇಷ್ಟಪಡುತ್ತೇನೆ. ಅದೇನೆಂದರೆ ಮುಂದೆ ಇದೇ ಭ್ರಷ್ಟಾಚಾರದ ಕಾಂಗ್ರೆಸ್ ಸರ್ಕಾರದಲ್ಲಿ ಕಾನೂನು ಸಚಿವರಾಗಿದ್ದ ಅಂಬೇಡ್ಕರ್ ಅಂದಿನ ಪ್ರಧಾನಿಯಾದ ನೆಹರೂ ಅವರ ಮಂತ್ರಿಮಂಡಲದಲ್ಲಿ ಭ್ರಷ್ಟಾಚಾರ ಬೃಹದಾಕಾರವಾಗಿ ಬೆಳೆದಿದೆ ಎಂದು ಗುಡುಗಿದ್ದರು. ಆದರೆ ಆ ನಿಟ್ಟಿನಲ್ಲಿ ಸ್ವತಃ ಪ್ರಯತ್ನಿಸಿದ ಅಂಬೇಡ್ಕರ್ ಹೀಗೆ ಹೇಳುತ್ತಾರೆ. ''ಚುನಾವಣಾ ಪ್ರಾತಿನಿಧ್ಯ ಕಾಯಿದೆಗೆ ಸೂಕ್ತ ತಿದ್ದುಪಡಿ ತರುವ ಮೂಲಕ ಭ್ರಷ್ಟಾಚಾರ ನಿರ್ಮೂಲನೆಯ ಕಠಿಣ ಕ್ರಮಕ್ಕೆ ಮುಂದಾಗಿದ್ದರು. ಗುತ್ತಿಗೆದಾರರು, ಕಾಳಸಂತೆಕೋರರು, ನಕಲಿ ಪರ್ಮಿಟ್, ಲೈಸೆನ್ಸ್‌ಗಳನ್ನು ಹೊಂದಿದವರು, ಇಂತಹ ಲೂಟಿಕೋರರಿಗೆ ಚುನಾವಣೆಗೆ ಸ್ಪರ್ಧಿಸದಂತೆ ನಿಷೇಧಿಸಿ ಪ್ರಜಾಪ್ರತಿನಿಧಿ ಕಾಯ್ದೆಗೆ ತಿದ್ದುಪಡಿ ತರಲು ಅವರು ಮುಂದಾಗಿದ್ದರು. ಆದರೆ ? ಈ ಪ್ರಯತ್ನಗಳನ್ನು ಸ್ವತಃ ಕಾಂಗ್ರೆಸ್ಸಿಗರೇ ಪ್ರಬಲವಾಗಿ ವಿರೋಧಿಸಿದರು ! ತನ್ಮೂಲಕ ಭ್ರಷ್ಟಾಚಾರದ ಬುಡಕ್ಕೆ ಕೊಡಲಿ ಪೆಟ್ಟು ಹಾಕುವ ಅವರ ಯತ್ನಕ್ಕೆ ಕಾಂಗ್ರೆಸ್ಸಿಗರು ಅಡ್ಡಗಾಲಾದರು'' ಎನ್ನುತ್ತಾರೆ.

ಬ್ರಿಟಿಷರ ಆಡಳಿತಕ್ಕಿಂತ ಈಗ ಭ್ರಷ್ಟಾಚಾರ ಮತ್ತು ಇತರ ಕುಕೃತ್ಯಗಳು ಬೃಹದಾಕಾರವಾಗಿ ಬೆಳೆದಿವೆ. ಹಸಿವಿನಿಂದ ಜನರು ಸಾಯುತ್ತಿದ್ದಾರೆ. ಬಡವರ ಮತ್ತು ಶ್ರೀಮಂತರ ನಡುವಿನ ಅಂತರ ತೀವ್ರಗತಿಯಲ್ಲಿ ಏರುತ್ತಿದೆ ಎಂದು ಅಂದು ಡಾ|| ಬಾಬಾ ಸಾಹೇಬ ಅಂಬೇಡ್ಕರ್ ಹೇಳಿದ್ದುದರ ಬಗ್ಗೆ ಇಂದು ಭಾರತೀಯರೆಲ್ಲರೂ ಆಳವಾಗಿ ಚಿಂತಿಸಬೇಕಿದೆ.

ಇಂದು ಜಗತ್ತಿನಲ್ಲಿ ಮಹಿಳೆಯರ ಮೇಲೆ ಅನ್ಯಾಯ-ಅತ್ಯಾಚಾರ, ಮಾನಭಂಗ, ಲೈಂಗಿಕ ದೌರ್ಜನ್ಯ ಮತ್ತು ಹಿಂಸೆ ನಡೆಯುತ್ತಿವೆ. ಇಂಥ ಕೃತ್ಯಗಳನ್ನು ಕಟುವಾಗಿ ಟೀಕಿಸಿದವರು ಡಾ|| ಬಾಬಾ ಸಾಹೇಬ ಅಂಬೇಡ್ಕರ್.

ಡಾ|| ಬಾಬಾ ಸಾಹೇಬ ಅಂಬೇಡ್ಕರ್ ಹಿಂದೂ ಮಹಿಳೆಯ ಸರ್ವಾಂಗೀಣ ಅಭಿವೃದ್ಧಿಗಾಗಿ ಹಿಂದೂ ಕೋಡ್ ಬಿಲ್‌ಅನ್ನು ಪಾರ್ಲಿಮೆಂಟ್‌ನಲ್ಲಿ ಮಂಡಿಸಿದರು. ಅದನ್ನು ಜಾರಿಗೆ ತರುವಲ್ಲಿ ಸಂಪ್ರದಾಯವಾದಿ ಸರ್ಕಾರ ಹಿಂಜರಿದಾಗ ೧೯೫೧ರ ಸೆಪ್ಟೆಂಬರ್ ೨೭ರಂದು ಡಾ|| ಅಂಬೇಡ್ಕರ್ ತಮ್ಮ ಮಂತ್ರಿ ಪದವಿಗೆ ರಾಜೀನಾಮೆಯನ್ನು ನೆಹರೂ ಅವರಿಗೆ ನೀಡಿ ಹೊರ ಬಂದರು. ಇದು ಇತಿಹಾಸ. ಹೀಗೆ ಮಹಿಳೆಯರ ಕಣ್ಣೀರು ಒರೆಸಲು ತಾನೇ ಕಣ್ಣೀರಿಟ್ಟವರು ಡಾ|| ಅಂಬೇಡ್ಕರ್.

೧೯೫೧ರ ಅಕ್ಟೋಬರ್ ೧೧ರಂದು ಅಂಬೇಡ್ಕರ್ ತಮ್ಮ ರಾಜೀನಾಮೆಯ ಬಗ್ಗೆ ಪಾರ್ಲಿಮೆಂಟನಲ್ಲಿ ಸ್ಪಷ್ಟೀಕರಣ ನೀಡಲು ಸಭಾಪತಿಯವರು ಸಮ್ಮತಿಸಿದಾಗ ಅವರು ಸಭಾತ್ಯಾಗ ಮಾಡಿ ಹೊರಬಂದು ತಮ್ಮ ರಾಜೀನಾಮೆ ಪತ್ರದ ಪ್ರತಿಗಳನ್ನು ಪತ್ರಿಕಾ ಪ್ರತಿನಿಧಿಗಳಿಗೆ ಹಂಚಿದರು. ಬಾಬಾ ಸಾಹೇಬರು ತಮ್ಮ ನಿವೇದನೆಯಲ್ಲಿ, ''ಸಮಾಜವು ತನ್ನ ಭೂತಕಾಲದಿಂದ ಭವಿಷ್ಯತ್ಕಾಲಕ್ಕೆ ಮಗ್ಗಲು ಬದಲಾಯಿಸುವಾಗ ವಿವೇಕ ಸಮ್ಮತವಾದ ವಿಷಯಗಳನ್ನೇ ಅಂಗೀಕರಿಸಬೇಕಾಗುತ್ತದೆ'' ಎಂದು ಸ್ಪಷ್ಟೀಕರಿಸಿದರು.

ಮುಂದುವರಿದು, ಆ ಹಿಂದೂ ಧರ್ಮವನ್ನು ಸ್ಪರ್ಶ ಮಾಡದೆ ಆರ್ಥಿಕ ಸುಧಾರಣೆಗಾಗಿ ಒಂದರ ಮೇಲೊಂದು ಕಾನೂನು ಮಾಡುತ್ತ ಕುಳಿತುಕೊಂಡರೆ ಸಂವಿಧಾನದ ಚೇಷ್ಟೆ ಮಾಡಿದಂತೆ ಅಥವಾ ಮರಳಿನ ಮೇಲೆ ಕೋಟೆ ಕಟ್ಟಿದಂತೆಯೇ ಸರಿ ಎಂದರು. ಇದು ಭಾರತೀಯ ಸಾಮಾಜಿಕ ರಚನೆ ಹಾಗೂ ಅವರನ್ನು ಆಳುವ ಮುಖಂಡರಿಗೆ ಡಾ|| ಬಾಬಾ ಸಾಹೇಬ ಅವರು ನೀಡಿದ ಮಾರ್ಮಿಕ ಉತ್ತರವಾಗಿತ್ತು.

ಡಾ|| ಬಾಬಾ ಸಾಹೇಬ ಅಂಬೇಡ್ಕರ್ ಹೋರಾಟ ಮಾಡಿದ ಹೆಚ್ಚಿನ ವಿಚಾರಗಳಲ್ಲಿ ಸಂಪೂರ್ಣ ಸ್ವಾತಂತ್ರ್ಯ ಹಾಗೂ ಸಮಾನತೆಗೆ ಅವಕಾಶಗಳನ್ನು ಪಡೆದು ಕೊಳ್ಳುವದರಿಂದ ವಂಚಿತರಾಗಿದ್ದವರು, ಹೆಚ್ಚಿನ ಮಂದಿ ಸವರ್ಣೀಯರೇ ಹೊರತು ಇತರೆ ಕೆಳವರ್ಗದವರಾದ ಅಸ್ಪೃಶ್ಯರಾಗಲಿ, ಹಿಂದುಳಿದವರಾಗಲಿ ಅಲ್ಲವೇ ಅಲ್ಲ! ಏಕೆಂದರೆ ಶಿಕ್ಷಣವಾಗಲಿ, ಆಸ್ತಿಯಾಗಲಿ, ಇವರಿಗೆ ನಿಲುಕದೆ ಇದ್ದ ವಿಚಾರಗಳು. ಇದರಿಂದ ಲಾಭ ಪಡೆಯುತ್ತಿದ್ದವರು ಬ್ರಾಹ್ಮಣರು ಹಾಗೂ ಮೇಲ್ವರ್ಗದವರೇ ಆಗಿದ್ದರು.

ಯಾಕೆಂದರೆ ಒಂದು ಸಾಮಾನ್ಯ ಪ್ರಾಣಿಯ ಜೀವಕ್ಕಿಂತಲೂ ಕಡೆಗಣಿಸಿದ ಅಸ್ಪೃಶ್ಯರಿಗಾಗಲಿ, ದಲಿತರಿಗಾಗಲಿ, ವ್ಯಕ್ತಿ ಸ್ವಾತಂತ್ರ್ಯವೆಂಬುವುದೇ ಇಲ್ಲದೆ ಇರುವ ಸಂದರ್ಭದಲ್ಲಿ ಮಹಿಳೆಯರ ಪರವಾದ ಇವರ ಎಲ್ಲಾ ಹೋರಾಟಗಳು ದಲಿತ ಮಹಿಳೆಯರನ್ನು, ಅಸ್ಪೃಶ್ಯರನ್ನು ಹೊರತಾಗಿಯೇ ಇದ್ದವು. ಮೇಲು-ಕೀಳೆಂಬ ಭೇದವೆಣಿಸದೆ, ಜಾತಿ-ಧರ್ಮಗಳೆಂದು ಯೋಚಿಸದೆ ಇಡೀ ಭಾರತೀಯ ಮಹಿಳೆಯರ ಪರವಾಗಿ ಡಾ|| ಬಾಬಾ ಸಾಹೇಬ ಅಂಬೇಡ್ಕರ್ ನಿಂತಿದ್ದರು.

ಈ ವಿಚಾರವಾಗಿ ಹೆಣ್ಣುಮಕ್ಕಳಿಗೆ ಜನ್ಮ ನೀಡಿದ ತಂದೆ ತಾಯಿಯಂದಿರು, ಭಾರತೀಯ ಹೆಣ್ಣು ಮಕ್ಕಳು ಹಾಗೂ ಇಡೀ ಪ್ರಪಂಚದ ಮಹಿಳೆಯರು ಅಂಬೇಡ್ಕರ್ ಅವರ ಬಗ್ಗೆ, ಅವರ ವ್ಯಕ್ತಿತ್ವದ ಬಗೆ, ನಿಲುವುಗಳ ಬಗೆ ಅರಿತುಕೊಳ್ಳುವುದು ಇಂದು ಬಹಳ ಅವಶ್ಯವಾಗಿದೆ.




ನವಕರ್ನಾಟಕ ಪ್ರಕಟಿಸಿರುವ ಶ್ರೀವಿದ್ಯಾ ನಟರಾಜನ್ ಹಾಗೂ ಎಸ್. ಆನಂದ್ ರಚಿಸಿ, ವಿ. ಎಸ್. ಎಸ್. ಶಾಸ್ತ್ರಿ ಅನುವಾದಿಸಿದ 'ಭೀಮಾಯಣ' ಕೃತಿಗೆ ಅದರ ಕಲಾವಿನ್ಯಾಸಕ್ಕಾಗಿ 'ಕನ್ನಡ ಪುಸ್ತಕ ಪ್ರಾಧಿಕಾರ'ದಿಂದ ನೀಡಲಾಗುವ ೨೦೧೨ನೇ ಸಾಲಿನ 'ಪುಸ್ತಕ ಸೊಗಸು ಮಕ್ಕಳ ಸಾಹಿತ್ಯ ಪ್ರಶಸ್ತಿ'ಯನ್ನು ನೀಡಿ ಗೌರವಿಸಿರುವುದು ಪ್ರಕಾಶಕರಿಗೆ ಸಂತೋಷ ತಂದಿದೆ. ಪುಸ್ತಕದ ಅಂದವನ್ನು ಹೆಚ್ಚಿಸಿದ ಪಾರ್ಧಾನ್‌ಗೊಂಡ ಕಲಾಪ್ರಕಾರವಾದ ಡಿಗ್ನಾ ಕಲಾಕಾರರಾದ ದುರ್ಗಾಬಾಯಿ ವ್ಯಾಮ್, ಸುಭಾಷ್ ವ್ಯಾಮ್ ಅವರಿಗೆ ನಮ್ಮ ಅಭಿನಂದನೆಗಳು.

ತಮಿಳುನಾಡು ಮತ್ತು ಕರ್ನಾಟಕ ರಾಜ್ಯ ನೀರಿಗಾಗಿ ಸ್ವಾತಂತ್ರ್ಯ ಪೂರ್ವದಿಂದ ಇಂದಿನವರೆಗೂ ಸಮಸ್ಯೆಗೆ ಪರಿಹಾರ ಕಂಡುಕೊಳ್ಳದೆ, ಕಚ್ಚಾಡುತ್ತಿರುವುದು, ನೀರಿಗಾಗಿ ರೈತರ ಉಪವಾಸ ಸತ್ಯಾಗ್ರಹ, ಹೋರಾಟಗಳು ನಡೆಯುತ್ತಿರುವುದು ಒಂದು ಕಡೆಯಾದರೆ, ಅತಿವೃಷ್ಟಿ-ಅನಾವೃಷ್ಟಿ ಮತ್ತು ಪ್ರವಾಹಗಳಿಂದ ಸಂಭವಿಸುವ ರೈತರ ಆತ್ಮಹತ್ಯೆ ಇನ್ನೊಂದು ಕಡೆ. ಇಂತಹ ಸಮಸ್ಯೆಗಳಿಂದ, ತೊಂದರೆಗಳಿಂದ ರೈತರು ಮತ್ತು ಕಾರ್ಮಿಕರ ಹಿತಾಸಕ್ತಿಯ ಬಗ್ಗೆ ಆಲೋಚಿಸಿದ ಮೊದಲಿಗರು ಅಂಬೇಡ್ಕರ್ ಅವರು.




ಅದಕ್ಕಾಗಿ ಪ್ರವಾಹವನ್ನು ತಡೆಗಟ್ಟಿ ಅಣೆಕಟ್ಟು ನಿರ್ಮಿಸಿ ಕೃಷಿಕರಿಗೆ ನೀರು, ಜನರು ಕುಡಿಯಲು ನೀರು, ಕೈಗಾರಿಕೆಗೆ ಬಳಸಲು ನೀರು ಒದಗಿಸಿದ ಮಹಾನ್ ನೀರಾವರಿ ತಜ್ಞ ಡಾ|| ಬಾಬಾ ಸಾಹೇಬ ಅಂಬೇಡ್ಕರ್.

ಅಂತಹವರ ಕುರಿತು ಅರಿತುಕೊಳ್ಳದ ಜನರು ಅವರ ಹೆಸರು ಕೇಳಿದರೆ ಮುಖ ಕೆಡಿಸಿಕೊಳ್ಳುತ್ತಾರೆ. ಏಕೆಂದರೆ ಇವರಿಗೆ ಅವರ ನೈಜ ಜೀವನದ ಹೋರಾಟದ ವಿವರಗಳು ಇನ್ನೂ ತಿಳಿದಿಲ್ಲ. ಅಂತಹ ನೈಜ ಹೋರಾಟವೊಂದರಲ್ಲಿ ತಾವು ಬ್ರಿಟಿಷ್ ಸರ್ಕಾರದಲ್ಲಿ ಕಾರ್ಮಿಕ ಮತ್ತು ನೀರಾವರಿ ಸಚಿವರಾಗಿದ್ದಾಗ ಒರಿಸ್ಸಾದ ದಾಮೋದರ ನದಿಯ ಪ್ರವಾಹಕ್ಕೆ ಸಂಬಂಧಿಸಿದಂತೆ ವಿಶ್ವೇಶ್ವರಯ್ಯನವರು ನೀಡಿದ ವರದಿಯನ್ನು ಅಂಬೇಡ್ಕರರು ತಿರಸ್ಕರಿಸಿದ್ದರು ! ಯಾಕೆಂದರೆ ವಿಶ್ವೇಶ್ವರಯ್ಯನವರು ಪ್ರವಾಹವನ್ನು ತಡೆಯಲು ಆ ನದಿಯ ನೀರನ್ನು ಸಂಪೂರ್ಣವಾಗಿ ಸಮುದ್ರಕ್ಕೆ ಹರಿಯಲು ಬಿಡಬೇಕು ಎಂದು ವರದಿ ಸಲ್ಲಿಸಿದ್ದರು !

ಜನಕ್ಕೆ ಉಪಯೋಗವಾಗದ ವಿಶ್ವೇಶ್ವರಯ್ಯನವರ ಆ ವರದಿಯನ್ನು ಅಂಬೇಡ್ಕರ್ ಅವರು ಕಸದ ಬುಟ್ಟಿಗೆ ಎಸೆದಿದ್ದರು ! ಬದಲಿಗೆ ಆ ನದಿಗೆ ಹಿರಾಕುಡ್ ಬಳಿ ಅಣೆಕಟ್ಟು ನಿರ್ಮಿಸಲು ಬ್ರಿಟಿಷ್ ಸರ್ಕಾರಕ್ಕೆ ಸ್ವತಃ ಸಲಹೆ ನೀಡಿದ ಅಂಬೇಡ್ಕರ್ ಆ ಮೂಲಕ ಲಕ್ಷಾಂತರ ರೈತರಿಗೆ ಅನ್ನದಾತರಾದರು.

ಇಷ್ಟೇ ಅಲ್ಲದೆ, ಅವರು ಭಾರತದ ಕಾರ್ಮಿಕರು ಮತ್ತು ಅವರ ಸಮಸ್ಯೆಗಳನ್ನು ಕುರಿತು ಗಂಭೀರವಾಗಿ ಆಲೋಚಿಸಿದ್ದನ್ನು ತಿಳಿಯುವುದು, ಇಂದಿನ ಕಾರ್ಮಿಕರಿಗೆ ಅವಶ್ಯವಾಗಿದೆ.

ಇಲ್ಲಿ ಮುಖ್ಯವಾಗಿ ತಿಳಿಯಬೇಕಾದ ಸತ್ಯಾಂಶವೊಂದಿದೆ. ಅಂಬೇಡ್ಕರ್ ಈ ದೇಶದ ಮೊಟ್ಟ ಮೊದಲ ದಲಿತ ವರ್ಗಕ್ಕೆ (ಮರಾಠಿಯಲ್ಲಿ ಮಹರ್ ಜಾತಿ - ಕನ್ನಡದಲ್ಲಿ ಹೊಲೆಯ) ಸೇರಿದ ಮಂತ್ರಿ ಮತ್ತು ಕಾರ್ಮಿಕ ಇಲಾಖೆ ಸಚಿವರಾಗಿದ್ದರು. ಡಾ|| ಬಾಬಾ ಸಾಹೇಬ ಈ ಸ್ವತಂತ್ರ ಭಾರತದಲ್ಲಿ ನಾಲ್ಕು ವರ್ಷ, ಬ್ರಿಟಿಷ್ ಸರ್ಕಾರದಲ್ಲಿ ನಾಲ್ಕು ವರ್ಷ, ಒಟ್ಟು ಎಂಟು ವರ್ಷ ಮಂತ್ರಿಯಾಗಿದ್ದರು. ೧೯೪೨ರಿಂದ ೧೯೪೬ವರೆಗೆ ತಮ್ಮ ಬಿಡುವಿಲ್ಲದ ಹೋರಾಟಗಳ ನಡುವೆಯೂ ಅವರು ಅಂದಿನ ಕೇಂದ್ರ ಮಂತ್ರಿ ಮಂಡಲದಂತಿದ್ದ ಗೌರ್‍ನರ್ ಜನರಲ್ ಅವರ ಕಾರ್ಯಕಾರಿ ಸಮಿತಿಯಲ್ಲಿ ಸದಸ್ಯರಾಗಿದ್ದುದರ ಬಗ್ಗೆ ಬಹಳಷ್ಟು ಜನಸಾಮಾನ್ಯರಿಗೆ ಇನ್ನೂ ತಿಳಿದಿಲ್ಲ.

ಬ್ರಿಟಿಷ್ ಗೌರ್‍ನರ್ ಜನರಲ್ ಅವರ ಮಂತ್ರಿ ಮಂಡಲದಲ್ಲಿ ಮೊದಲು ಕಾರ್ಮಿಕ ಸಚಿವರಾಗಿ, ನೀರಾವರಿ ಮತ್ತು ಲೋಕೋಪಯೋಗಿಯಂತಹ ಪ್ರಮುಖ ಇಲಾಖೆಗಳ ಮಂತ್ರಿಯಾಗಿ ಕಾರ್ಯನಿರ್ವಹಿಸಿದ್ದರು.

ಭಾರತದ ಕಾರ್ಮಿಕರ ಹಾಗೂ ಅವರ ಸಮಸ್ಯೆಗಳ ಕುರಿತು ಮಾತನಾಡುತ್ತ ಅಂಬೇಡ್ಕರ್ ಅವರು, ''ನನ್ನ ದೃಷ್ಟಿಯಲ್ಲಿ ಕಾರ್ಮಿಕರು ಎಂದರೆ, ವಿಶೇಷವಾಗಿ ಈ ದೇಶದ ಕಾರ್ಮಿಕರು, ಈ ತಮ್ಮ ಇಬ್ಬರು ಶತ್ರುಗಳ ಬಗ್ಗೆ ತಲೆಕೆಡಿಸಿಕೊಳ್ಳಬೇಕು. ಅವರೆಂದರೆ ಒಂದು 'ಬ್ರಾಹ್ಮಣಶಾಹಿ' ಮತ್ತೊಂದು 'ಬಂಡವಾಳಶಾಹಿ' '' ಎಂದಿದ್ದರು.

''ಬ್ರಾಹ್ಮಣಶಾಹಿ ಎಂದರೆ ಬ್ರಾಹ್ಮಣ ಸಮುದಾಯವಲ್ಲ, ಅವರು ಪಡೆದಿರುವ ಹಕ್ಕು, ಅಧಿಕಾರಗಳು ಅಲ್ಲ. ನನ್ನ ಪ್ರಕಾರ ಬ್ರಾಹ್ಮಣಶಾಹಿ ಎಂದರೆ ಸಮಾನತೆ, ಸ್ವಾತಂತ್ರ್ಯ, ಸಹೋದರತೆಯ ನಿರಾಕರಣೆ ಎಂದರ್ಥ. ಈ ಅರ್ಥದಲ್ಲಿ ಬ್ರಾಹ್ಮಣಶಾಹಿವಾದದ ಮೂಲ ಬ್ರಾಹ್ಮಣರೇ ಇರಬಹುದು. ಆದರೆ ಅದು ಅವರಿಗೆ ಮಾತ್ರ ಸೀಮಿತವಾಗಿಲ್ಲ. ಸಮಾಜದ ಎಲ್ಲ ವರ್ಗಗಳಲ್ಲೂ ಎಲ್ಲ ಜಾತಿಯ ಜನರಲ್ಲೂ ಹಾಸುಹೊಕ್ಕಾಗಿದೆ. ಆ ಮೂಲಕ ಬ್ರಾಹ್ಮಣಶಾಹಿ ಎಲ್ಲಾ ಜನರ ಆಲೋಚನೆ ಮತ್ತು ಕಾರ್ಯಗಳನ್ನು ನಿಯಂತ್ರಿಸುತ್ತದೆ. ಕೆಲವೇ ಜನರಿಗೆ ಕಣ್ಣಿಗೆ ಬೆಣ್ಣೆ ಹಚ್ಚಿದಂತೆ ಉನ್ನತ ಸ್ಥಾನವನ್ನು ನೀಡುತ್ತದೆ. ಇನ್ನು ಉಳಿದ ಕೆಲವರಿಗೆ ಸಮಾನ ಅವಕಾಶಗಳನ್ನು ನಿರಾಕರಿಸುತ್ತದೆ.

ಬ್ರಾಹ್ಮಣಶಾಹಿವಾದ ಸಾಮಾಜಿಕ ಹಕ್ಕುಗಳನ್ನು ನಿರಾಕರಿಸುವುದಕ್ಕಷ್ಟೇ ಸೀಮಿತವಾಗಿರುವದಿಲ್ಲ, ಬದಲಿಗೆ ನಾಗರಿಕ ಹಕ್ಕುಗಳನ್ನು ನಿರಾಕರಿಸುತ್ತಾ, ತನ್ನ ಕಪಿಮುಷ್ಟಿಗಳಿಂದ ಬಂಧಿಸುತ್ತದೆ. ಇದಕ್ಕೆ ಸೂಕ್ತ ನಿದರ್ಶನವೆಂದರೆ ಶೋಷಿತ ಸಮುದಾಯಕ್ಕೆ ಸೇರಲಾರದ ಕಾರ್ಮಿಕರ ಜೊತೆಗೆ ಹೋಲಿಸಿದಾಗ ಅವರಲ್ಲಿ ಯಾರಿಗೆ ಹೆಚ್ಚಿನ ಅವಕಾಶಗಳು ದೊರೆಯುತ್ತವೆ ? ಎಂಬುದು ಒಂದು ಪ್ರಶ್ನೆಯಾದರೆ ಒಂದು ವೇಳೆ ಅವಕಾಶ ದೊರೆತ ಶೋಷಿತ ಸಮುದಾಯದ ಕಾರ್ಮಿಕರಿಗೆ ಸೇವಾ ಭದ್ರತೆ ಹಾಗೂ ಬಡ್ತಿಯಲ್ಲಿ ಸಿಗುವ ಆದ್ಯತೆಯಾದರೂ ಏನು ? ಎಂಬುದು ಇನ್ನೊಂದು ಪ್ರಶ್ನೆಯಾಗಿದೆ.

ಇಲ್ಲಿ ಕ್ರೂರ ಸತ್ಯಾಂಶವೆಂದರೆ ಹಲವಾರು ಸಂದರ್ಭದಲ್ಲಿ ಅವರು ಅಸ್ಪೃಶ್ಯರೆಂಬ ಕಾರಣಕ್ಕಾಗಿಯೇ ಶೋಷಿತ ವರ್ಗಕ್ಕೆ ಸೇರಿದ ಕಾರ್ಮಿಕರನ್ನು ಹಲವಾರು ಪ್ರಮುಖ ವೃತ್ತಿಗಳಿಂದ ದೂರವಿರಿಸಲಾಗಿದೆ. (ಪ್ರಮುಖವಾದ 'ಎ' ಮತ್ತು 'ಬಿ' ದರ್ಜೆಯ ಹುದ್ದೆಗಳು). ಈ ವಿಷಯಗಳಿಗೆ ಪೂರಕವಾಗಿ ಮುಂಬೈಯ ಹತ್ತಿ ಗಿರಣಿಗಳ ಬಗ್ಗೆ ತಿಳಿಸುತ್ತಾರೆ. ಈ ಗಿರಣಿಗಳಲ್ಲಿ ಹೆಚ್ಚು ಸಂಬಳ ಬರುವ ನೇಯ್ಗೆ ವಿಭಾಗದಿಂದ ಅವರನ್ನು ದೂರವಿಟ್ಟು ಕಡಿಮೆ ಸಂಬಳ ಬರುವ ನೂಲು ಬಿಚ್ಚುವ ವಿಭಾಗದಲ್ಲಷ್ಟೆ ದುಡಿಸುತ್ತಿರುವುದನ್ನು ಉದಾಹರಣೆ ಕೊಡುತ್ತಾರೆ.

ಈ ಮೂಲಕ ಬ್ರಾಹ್ಮಣಶಾಹಿವಾದ ಈ ದೇಶದ ಕಾರ್ಮಿಕರಲ್ಲಿ ವಿಶೇಷವಾಗಿ ಶೋಷಿತ ವರ್ಗಗಳ ಕಾರ್ಮಿಕರ ಮೇಲೆ ಘೋರ ಪರಿಣಾಮವನ್ನು ಬೀರುತ್ತಿರುವದರ ಬಗ್ಗೆ ಸಹ ವಿಸ್ತಾರವಾಗಿ ಅಂಬೇಡ್ಕರ್ ಅವರು ಪ್ರಸ್ತಾಪಿಸುತ್ತಾರೆ.

ಅಂದು ಅಂಬೇಡ್ಕರ್ ಅವರು ಹೇಳಿರುವಂತೆ ವಿಷಯಗಳು, ಇಂದಿಗೂ ಪ್ರಸ್ತುತ ರೈಲ್ವೆ ಇಲಾಖೆ, ಆರೋಗ್ಯ ಇಲಾಖೆ, ಶಿಕ್ಷಣ ಇಲಾಖೆ, ನಗರ ಪಾಲಿಕೆ ಇಲಾಖೆ, ಮುಂತಾದ ಇಲಾಖೆಗಳಲ್ಲಿ ಹೆಚ್ಚಾಗಿ ದಲಿತರೇ ಇದ್ದಾರೆ. ಈ ಎಲ್ಲಾ ಇಲಾಖೆಗಳಲ್ಲಿ 'ಡಿ' ಗ್ರೂಪ್ ನೌಕರರಾಗಿ, (ಕಕ್ಕಸ್ಸು, ಉಚ್ಚೆ) ಮಲ, ಮೂತ್ರ ಸ್ವಚ್ಛಗೊಳಿಸುವ, ಗಾರ್ಡ್‌ಗಳಾಗಿ ದಿನಗೂಲಿ ನೌಕರರಾಗಿ ಕಡಿಮೆ ಸಂಬಳಕ್ಕೆ ದುಡಿಯುತ್ತಿದ್ದಾರೆ. ಇದರಿಂದ ಈ ಕಾರ್ಮಿಕ (ದಲಿತ) ಕೇವಲ ಕೂಲಿ ಮಾಡುವ ಕಾರ್ಮಿಕನಷ್ಟೇ. ಅವನು ಕೂಲಿಕಾರನಾಗಿಯೇ ಉಳಿಯುತ್ತಾನೆ ಎಂಬ ಅಂಬೇಡ್ಕರ್ ಅವರ ಮಾತು ಇಂದಿಗೂ ಪ್ರಸ್ತುತವಾಗಿದೆ. ಸ್ವಾತಂತ್ರ್ಯ ಸಿಕ್ಕು, ಸಂವಿಧಾನ ಜಾರಿಗೆ ಬಂದು ಮೀಸಲಾತಿ ಶೇ. ೧೮ ಇದ್ದರೂ ಈ ಮೀಸಲಾತಿ ಎಲ್ಲಿ ಭರ್ತಿ ಮಾಡುತ್ತಿದ್ದಾರೆ ಎಂಬುದೇ ಗೊತ್ತಿಲ್ಲ! (ಬ್ಯಾಕ್‌ಲಾಗ್ ಹುದ್ದೆಗಳಲ್ಲಿ 'ಎ' ಮತ್ತು 'ಬಿ' ದರ್ಜೆ).

ನಾವುಗಳು ಇಲ್ಲಿ ವಾಸ್ತವಾಂಶವನ್ನು ತಿಳಿದುಕೊಳ್ಳಬೇಕಾಗಿದೆ. ಅದೇನೆಂದರೆ, ಯಾವ ''ಬ್ರಾಹ್ಮಣಶಾಹಿವಾದ ಒಂದು ಪ್ರಮುಖ ಸಮಸ್ಯೆಯನ್ನು ಈ ದೇಶದ ಕಾರ್ಮಿಕ ನಾಯಕರುಗಳು ಸಮಸ್ಯೆಯೆಂದು ಪರಿಗಣಿಸಿರಲಿಲ್ಲವೋ ಅಂತಹುದನ್ನು ಸಮಸ್ಯೆಯೆಂದು ಗುರುತಿಸಿದವರು ಡಾ|| ಅಂಬೇಡ್ಕರ್. ಯಾಕೆಂದರೆ ಭಾರತವು ದೇಶದಲ್ಲಿ ಹಲವಾರು ಸಮುದಾಯಗಳ, ಸಮಾಜಗಳಿಂದ ಕೂಡಿದೆ. ಇಲ್ಲಿ ಅಸಮ ಸಾಮಾಜಿಕ ವ್ಯವಸ್ಥೆಗೆ ಮಾರ್ಕ್ಸ್‌ವಾದವನ್ನು ಅನ್ವಯಮಾಡುವುದು ಅದೆಷ್ಟು ಸರಿ ? ಇಲ್ಲಿ ಒಬ್ಬ ಹೊಲಗೇರಿಯ ಕಾರ್ಮಿಕ, ಒಬ್ಬ ಬ್ರಾಹ್ಮಣಕೇರಿಯ ಕಾರ್ಮಿಕ ಇಬ್ಬರೂ ಒಂದೇ ಹುದ್ದೆಯಲ್ಲಿ ದುಡಿಯುತ್ತಿದ್ದಾರೆ, ಅವರು ಧರಿಸಿರುವ ಬಟ್ಟೆಗಳು ಒಂದೇ ಆಗಿವೆ. ಮತ್ತು ಇವರ ವೇತನ ಶ್ರೇಣಿಯು ಒಂದೇ ಇದೆ. ಆದರೆ ಅವರಿಬ್ಬರು ಒಂದೇ ಎನ್ನಲು ಸಾಧ್ಯವೇ ? ಇದು ಸಾಧ್ಯವಿಲ್ಲದ ಸಮಸ್ಯೆ, ಅದುವೇ ಬ್ರಾಹ್ಮಣಶಾಹಿವಾದ'' ಎಂದು ಅಂಬೇಡ್ಕರ್ ಎಳೆ ಎಳೆಯಾಗಿ ಬಿಡಿಸಿ ಹೇಳಿದ್ದಾರೆ.

**ಎಚ್. ಎಸ್. ಬೇನಾಳ**
ಪ್ಲಾಟ್ ನಂ. ೪೦೮, ಸಿ.ಐ.ಬಿ. ಕಾಲೋನಿ
ಕೇಂದ್ರ ಬಸ್ ನಿಲ್ದಾಣ ಹಿಂದುಗಡೆ, ಎಮ್. ಎಸ್. ಕೆ. ಮಿಲ್ ರೋಡ್
ಗುಲಬರ್ಗಾ - ೫೮೫ ೧೦೩

# ಮಾನವ ಹಕ್ಕುಗಳ ಉಲ್ಲಂಘನೆ -ನಿಜವಾದ ಅಪರಾಧಿ ಯಾರು ?



ಕಳೆದ ಹತ್ತು ಹನ್ನೆರಡು ವರ್ಷಗಳಲ್ಲಿ, ಅಮೆರಿಕ ಭಯೋತ್ಪಾದಕರ ಮೇಲೆ ಸಮರ ಸಾರಿದ ಮೇಲೆ ಆಗಿರುವಷ್ಟು ಮಾನವ ಹಕ್ಕುಗಳ ಉಲ್ಲಂಘನೆ ಬೇರಾವ ಕಾಲದಲ್ಲೂ ಆಗಿಲ್ಲ. ಬಯಲಾಗಿರುವ ಅಮೆರಿಕ ಸರಕಾರದ ದಾಖಲೆಗಳಿಂದ ಅನೇಕ ಪ್ರಕರಣಗಳು ಬೆಳಕಿಗೆ ಬಂದಿವೆ. ಆಪಾದಿತರ ಚಿತ್ರಹಿಂಸೆ, ಕಗ್ಗೊಲೆ, ದೂರನಿಯಂತ್ರಣದಿಂದ ನಡೆಸುವ ದಾಳಿ ಇವೆಲ್ಲ ಇವತ್ತು ದಿನನಿತ್ಯ ನಡೆಯುತ್ತಿವೆ. ಶಂಕಿತ ಭಯೋತ್ಪಾದಕರು ಎನಿಸಿಕೊಂಡಿರುವ ಸಹಸ್ರಾರು ಮಂದಿ ಇಂದು ವಿಚಾರಣೆಯಿಲ್ಲದೆ ಕಾರಾಗೃಹಗಳಲ್ಲಿ ಕೊಳೆಯುತ್ತಿದ್ದಾರೆ. ಆಫ್ಘಾನಿಸ್ತಾನ ಮತ್ತು ಇರಾಕ್‌ಗಳ ಮೇಲೆ ನಡೆದ ದುರಾಕ್ರಮಣ, ಲಿಬಿಯ, ಸಿರಿಯ ಮೊದಲಾದ ಕಡೆ ನಡೆದಿರುವ, ಹಸ್ತಕ್ಷೇಪ, ಆಫ್ಘಾನಿಸ್ತಾನ ಮತ್ತು ಪಾಕಿಸ್ತಾನದ ಗಡಿಯಲ್ಲಿ ನಡೆಸುತ್ತಿರುವ ಡ್ರೋನ್ ದಾಳಿ ಮುಂತಾದುವೆಲ್ಲ ಅಮಾಯಕ ಜನರನ್ನು ಬಲಿ ತೆಗೆದುಕೊಂಡಿದೆ. ಕಾಬೂಲಿನ ಬಳಿ ಇರುವ ಬಗ್ರಾಮ್ ವೈಮಾನಿಕ ನೆಲೆಯಲ್ಲಿರುವ ಕ್ಯೂಬಾದ ಗ್ವಾಂಟನೋಮೋ ಹಾಗೂ ಯಾರಿಗೂ ಗೊತ್ತಾಗದಂಥ ಪ್ರದೇಶಗಳಲ್ಲಿ ಸಂಚರಿಸುವ ಅಮೆರಿಕದ ನೌಕೆಗಳಲ್ಲಿರುವ 'ಕಪ್ಪು ಸ್ಥಳ'ಗಳು ಮೊದಲಾದವುಗಳಲ್ಲಿ ನಡೆದಿರುವ, ನಡೆಯುತ್ತಿರುವ ಹಿಂಸೆ, ತನಿಖೆಯ ಹೆಸರಿನಲ್ಲಿ ನಡೆಸುತ್ತಿರುವ ದೌರ್ಜನ್ಯ, ಕೊಲೆಗಳು ಎಲ್ಲರಿಗೂ ತಿಳಿದಿರುವ ಸಂಗತಿ. ಇವೆಲ್ಲ ಮಾನವ ಹಕ್ಕುಗಳ ಉಲ್ಲಂಘನೆಯ ವ್ಯಾಪ್ತಿಗೆ ಬರುತ್ತವೆ. ಯುದ್ಧಗಳು ಜರುಗಿದಾಗ ನಡೆಯುವ ದೌರ್ಜನ್ಯಗಳು ಯುದ್ಧಾಪರಾಧದ ವ್ಯಾಪ್ತಿಗೆ ಬರುತ್ತವೆ. ಆದರೆ ಶಾಂತಿಯ ಕಾಲದಲ್ಲಿ ನಡೆಸುವ ಈ ಉಪದ್ರವಗಳು ಬೆಳಕಿಗೆ ಬರುವುದೇ ಇಲ್ಲ, ಬಂದರೂ ಅದು ದೊಡ್ಡ ರಾಷ್ಟ್ರ ನಡೆಸಿರುವುದರಿಂದ ಕಡೆಗಣಿಸಲ್ಪಡುತ್ತವೆ. ಇಷ್ಟೆಲ್ಲ ಆಗುತ್ತಿರುವುದು ಅಮೆರಿಕದ ಸರಕಾರದ ನೆರಳಿನಲ್ಲಿಯೇ.




ಮಾನವ ಹಕ್ಕುಗಳ ಪ್ರತಿಪಾದಕ ತಾನೆಂದು ಹತ್ತಾರು ವರ್ಷಗಳಿಂದ ಕೊಚ್ಚಿಕೊಳ್ಳುತ್ತ ಬಂದಿರುವ ಅಮೆರಿಕ ನಡೆಸಿರುವಷ್ಟು ದೌರ್ಜನ್ಯಗಳನ್ನು ಬೇರಾವ ದೇಶವೂ ಮಾಡಿಲ್ಲ ಎಂದು ಧಾರಾಳವಾಗಿ ಹೇಳಬಹುದು. ಶೀತಯುದ್ಧದ ಕಾಲದಲ್ಲಿ ಸೋವಿಯೆತ್ ಒಕ್ಕೂಟ ಮತ್ತು ಪೂರ್ವ ಯೂರೋಪಿನ ರಾಷ್ಟ್ರಗಳ ವಿರುದ್ಧ ಮಾನವ ಹಕ್ಕುಗಳ ಉಲ್ಲಂಘನೆಯ ಅಸ್ತ್ರವನ್ನು ನಿರಂತರವಾಗಿ ಅಮೆರಿಕ ಮತ್ತು ಪಾಶ್ಚಾತ್ಯ ದೇಶಗಳು ಸಾಕಷ್ಟು ಬಳಸಿದುವು. ಅಮೆರಿಕದ ಗುಪ್ತಚರ ಸಂಘಟನೆ ಸಿಐಎ ಕೊಲೆಯ ಸಂಚುಗಳನ್ನು, ವಿಧ್ವಂಸ ಚರ್ಯೆಗಳನ್ನು ನಡೆಸತೊಡಗಿದ್ದೂ ಆಗಲೇ. ಅಂದಿನ ದಿನಗಳಲ್ಲಿ ರಾಷ್ಟ್ರೀಯ ವಿಮೋಚನಾ ಚಳವಳಿಗಳನ್ನೂ ಹತ್ತಿಕ್ಕಲು ಅಮೆರಿಕ ನಡೆಸಿದ ದೌರ್ಜನ್ಯಗಳು ಈಗ ಇತಿಹಾಸದ ಪುಟ ಸೇರಿವೆ. ೨೦೦೬ರಲ್ಲಿ ಹಿಂಸೆಯ ವಿರುದ್ಧದ ವಿಶ್ವಸಂಸ್ಥೆಯ ಸಮಿತಿಯು 'ಕಪ್ಪು ಸ್ಥಳಗಳು' ಎನ್ನುವ ಹಿಂಸಾಕೇಂದ್ರಗಳನ್ನು ಮುಚ್ಚಬೇಕೆಂದು ಹೇಳಿತು. ಆದರೆ ಬುಷ್ ಆಡಳಿತ ಅದನ್ನು ಕಡೆಗಣಿಸಿತು.

ಅಮೆರಿಕಾದ 'ಓಪನ್ ಸೊಸೈಟಿ' ಎಂಬ ಸಂಸ್ಥೆಯ ವರದಿಯು ೫೪ ದೇಶಗಳಲ್ಲಿ ಸಿಐಎ ನಡೆಸಿರುವ ದೌರ್ಜನ್ಯಗಳನ್ನು ಬಯಲುಮಾಡಿದೆ. ಇತರ ದೇಶಗಳ ವಿಮಾನ ನಿಲ್ದಾಣಗಳನ್ನು ರಹಸ್ಯ ಕಾರ್ಯಾಚರಣೆಗಳಿಗೆ ಬಳಸುವುದು, ಗುಪ್ತವಾದ ಸ್ಥಳಗಳಲ್ಲಿ ವಿಚಾರಣೆ ನಡೆಸುವ ಹೆಸರಿನಲ್ಲಿ ಹಿಂಸೆ ಮಾಡುವುದು ಮೊದಲಾದುವನ್ನು ಈ ವರದಿ ಬಯಲುಮಾಡಿದೆ. ೧೩೬ ಖೈದಿಗಳ ಪಟ್ಟಿ ಮಾಡಿ, ಅವರ ಮೇಲೆ ನಡೆದಿರುವ ದೌರ್ಜನ್ಯಗಳನ್ನೂ ವರದಿ ಬಯಲುಮಾಡಿದೆ. ೨೦೦ ಪುಟಗಳ ಈ ವರದಿಯ ಬರಹಗಾರರಲ್ಲಿ ಪ್ರಧಾನಿ ಮನಮೋಹನ ಸಿಂಗ್‌ರ ಪುತ್ರಿ ಅಮ್ರಿತ್ ಸಿಂಗ್ ಕೂಡ ಇರುವುದು ಗಮನಾರ್ಹ. ಇತ್ತೀಚೆಗೆ ಪಾಕಿಸ್ತಾನದ ಮೇಲೆ ಅಮೆರಿಕ ನಡೆಸುತ್ತಿರುವ ಡ್ರೋನ್ ದಾಳಿಯನ್ನು ಕುರಿತು ವಿಶ್ವಸಂಸ್ಥೆಯ ವಿಶೇಷ ರಾಯಭಾರಿ ಎಮರ್ಸನ್ ಎಂಬುವರು ನಡೆಸಿದ ವ್ಯಾಪಕವಾದ ತನಿಖೆಯ ಪ್ರಕಾರ ಸ್ವಯಂಚಾಲಿತ ಡ್ರೋನ್‌ಗಳನ್ನು ಬಳಸಿ ಅಮೆರಿಕ ನಡೆಸುತ್ತಿರುವ ದಾಳಿ ಪಾಕಿಸ್ತಾನದ ಸಾರ್ವಭೌಮತ್ವದ ಅತಿಕ್ರಮಣವಾಗಿದೆ. ಪಾಕಿಸ್ತಾನದ ಸರಕಾರ ಈ ಬಗ್ಗೆ ಅಮೆರಿಕ ಸರಕಾರಕ್ಕೆ ಪ್ರತಿಭಟನೆ ಸೂಚಿಸಿದ್ದರೂ ಅದನ್ನು ಕಡೆಗಣಿಸಲಾಗಿದೆ. ೨೦೦೪ರಿಂದ ಪಾಕಿಸ್ತಾನದ ಗಡಿಪ್ರದೇಶದಲ್ಲಿ ತಾಲಿಬಾನ್ ಭಯೋತ್ಪಾದಕರನ್ನೂ ಹತ್ತಿಕ್ಕಲು ನಡೆಸಿರುವ ಮುನ್ನೂರಕ್ಕೂ ಹೆಚ್ಚು ಡ್ರೋನ್ ದಾಳಿಗಳಲ್ಲಿ ೨,೨೦೦ ಜನ ಸಾವನ್ನಪ್ಪಿದ್ದಾರೆ. ಇದರಲ್ಲಿ ಹೆಚ್ಚಿನವರು ಅಮಾಯಕರು.

ಮಾನವ ಹಕ್ಕುಗಳನ್ನು ಸದಾಕಾಲವೂ ಉಲ್ಲಂಘಿಸುತ್ತ ಬಂದಿರುವ ಅಮೆರಿಕ ಯಾವತ್ತೂ ಇತರ ದೇಶಗಳ ಕಡೆ ಬೊಟ್ಟು ಮಾಡಿ ತನ್ನ ಚರ್ಯೆಗಳನ್ನು ಮುಚ್ಚಿಹಾಕುವ ತಂತ್ರ ಬಳಸುತ್ತದೆ. ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಆಯೋಗವನ್ನು ತನಗೆ ಬೇಕಾದ ರೀತಿಯಲ್ಲಿ ಬಳಸಿಕೊಳ್ಳುತ್ತದೆ. ಮಾನವ ಹಕ್ಕುಗಳ ಪ್ರತಿಪಾದಕ ತಾನು ಮಾತ್ರ ಎಂದು ತೋರ್ಪಡಿಸಿ ಕೊಳ್ಳುವ ಪ್ರಯತ್ನ ಮಾಡುತ್ತದೆ. ಈಗ ವಿಶ್ವಸಂಸ್ಥೆಯ ಈ ಆಯೋಗದ ಮುಂದೆ ಶ್ರೀಲಂಕಾದಲ್ಲಿ ತಮಿಳರ ಮೇಲೆ ನಡೆದಿರುವ ದೌರ್ಜನ್ಯದ ಪ್ರಶ್ನೆಯನ್ನು ಎತ್ತಲಾಗಿದೆ. ಈ ಬಗ್ಗೆ ಅಮೆರಿಕ ಮತ್ತು ಪಾಶ್ಚಾತ್ಯ ದೇಶಗಳು ಮಂಡಿಸಿರುವ ನಿರ್ಣಯ ಚರ್ಚೆಗೆ ಮತ್ತು ಮತದಾನಕ್ಕೆ ಇನ್ನು ಕೆಲವೇ ದಿನಗಳಲ್ಲಿ ಬರಲಿದೆ. ಅಮೆರಿಕಾಗೆ ಈ ಪ್ರಶ್ನೆಯನ್ನು ಕೈಗೆತ್ತಿಕೊಳ್ಳಲು ಏನು ನೈತಿಕ ಹಕ್ಕಿದೆಯೋ ತಿಳಿಯದು. ತಮಿಳು ಈಳಂ ಹೋರಾಟವನ್ನು ಹತ್ತಿಕ್ಕಲು ಶ್ರೀಲಂಕಾ ಸರಕಾರ ದಬ್ಬಾಳಿಕೆ ನಡೆಸಿರುವುದು ನಿಜ. ಕೊನೆಯ ದಿನಗಳಲ್ಲಿ ನಡೆದ ಅಂತರ್ಯುದ್ಧದಲ್ಲಿ ಶ್ರೀಲಂಕಾ ಸೈನ್ಯ ತಮಿಳು ಹೋರಾಟಗಾರರ ಮೇಲೆ ನಡೆಸಿದ ದೌರ್ಜನ್ಯಗಳ ವಿಚಾರಣೆ ನಡೆಯಬೇಕೆಂಬುದು ಸಮರ್ಥನೀಯ. ಆದರೆ ಅದಕ್ಕಿಂತ ಮುಖ್ಯವಾದದ್ದು ಈಗ ಮುಗಿದಿರುವಾಗ ಶ್ರೀಲಂಕಾದಲ್ಲಿ ಸಿಂಹಳೀಯರು ಮತ್ತು ತಮಿಳರ ಮಧ್ಯೆ ಸಾಮರಸ್ಯ ಕುದುರಿಸುವುದು ಮುಖ್ಯ ಕಾರ್ಯ. ಶ್ರೀಲಂಕಾ ಸರಕಾರ ತನ್ನ ಆಶ್ವಾಸನೆಗಳನ್ನು ಜಾರಿಗೆ ತಂದು ತಮಿಳು ಜನರಿಗೆ ನ್ಯಾಯಯುತವಾಗಿ ಸಲ್ಲಬೇಕಾಗಿರುವ ಸಮಾನತೆಯನ್ನು ಗೌರವಿಸುವುದೀಗ ಆಗಬೇಕಾದ ಕಾರ್ಯ. ಈ ಸಂದರ್ಭದಲ್ಲಿ ಭಾರತ ಸರಕಾರದ ನಿಲುವು ಏನಾಗಿರಬೇಕು ಎಂದು ಪಾರ್ಲಿಮೆಂಟಿನ ಉಭಯ ಸದನಗಳಲ್ಲೂ ಚರ್ಚೆಯಾಯಿತು. ಈಚಿನ ದಿನಗಳಲ್ಲಿ ವಿದೇಶಾಂಗ ನೀತಿಯನ್ನು ಕುರಿತು ಪಾರ್ಲಿಮೆಂಟಿನಲ್ಲಿ ಚರ್ಚೆಯಾಗುವುದೇ ಅಪರೂಪ. ಈ ವಿಷಯ ಚರ್ಚೆಗೆ ಬರಲು ಕಾರಣ ತಮಿಳುನಾಡಿನ ದ್ರಾವಿಡ ಪಕ್ಷಗಳ ಸದಸ್ಯರ ಒತ್ತಾಯ. ಚರ್ಚೆ ನಿರೀಕ್ಷಿತಧಾಟಿಯಲ್ಲೇ ಇತ್ತು. ಮಾಮೂಲಿನಂತೆ ವಿರೋಧ ಪಕ್ಷಗಳು ಸರಕಾರದ ನೀತಿ ಪ್ರಕಟಿಸಲು ಒತ್ತಾಯಿಸಿದುವು. ಆದರೆ ಅವುಗಳ ಒಲವು ಅಮೆರಿಕಾದ ಗೊತ್ತುವಳಿಗೆ ಬೆಂಬಲ ನೀಡುವುದರ ಕಡೆಗೇ ಇತ್ತು. ಚರ್ಚೆಯಲ್ಲಿ ಯಾರೊಬ್ಬರೂ ಅಮೆರಿಕ ನಡೆಸಿರುವ ದೌರ್ಜನ್ಯಗಳ ಕುರಿತು ಸೊಲ್ಲೆತ್ತದೇ ಇದ್ದುದು ಆಶ್ಚರ್ಯ. ಸರಕಾರ ಉಭಯ ಸದನಗಳಲ್ಲೂ ಅಡ್ಡಗೋಡೆಯ ಮೇಲೆ ದೀಪ ಇರಿಸುವ ನೀತಿ ಅನುಸರಿಸಿತು. ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಆಯೋಗದ ಸಭೆಯಲ್ಲಿ ಏನಾಗುವುದೋ ನೋಡೋಣ ಈ ಪ್ರಶ್ನೆ ಕುರಿತು.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫



**ಡಾ|| ಕೆ. ಆರ್. ಸಿದ್ದಗಂಗಮ್ಮ**



# ಅವಳ ಭಾಷೆ

ಭಾಷೆಯೆಂಬುದು ವ್ಯಕ್ತಿಗತವಾದುದು. ಆದರೆ ವ್ಯಕ್ತಿಗತ ಭಾಷೆಯು ರೂಪುಗೊಳ್ಳುವುದು ಸಮುದಾಯದ ಮೂಲಕವೇ. ಸಮುದಾಯದ ಸಾಮಾಜಿಕ ರಚನೆಗಳು, ಭಾಷೆಯ ಒಳಗೆ-ಮೇಲೆ ಇದ್ದೇ ಇರುತ್ತವೆ. ಸಮುದಾಯದ ಆಲೋಚನಾ ಕ್ರಮಗಳು ಬಹುಪಾಲು ಪುರುಷಕೇಂದ್ರಿತವೆಂಬುದು ಎಲ್ಲರಿಗೂ ಗೊತ್ತಿರುವಂತಹುದೆ. ಈ ಪುರುಷಕೇಂದ್ರಿತ ಆಲೋಚನಾ ಕ್ರಮಗಳನ್ನೇ ತಮ್ಮ ಆಲೋಚನೆ ಚಿಂತನೆಗಳೆಂದು ಹೆಣ್ಣುಮಕ್ಕಳು ಆಲೋಚಿಸುವ ರೀತಿಯನ್ನು ಬಹುಪಾಲು ಬದುಕಿನಲ್ಲಿ ನೋಡಲು ಸಾಧ್ಯ. ಆದರೆ ಈ ಆಲೋಚನಾ ಕ್ರಮಗಳಾಚೆ ಹೆಣ್ಣು ತನ್ನ ಅಸ್ಮಿತೆಯನ್ನು ಹುಡುಕಿಕೊಂಡು ಅಭಿವ್ಯಕ್ತಿಸಲು ಹೊರಟ ಮಾಧ್ಯಮವೇ ಅವಳ ಭಾಷೆ.

ಈ ಭಾಷೆಯಲ್ಲಿ ಮೌನ, ಹಠ, ಸ್ವಾಭಿಮಾನ, ಛಲ, ನಿಟ್ಟುಸಿರು, ಕಣ್ಣೀರು, ಸಿಟ್ಟು, ಸಂತಾಪಗಳೆಂಬ ಅಕ್ಷರಗಳಿವೆ. ಇಂತಹ ಅನೇಕ ಅಕ್ಷರಗಳಿಂದ ಜೋಡಿಸಿದ ಶಬ್ದಗಳು ಅವಳ ಭಾಷೆಯಲ್ಲಿ ಆಕಾರ ತಳೆದು ಮಾತನಾಡುತ್ತವೆ. ಅದನ್ನು ಅವನಿಗೆ ಕೇಳಿಸಬೇಕೆಂಬ ಹಠದಲ್ಲಿ, ಪ್ರಯತ್ನದಲ್ಲಿ ಸೋತು ಸುಣ್ಣಾಗುತ್ತಾಳೆ, ಕೆಲವು ಬಾರಿ ಗೆಲ್ಲುತ್ತಾಳೆ. ಗೆದ್ದ ಕ್ಷಣಗಳನ್ನು ಹಿಡಿಯುವ ಸಂಭ್ರಮ ಇಂದಿನ ಈ ಪ್ರಬಂಧದ ಉದ್ದೇಶ. ಆದರೆ ಸೋತ ಅನುಭವದ ಕ್ಷಣಗಳು ಇಲ್ಲಿವೆ, ಅವನಿಗೆ ಅವಳ ಮಾತು ಎಷ್ಟೋ ಬಾರಿ ಕೇಳುವುದಿಲ್ಲ, ಅವ ಅವಳ ಕಡೆ ನೋಡುವುದೇ ಇಲ್ಲ ಹಾಗಿದ್ದರೂ ಅವನ ಸರ್ಟಿಫಿಕೇಟ್ ಆದರೂ ತನಗೇಕೆ ಎನ್ನುತ್ತಲೇ ಅವಳು ಮಾತಾಡುತ್ತಾ ಹೋದಳು. ಅವಳ ಭಾಷೆ ಬದಲಾಗುತ್ತಾ, ಬೆಳೆಯುತ್ತಾ, ಸ್ವೀಕರಣದಿಂದ ಉಬ್ಬುತ್ತ, ಹಿಗ್ಗುತ್ತಾ ಸಾಗುತ್ತಲೆ ಇದೆ. ಈ ನದಿಯ ಏರು, ಇಳುವು, ನುಲಿತ, ಹರಹುಗಳು ಖಂಡಿತವಾಗಿಯೂ ಪುರುಷ ಭಾಷೆಗಿಂತ ಭಿನ್ನ.

*ಹಾಡು ಕೋಗಿಲೆಯ ಭಾಷೆಯಂತೆ*
*ಪರಿಮಳ ಹೂವಿನ ಭಾಷೆಯಂತೆ*
*ಬೆಳಕು ಬೆಂಕಿಯ ಭಾಷೆ*
*ಮರ್ಮರವೆ ಗಾಳಿಯ ಭಾಷೆ*
*ಹಗಲಿರುಳೆ ಭೂಮಿಯ ಭಾಷೆ*
*ಬೆಳದಿಂಗಳು ಚಂದಿರನ ಭಾಷೆ* **(ಪು. ೨೭. ದರುಶನ. ಸ. ನಾಗಭೂಷಣ)**

ಹಾಗೆಯೇ 'ಆಸೆಯೇ ಬದುಕಿನ ಭಾಷೆ' (ಸವಿತಾ ನಾಗಭೂಷಣ) ಎಂದವರು ನಮ್ಮ ಕವಯಿತ್ರಿಯರು.

ಮಹಿಳಾ ಕಾವ್ಯದ ಚರಿತ್ರೆಯಲ್ಲಿ ಬೆಳಗೆರೆ ಜಾನಕಮ್ಮ ,ಸರಸ್ವತಿ ಗೌಡರ್ ಇವರೆಲ್ಲ ಮೊದಲ ಪುಟದ ನಮ್ಮ ಕವಯಿತ್ರಿಯರು. ಲಿಂಗ ತಾರತಮ್ಯದ ನೀತಿಯ ಬಗ್ಗೆ ಅವರ ಪ್ರಶ್ನೆಗಳು ಹುಟ್ಟಿ ಬೆಳೆದಿವೆ. ಕಟು ವಾಸ್ತವದ ಬದುಕಿನ ಈ ಪ್ರಶ್ನೆಗಳ ಅಭಿವ್ಯಕ್ತಿಗೆ ಅವರು ಬಳಸಿದ ಭಾಷೆ ಪ್ರಾರ್ಥನೆಯ ರೂಪದಲ್ಲಿದೆ. ಆದರೆ ೭೦ರ ದಶಕದಲ್ಲಿ ಮಹಿಳಾ ಭಾಷೆ ಪಡೆದ ರೂಪ ಭಿನ್ನವಾದುದು.

ಚ. ಸರ್ವಮಂಗಳ ಅವರ ಬಹಳ ಪ್ರಸಿದ್ಧವಾದ ಕವಿತೆ 'ಅವನು ಬಸವ.' ಇಲ್ಲಿಯ ಭಾಷೆಯನ್ನು ಗಮನಿಸಿ.

*ಬಸವ ಅಪ್ಪನೊಂದಿಗೆ ಮಾಡುವ*
*ತೋಟದ ಕೆಲಸ*
*ಕಮಲ ಅಮ್ಮನೊಂದಿಗೆ ಮಾಡುವಳು*
*ಅಡಿಗೆ ಕೆಲಸ*
*ಕಮಲ ಒಲೆ ಊದುವಳು*
*ಕುಳಿತು*
*ಬಸವ ಗಿಡಕ್ಕೆ ನೀರು ಹೊಯ್ಯುವ*

ಅಡುಗೆಮನೆಯೇ ಪ್ರಪಂಚ, ಅಡುಗೆಯೇ ಸರ್ವಸ್ವ, ಅಡುಗೆ ಮನೆಯ ಸಾಹಿತ್ಯ ಎಂದವರಿಗೆ ಅಡುಗೆಮನೆಯ ಪರಿಭಾಷೆ ಎಷ್ಟು ಶಕ್ತವಾದುದು ಎಂಬುದನ್ನು ಅಭಿವ್ಯಕ್ತಿಸಿ ತೋರಿಸಿದವರು ನಾರಿಯರು. ನಾರಿಯರು ರೂಪಿಸಿದ ಈ ಕಾವ್ಯಮೀಮಾಂಸೆಯು, ಬದುಕಿನ ಮೀಮಾಂಸೆಯು ಹೌದು. ಈ ಸಂದರ್ಭದಲ್ಲಿ ಇಂಗ್ಲಿಷ್-ವಿಂಗ್ಲಿಷ್ ಸಿನಿಮಾವನ್ನು ನೆನಪಿಸ ಬಯಸುತ್ತೇನೆ. ನಮ್ಮ ಎಲ್ಲರ ಮನೆಯಲ್ಲೂ ಇಂತಹ ಶ್ರೀದೇವಿಯರು ಇದ್ದಾರೆ. ಬದುಕು ಪ್ರಾಮಾಣಿಕವಾದಾಗ, ಭಾವನೆ ತೀವ್ರವಾದಾಗ ಭಾಷೆ ಹರಳುಗಟ್ಟುತ್ತದೆ. ಬದುಕೇ ಭಾಷೆಯಾಗುತ್ತದೆ.

ನಿಂತು.
ಕಮಲ ಕುಳಿತು ಮಾಡುವುದನ್ನೂ
ನಿಂತು ಮಾಡುವ ಬಸವ
ಬಸವ ಚಿಣ್ಣಿದಾಂಡು ಆಡುವ
ತಲೆ ಎತ್ತೋ ಹುಡುಗ
ಕಮಲ ಕುಂಟೆಬಿಲ್ಲೆ ಆಡುವ
ತಲೆ ತಗ್ಗೋ ಹುಡುಗಿ
ಬಸವನಿಗೆ ಕೋಡಿದ್ದರೇನು ?
ಅರಳಿದ ಕಮಲಗಳ ಮುಂದೆ ಜಿನುಗಿ
ಸೋರುವುದಿಲ್ಲವೇ ಬಿಗುಮಾನ ?

**(ಪು. ೨೨. ಅಮ್ಮನಗುಡ್ಡ)**

ಇಲ್ಲಿಯ ಸರಳ ನೇರ ಅಭಿವ್ಯಕ್ತಿ ಕವಿತೆಯ ಆಶಯವನ್ನು ಪೂರ್ಣ ಮಟ್ಟದಲ್ಲಿ ಸಂವಹನ ಮಾಡುತ್ತದೆ. ಆಶಯಕ್ಕೂ ಅಭಿವ್ಯಕ್ತಿಗೂ ಅನನ್ಯ ಸಂಬಂಧ ಇವರ ಭಾಷೆಯ ವಿಶೇಷ .

ಹೆಣ್ಣುಮಕ್ಕಳ ಆಸೆಗಳನ್ನು ಕಟುವಾಸ್ತವ ಜಗತ್ತು ತಡೆದು ನಿಲ್ಲಿಸಿದ ಸಂದರ್ಭಗಳಲ್ಲಿ ಮಹಿಳೆಯರು ಯಾಕೆ ಹೀಗೆ ಎಂದು ಕೇಳುತ್ತಾ ಹೋದರು. ಚಿಂತನೆಯ ಜಾಡಿಗೆ ಪ್ರಶ್ನೆಗಳು ಜಾರಿದ ಸಂದರ್ಭದಲ್ಲಿ ಭಾಷೆಗೊಂದು ಮೊನಚು ಸಿಕ್ಕಿತು. ಅಂತಹ ಸಂದರ್ಭಗಳಲ್ಲಿ ಸವಿತಾ ನಾಗಭೂಷಣ 'ಲೋಕದಲ್ಲಿ ಪುಟ್ಟಿದ ಬಳಿಕ' ಕವಿತೆಯಲ್ಲಿ ಹೀಗೆನ್ನುತ್ತಾರೆ.

*ಸೀರೆ ಸುತ್ತಿಕೊಳ್ಳುವಾಗ ದ್ರೌಪದಿ*
*ಉಂಗುರ ಎತ್ತಿಕೊಳ್ಳುವಾಗ ಶಕುಂತಲೆ*
*ಒಲೆ ಹೊತ್ತಿಕೊಳ್ಳುವಾಗ ಸೀತೆ*
*ಯಾಕೆ ? ಯಾಕೆ ? ನೆನಪಾಗಬೇಕು*
*ಕೆರೆಯ ಏರಿಯ ಮೇಲೆ ಭಾಗೀರಥಿ*
*ಎಡವಿದ ಕಲ್ಲುಗಳಲಿ ಒಬ್ಬೊಬ್ಬಳೂ ಮಹಾಸತಿ*
*ಯಾಕೆ, ಯಾಕೆ ಕಾಣಬೇಕು ?*
........................
*ನಡುವೆ ಸುಳಿವಾತ್ಮ*
*ಗಂಡೂ ಅಲ್ಲ, ಹೆಣ್ಣೂ ಅಲ್ಲ*
*ಯಾವುದಕ್ಕೂ ಪ್ರಮಾಣಿಸಿ ನೋಡಬೇಕು*
*ಮೊಲೆ, ಮುಡಿ, ಉಡಿ*
*ಹೊತ್ತು ತಿರುಗಿದಮೇಲೆ ಅನಿಸಿದ್ದು*
*ಕಷ್ಟ ಕಳೆಯಬೇಕು.*

**(ದರುಶನ, ಸವಿತಾ ನಾಗಭೂಷಣ)**

ಅವಳ ಭಾಷೆಯಲ್ಲಿ ಸೀರೆ, ಉಂಗುರ, ಒಲೆ, ಏರಿ, ಕಲ್ಲುಗಳು ನಿರ್ಜೀವ ವಸ್ತುಗಳೆ ? ದ್ರೌಪದಿ, ಶಕುಂತಲೆ, ಸೀತೆ, ಭಾಗೀರಥಿಯರು ಕೇವಲ ಪುರಾಣ ಪಾತ್ರಗಳೆ ? ಶಬ್ದಗಳಿಗೆ ಜೀವ ತುಂಬುವ ಶಕ್ತಿ ಪ್ರತಿಭಾವಂತ ಕವಿಗಳಿಗೆ ಸಾಧ್ಯ. ನಮ್ಮ ಕವಯಿತ್ರಿಯರು ಇತಿಹಾಸ, ಪುರಾಣ, ಜನಪದಗಳನ್ನೆಲ್ಲ ಮರು ಮೌಲ್ಯಮಾಪನ ಮಾಡಿ ವರ್ತಮಾನಕ್ಕೆ ತಂದಿದ್ದಾರೆ. ಆಗ ಅವರ ಭಾಷೆಯಲ್ಲಿ 'ಅಮೃತಮತಿಯ ಸ್ವಗತಗಳು' (ಎಚ್. ಎಲ್. ಪುಷ್ಪಾ) ಕೇಳಿಬರುತ್ತವೆ. 'ಕರುಣಾಳು ರಾಘವನಲ್ಲಿ ತಪ್ಪಿಲ್ಲ' ಎನ್ನುವ ವಿನ್ನಿ ಮಾಂಡೆಲ ಪ್ರತಿಭಾ ನಂದಕುಮಾರರ ಧ್ವನಿಯಾಗುತ್ತಾಳೆ. ಊರ್ಮಿಳೆ ಹಸಿರು ಹಾವಾಗಿ ವಿನಯಾರಲ್ಲಿ ಕಾಣಿಸಿಕೊಳ್ಳುತ್ತಾಳೆ.

*ಭಂಡ ಗಂಡನಿಗೆ ಬೇಸರಿಸಿದ*
*ನೀನೊಮ್ಮೆ ಉಟ್ಟು ಎಸೆದ ಸೀರೆಯನ್ನೇ*
*ಎಷ್ಟೊಂದು ಸಡಗರದಿ,*
*ಸುತ್ತಿಕೊಂಡಿದ್ದೇನೆ ಬಲ್ಲೆಯಾ*

– ಎಂದು ಅಕ್ಕನಲ್ಲಿ ಪ್ರೇಮ ತಾಶಿಲ್ದಾರ ಕೇಳುತ್ತಾರೆ.

ಅಕ್ಕನದಂತು ದೊಡ್ಡ ಆಕರ್ಷಣೆ. ನಮ್ಮ ಕವಯಿತ್ರಿಯರಿಗೆ.

ಇವರ ಕಾವ್ಯಗಳಲ್ಲಿ ವಿಷ್ಣು, ಕೃಷ್ಣ, ಬ್ರಹ್ಮ ಇವರು ಬಹಳ ಭೇಟಿಯಾಗದಿದ್ದರೂ ಶಿವನನ್ನಂತು ಬಹಳ ಚಂದವಾಗಿ ಹಿಡಿದಿಟ್ಟಿದ್ದಾರೆ ನಮ್ಮ ನಾರಿಯರು.

ವೈದೇಹಿ ಅವರು 'ಶಿವನ ಮೀಸುವ ಹಾಡು' ಕವಿತೆಯಲ್ಲಿ ಗೌರಿ ಶಿವನನ್ನು ಶುಭ್ರ ಸ್ನಾನಕ್ಕೆ ಕರೆದೊಯ್ಯುವಾಗ 'ಮುಗಿಯಿತೇ ಬೇಟೆ ?' ಎಂದು ಮೂಜಗದಲ್ಲಿ ಅಡ್ಡಾಡುವ ಗಂಡನನ್ನು ಚುಚ್ಚುತ್ತ ಕಂಬನಿ ತುಂಬುತ್ತಾಳೆ. ಕಂಬನಿಯ ಬಿಸಿಗೆ ಶಿವ ಬೆಚ್ಚಿದಾಗ 'ನನ್ನನೇನೆಂದುಕೊಂಡೆ ? ನಿನ್ನ ಬಿಟ್ಟರೆ ಶುದ್ಧ ಭೈರಾಗಿ' ಎಂದ ಮಾತಿಗೆ 'ಶಿವನೆ ನಾನೆಷ್ಟನೆಯ ನಾರಿ' ಎನ್ನುತ್ತಾಳೆ ? ಆರ್ದ್ರ ಗರ್ವದ ಹುಡುಗಿ ಗೌರಿ. 'ಜಾತ್ರೆಯಲ್ಲಿ ಕಂಡ ಶಿವ'ನ ಚಿತ್ರ ಸವಿತಾ ನಾಗಭೂಷಣ ಅವರದು.

ಹಾಗೆಯೇ ಕೆ. ಷರೀಫಾರ 'ತಾಜ್ ಮಹಲ್', ಸುಕನ್ಯ ಮಾರುತಿಯವರ 'ಗುಂಭಗಳು' ಶೈಲಜಾ ಉಡಚಣ ಅವರ 'ಇಬ್ರಾಹಿಮ್ ರೋಜಾ' ಕವಿತೆಗಳಲ್ಲಿ ಐತಿಹಾಸಿಕ ಕಟ್ಟಡಗಳು ವರ್ತಮಾನದ ಭಾವನೆಗಳ ಬೆಳಕಿನಲ್ಲಿ ತೊಯ್ಯಿಸಿಕೊಳ್ಳುತ್ತವೆ.

ಇತಿಹಾಸ ಪುರಾಣಗಳು ಅವಳ ಭಾಷೆಯಲ್ಲಿ ವಿಭಿನ್ನ ಸ್ವರಗಳನ್ನು ಹೊರಡಿಸುತ್ತವೆ. ಐತಿಹಾಸಿಕ ಸ್ಮಾರಕಗಳು ಮತ್ತು ಇಮಾರತ್‌ಗಳು ಮಹಿಳಾ ಕಾವ್ಯದಲ್ಲಿ ಮರುಸಂಕಥನಗೊಳ್ಳುತ್ತವೆ ಎಂದು ರಾಮಲಿಂಗಪ್ಪ ಬೇಗೂರರು ಸರಿಯಾಗಿಯೇ ಗುರುತಿಸಿದ್ದಾರೆ. ಇಲ್ಲಿಯ ನೇರ ಸರಳ ನಿರೂಪಣೆಯ ಭಾಷೆ ಗಮನಾರ್ಹ.

ಅಕ್ಕ, ಗೌರಿ, ದ್ರೌಪದಿ, ಸೀತೆ, ಶಕುಂತಲೆ, ಊರ್ಮಿಳೆಯರ ಮುಖಾಂತರ ನಮ್ಮ ಮಹಿಳಾ ಕಾವ್ಯ ಜನಸಾಮಾನ್ಯನ ಬಳಿ ಸಾಗಿದೆ. ಈ ಭಾಷೆ ನಮ್ಮ ಹೆಮ್ಮೆಯಾಗಿದೆ.

ಅಡುಗೆಮನೆಯೇ ಪ್ರಪಂಚ, ಅಡುಗೆಯೇ ಸರ್ವಸ್ವ,

## ನಿನ್ನ ನೆನಪು

ನಾನು ಕವಿತೆ ಬರಿಯುವಾಗ
ಕವಿತೆಯ ಮಮತೆಯ ನೀನಾದೆ
ಈ ನಾಲ್ಕು ದಿನದ ಬದುಕಿಗೆ ಆಸರೆ
ನಿನ್ನ ಬಯಸಿದವರಿಂದ ಬಹುದೂರ
ಹೋಗಿ ನಿಂತಿ.
ಬರೀ ನಿನ್ನ ನೆನಪುಗಳನ್ನು ಕೈ ಮಾಡಿ
ದಾರಿಯನು ತೋರಿಸಿದವಳು ನೀನು ಪ್ರಿಯೆ.

ಬರೀ ನಿನ್ನ ನೆನಪುಗಳು ನಾ ಹೇಗೆ
ಬರಿಯಲಿ ಹಾಳೆಯಲಿ ಹೇಳು.
ಚಂದ್ರನಂತೆ ದೂರದಲ್ಲಿ ಪಳಪಳನೆ.

ಹೊಳೆದು ಏಕೆ ನನ್ನ ಕಣ್ಣಿಂದ ಕಾಣದ
ಕಣ್ಮರೆಯಾದವಳು ನನಗೆ ಮತ್ತೆಂದು
ಕಾಣಿಸುವೆ ನನಗೆ ಪ್ರಿಯೆ.

ನಿದ್ರೆ ತೋರಿಸಿದವಳು ನೀನು ಇಂದಿಲ್ಲಾ ಎಂದರೇ... ?
ನಿದ್ರೆಯು ನೀ ಇಲ್ಲದೆ ನನ್ನಿಂದ ಜಾರಿ ಹೋಗಿದೆ
ನಿನ್ನೊಡನೆಯು ಪ್ರಿಯೆ.
ಜೀವನದಲ್ಲಿ ನಿನ್ನ ಪರಿಚಯ ಆ ಅಗೋಚರ
ಕೊಟ್ಟ ಜನ್ಮ ನೀಡಿದ ನಿನಗೆ ಶುಭಾಶಯಗಳು.
ನಿನ್ನ ಜೊತೆಯಲ್ಲಿ ಪಡೆದು ಅಗೋಚರ
ಅಭಯವಾದವನು ಪ್ರಿಯೆ.

**ಶ್ರೀಧರ ಪಾಂಡು, ಬಿರಾದಾರ**
ಶ್ರೀ ರಾಘವೇಂದ್ರ ಬೋರ್ಡಿಂಗ್, ಜಮಖಂಡಿ - ೫೮೭ ೩೦೧

ಅಡುಗೆ ಮನೆಯ ಸಾಹಿತ್ಯ ಎಂದವರಿಗೆ ಅಡುಗೆಮನೆಯ ಪರಿಭಾಷೆ ಎಷ್ಟು ಶಕ್ತವಾದುದು ಎಂಬುದನ್ನು ಅಭಿವ್ಯಕ್ತಿಸಿ ತೋರಿಸಿದವರು ನಾರಿಯರು. ನಾರಿಯರು ರೂಪಿಸಿದ ಈ ಕಾವ್ಯಮೀಮಾಂಸೆಯು, ಬದುಕಿನ ಮೀಮಾಂಸೆಯು ಹೌದು. ಈ ಸಂದರ್ಭದಲ್ಲಿ ಇಂಗ್ಲಿಷ್-ವಿಂಗ್ಲಿಷ್ ಸಿನಿಮಾವನ್ನು ನೆನಪಿಸಬಯಸುತ್ತೇನೆ. ನಮ್ಮ ಎಲ್ಲರ ಮನೆಯಲ್ಲೂ ಇಂತಹ ಶ್ರೀದೇವಿಯರು ಇದ್ದಾರೆ. ಬದುಕು ಪ್ರಾಮಾಣಿಕವಾದಾಗ, ಭಾವನೆ ತೀವ್ರವಾದಾಗ ಭಾಷೆ ಹರಳುಗಟ್ಟುತ್ತದೆ. ಬದುಕೇ ಭಾಷೆಯಾಗುತ್ತದೆ. ವೈದೇಹಿಯವರು 'ತಿಳಿಸಾರು' ಎಂಬ ಕವನದಲ್ಲಿ ನನಗೆ ಪದ್ಯ ಬರೆಯಲು ಬರುವುದಿಲ್ಲ ಆದರೆ 'ತಿಳಿಸಾರು' ಮಾಡುವುದು ಗೊತ್ತು ಎಂದು ಸೆಡ್ಡು ಹೊಡೆಯುತ್ತಾರೆ. ದಿನಗಳೆರೆಡನ್ನೂ ದಾಟಿಯೂ ಚೂರೂ ಮುಕ್ಕಾಗದೆ, ಹಳಸದೆ, ಗಮಾಡಿಸುವ ತಿಳಿಸಾರಿನ ಹದ ಕಾವ್ಯದ ಹದಕ್ಕಿಂತ ಭಿನ್ನವಲ್ಲ ಎಂಬ ಸಾರ್ವತ್ರಿಕ ಸತ್ಯದ ಅರಿವು ಇಲ್ಲಿದೆ.

'ಹಿದಕವರೆ' ಕವಿತೆಯಲ್ಲಿ ಲಲಿತ ಸಿದ್ದಬಸವಯ್ಯನವರ ಆಶಯವೂ ಬದುಕಿನ ಮೀಮಾಂಸೆಯಾಗಿದೆ. ಗ್ಯಾಸ್, ಸ್ಟವ್, ಪಾತ್ರೆ, ಕುಕ್ಕರ್‌ಗಳು ಬದಲಾದರೂ ಅದರೊಳಗಿನ ಕಾವು, ಯಾವತ್ತಿಗೂ ಉರಿಯುತ್ತಿದೆ ಎನ್ನುವ ಕವಿತಾ ರೈ, 'ಕೋಸಂಬರಿ'ಯಲ್ಲಿ ಬದುಕನ್ನು ಹಿಡಿದಿಟ್ಟ ಚಂದ್ರಮತಿ ಸೋಂದ, ರೂಪ ಹಾಸನ್‌ರವರ 'ವಿಸ್ಮಯ' ಕವಿತೆಗಳಲ್ಲಿ ಅಡುಗೆಮನೆಯ ಒಳಗೆ ಇಡೀ ಬದುಕೇ ಹಿಡಿದಿಡಲಾಗಿದೆ. ಈ ಅಡುಗೆಮನೆಯ ಕಾವ್ಯಮೀಮಾಂಸೆ ಗಂಡಸಿಗೆಲ್ಲಿ ಬರಬೇಕು ? ಇಂತಹ ಅಡುಗೆಮನೆಯಲ್ಲೇ ತನ್ನ ಬಹುಪಾಲು ಆಯುಷ್ಯ ಕಳೆದ, ಕಳೆಯುತ್ತಿರುವ ಹೆಣ್ಣುಗಳಿಗೆ ಅಲ್ಲೊಂದು ಬೆಳಕಿನ ಕೋಲಿನ ಮೂಲಕ ಇಳಿದ ಭಾಷೆಯೊಂದು ಕಂಡುಬರುತ್ತದೆ.

ಪ್ರತಿಭಾ ನಂದಕುಮಾರ ಅವರು 'ಅಡುಗೆ ಮಾಡುತ್ತೇನೆ-೨' ಎಂಬ ಕವಿತೆಯಲ್ಲಿ,

ಅಡುಗೆಮಾಡುವುದೆಂದರೆ ಬಹಳ ಇಷ್ಟ.
ನನಗೆ ಹೊರದಾರಿ ಅದು.
ನನ್ನೆಲ್ಲ ಆಕ್ರೋಶಗಳಿಗೆ ತೊಳೆದು ಸಿಪ್ಪೆ ಸುಲಿದು, ಕತ್ತರಿಸಿ, ಜಜ್ಜಿ, ಕುಟ್ಟಿ, ಹುರಿದು, ಅರೆದು, ರುಬ್ಬಿ, ನುರಿದು, ಬಾಡಿಸಿ,

*ಬೇಯಿಸಿ, ಹಿಚಕಿ, ಮಸೆದು, ಕೊಟ್ಟಿ, ಕಲಸಿ,*
*ಗಸಗಸನೆ ಕಡೆದು, ಎತ್ತಿಹಾಕಿದರೆ ತಟ್ಟೆಗೆ*
*ರುಚಿ ರುಚಿ ಅಂತ ತಿನ್ನುತ್ತಾರೆ !*

**(ಮುನ್ನುಡಿ – ಬೆನ್ನುಡಿಗಳ ನಡುವೆ ಪುಟ ೪೪)**

ಈ ಭಾಷೆಯಲ್ಲಿ ೧೫ ಕ್ರಿಯಾಪದಗಳನ್ನು ಒಂದು ವಾಕ್ಯದಲ್ಲಿ ಪೋಣಿಸಿದ ಬಗೆ ಅನನ್ಯ. ಇಲ್ಲಿ ಒಂದು ಕಡೆ ಸಾಂಪ್ರದಾಯಿಕ ಅಡುಗೆಯ ಮೀಮಾಂಸೆ ಇದ್ದರೆ ಇನ್ನೊಂದು ಕಡೆ ೨೧ನೇ ಶತಮಾನದ ಬದುಕಿನ ಮೀಮಾಂಸೆಯು ಅಡುಗೆಮನೆಯ ರೂಪದಲ್ಲಿ ಕಂಡ ಈ ಬಗೆಯಂತೂ ಇದುವರೆಗೂ ಎಲ್ಲೂ ದಾಖಲಾಗದ್ದು.

*ಗ್ಯಾಸ್, ಕುಕ್ಕರ್, ಮಿಕ್ಸರ್, ಗ್ರೈಂಡರ್, ಟೋಸ್ಟರ್,*
*ಗ್ರೇಟರ್, ಹೀಟರ್,*
*ಪೀಲರ್, ವಾಷರ್, ಗೃಹಿಣಿಯೇ ಪ್ರಧಾನ*
*ಕಂಸ್ಯೂಮರ್. ನಿನ್ನೆ*
*ಅಂಗಡಿಯಲ್ಲಿ ಇಂದು ಮನೆಯಲ್ಲಿ ನಾಳೆ ?*



**ನಮಗೆ ನೆಟ್ಟಗೆ ಬಸ್ಸನಲ್ಲಿ ಹೋಗೋಕೆ ೧೧ರೂ. ಇಲ್ಲವಲ್ಲ ಬೋರಣ್ಣ**

*ಕ್ಲೀನ್ಡ್‌ರೈಸ್, ದಾಲು, ಪ್ಯಾಕ್ ಮಾಡಿದ ಎಲ್ಲ ಪುಡಿ*
*ಸಿಡಿ ಹಿಟ್ಟು ಪಟ್ಟು ಬೆಂದ*
*ಬೇಯಿಸಿದ, ಹುರಿದ, ಕರಿದ, ಕುಟ್ಟಿದ ನೂರೆಂಟು*
*ಪ್ಯಾಕೆಟ್*
*ಎಲ್ಲಾ ಇನ್‌ಸ್ಟಂಟ್ ನೀರು ಬೆರೆಸಿದರೆ ಸಾಕು, ಬರೀ*
*ಬಿಸಿ ಮಾಡಿದರೆ ಸಾಕು*
*ಬರೀ ಕತ್ತರಿಸಿದರೆ ಸಾಕು, ಸುಮ್ಮನೆ ತಿಂದರೆ ಸಾಕು.*

ಇಲ್ಲಿ ೧೦ ನಾಮಪದಗಳ ಒಂದು ವಾಕ್ಯದಲ್ಲಿ ಜಾಗತೀಕರಣದ ದೊಡ್ಡ ಮೀಮಾಂಸೆಯನ್ನೇ ಪ್ರತಿಭಾ ಬಿಚ್ಚಿಟ್ಟಿದ್ದಾರೆ. ಅಡುಗೆಮನೆಯೆಂಬುದು ಮನೆಯ ಒಂದು ಭಾಗ ಅಲ್ಲ, ಜಗತ್ತೇ ಅಡುಗೆಮನೆಯಾಗಿದೆ. ಈ ಭಾಷೆ ನಮ್ಮ ನಾರಿಯರದು.

ಹೆಚ್ಚುಮಕ್ಕಳು ತಮ್ಮ ಕಾವ್ಯಗಳಲ್ಲಿ ಇನ್ನೊಂದು ವಿಶೇಷ ಭಾಷೆಯನ್ನು ಬಳಸುತ್ತಾರೆ . ಅದು ಎಲ್ಲರಿಗೂ ಮುಟ್ಟುವ, ತಟ್ಟುವ ಐಂದ್ರಿಕ ಅನುಭವದ ದೇಹಭಾಷೆ. ಈ ಭಾಷೆಯನ್ನು ಬಳಸುವಲ್ಲಿ ನಮ್ಮ ಅಕ್ಕ ಮೊದಲಿಗಳು. ತನ್ನ ಚೆನ್ನಮಲ್ಲಿಕಾರ್ಜುನನೊಂದಿಗಿನ ಸಂಬಂಧವನ್ನು ಹೇಳುವಾಗ ತನ್ನ ಚನ್ನ ಅಪ್ಪಿದರೆ 'ಅಸ್ಥಿಗಳು ನುಗ್ಗುನುಗ್ಗಾಗಬೇಕು' ಎಂದು ಬಯಸುತ್ತಾಳೆ. ನಮ್ಮ ಹೊಸಗನ್ನಡ ಮಹಿಳಾ ಕಾವ್ಯಗಳಲ್ಲೂ ಅಂತಹ ಅಪರೂಪದ ಕ್ಷಣಗಳು ಇವೆ. ಮೊಲೆ, ಮುಡಿ. ಉಡಿ,ಗಳು ಮಾತನಾಡುತ್ತವೆ.

ನಿನ್ನ ಒಳ್ಳೆಯತನವನ್ನು ಟಂಕಿಸಲು ನನ್ನ ಒಡಲನ್ನೇ ಆಯ್ಕೆಮಾಡಿಕೊಂಡ ದೇವನಿಗೆ ಲಲಿತಾ ಸಿದ್ದಬಸವಯ್ಯ 'ಧನ್ಯವಾದಗಳನ್ನು' (ಕಬ್ಬೆನೆಲ) – ಹೇಳುತ್ತಾರೆ. ಅಮೇರಿಕಾ ನಮ್ಮ ಮೇಲೆ ಮಾಡುವ ದಾಳಿಯನ್ನು ಹೇಳುವಾಗ ವಿನಯಾ ಹೀಗೆನ್ನುತ್ತಾರೆ :

ಅಮೇರಿಕಾಕ್ಕೆ ದೇಹಗಳ ಮೇಲೆ ದ್ವೇಷವಿಲ್ಲ
ಅದರ ತಕರಾರಿರುವುದೆಲ್ಲ ಮೆದುಳಿನ ಮೇಲೆ
ಅಮೇರಿಕಾ ನಾಜೂಕು ಶಸ್ತ್ರಕ್ರಿಯೆ ನಡೆಸಿ
ಗರ್ಭಕೋಶ ಗರ್ಭನಾಳ ಎಲ್ಲ ಹಾಗೆ ಬಿಟ್ಟು
ಎರಡು ಟಿಬ್ಬಿಗಳಲ್ಲಿ ಸಂತಾನಹರಣ ಶಸ್ತ್ರಕ್ರಿಯೆ
ನಡೆಯುತ್ತದಲ್ಲ ಹಾಗೆ ಸಲೀಸು

'ಅರ್ಧನಾರೀಶ್ವರ' – ಎಂದು ಕ್ರೆಡಿಟ್ ತೆಗೆದುಕೊಳ್ಳುವ ಗಂಡಿಗೆ ಪ್ರತಿಭಾ ಹೇಳುತ್ತಾರೆ :

*ನಾಚಿಕೆಯಾಗಬೇಕು ಜೀವಕ್ಕೆ*
*ಅರ್ಧ ಕ್ರೆಡಿಟ್ ತೆಗೆದುಕೊಳ್ಳುವುದಕ್ಕೆ*
*ಹೆಣ್ತನದ ಸೂಚನೆಯ ಒಂದು ಸ್ತನ ಧರಿಸಿಬಿಟ್ಟರೆ*
*ಆಯಿತೇ ಲಿಂಗಕ್ಕೆ*
*ಅರೆ ಬಸಿರು ತಡೆಯಬಹುದೇ ಪೂರ್ಣ ಗರ್ಭದ ಹೊರೆ*
*ಇಡೀ ದೇಹವೇ ತಡೆಯಲಾಗದು*
*ಪಾರ್ಶ್ವಕ್ಕೆ ಸಾಕೇ ಪ್ರಣಯ ಬೇಗೆ ?*

– ದೇಹವೆಂಬುದು ಬರೀ ವೈಚಾರಿಕತೆಯ ಸೂಚಕವಷ್ಟೇ ಅಲ್ಲ ವಾಸ್ತವಿಕತೆಯ ಬಿಸಿಯಲ್ಲಿ ಹರಳುಗಟ್ಟುತ್ತದೆ. ಲಲಿತಾ ಸಿದ್ದಬಸವಯ್ಯ (೨೦೦೪-ಕಬ್ಬೆನೆಲ) 'ನಿಯತ್ತು' ಕವಿತೆಯಲ್ಲಿ ಹಸಿದ ಒಡಲಿನ ಹಸಿ ಹಸಿಯಾದ ಚಿತ್ರವನ್ನು ಕೆತ್ತಿದ್ದಾರೆ :

*ಇತತ ಜರುಗಬ್ಯಾಡ, ಮಗು ಮಲಗೈತೆ*
*ಅತ್ತೂ ಅತ್ತೂ ಈಗಿನ್ನ ಹಂಗೆ ಕಣ್ಣು ಮುಚ್ಚೈತೆ*
*ತೋ, ಬಿಡುಎದೆ, ನಂದಿನ್ನಾ ಕುಡಿಯೋ ಮಗು*
*ಕಿರುಚಬ್ಯಾಡ, ಬೇಕಾದ್ರಿರು, ಬ್ಯಾಡ್ಡಿದ್ರೆ ಎದ್ದೋಗು*
*ಏನೆಂದೆ, ಉಪಾಸ ಬೀಳ್ತೀಯೇ ಬೋಸುಡಿ ಅಂದಾ*
*ಹೊಸದಲ್ಲ, ಕಂಡಿದ್ದೀನಿ ಹೋಗು ಹುಟ್ಟಿದಾಗಿನಿಂದ*
*ಜಂಬೂ ಸವಾರಿ ತೋರಿಸ್ತಾರ, ನಿನ್ನಿಪ್ಪತ್ತು ರೂಪಾಯ್ಗೆ*
*ಹಾಲಿನ ಪುಡಿ ಅರ್ಧಡಬ್ಬ ಬರಲ್ಲ ನನ್ನ ಮಗೀಗೆ...*

ಹಸಿದ ಒಡಲ, 'ಹಸಿವು' ಎಂಬ ಸತ್ಯದ ಅನಾವರಣಕ್ಕೆ ಬಳಸಿದ ಈ ಭಾಷೆ ಭಾವ ಸಂವಹನಕ್ಕೆ ಸಮರ್ಥವಾಗಿದೆ. ದೇಹದ ಭಾಷೆಯನ್ನು ಮಹಿಳಾ ಕಾವ್ಯದಲ್ಲಿ ವಾಸ್ತವತೆಯ ನಿಜದ ಅಭಿವ್ಯಕ್ತಿಗೆ, ವೈಚಾರಿಕತೆಯ ನೆಲೆಗೆ ಜೊತೆಗೆ ಭಾವಲೋಕದ ಸೌಂದರ್ಯದ ಅಭಿವ್ಯಕ್ತಿಗೂ ಸಮರ್ಥವಾಗಿ ಬಳಸಬಲ್ಲವರು ನಮ್ಮ ನಾರಿಯರು.

ಪ್ರೇಮದಂತಹ ಸುಕೋಮಲ ಭಾವದ ಅಭಿವ್ಯಕ್ತಿಗೆ ಮುಕ್ತಾಯಕ್ಕನವರು ಬಳಸಿದ ಭಾಷೆ ಮತ್ತೆ ಮತ್ತೆ ಮೆಲುಕು ಹಾಕುವಂತಹದು. ಉದಾರಹರಣೆಗೆ,

*೧) ನನ್ನ ಕಣ್ಣ ಕಪ್ಪಿನಿಂದಲೇ*
*ಕವನ ಬರೆಯುವೆನೆಂದು*
*ನಿನ್ನ ಕಣ್ಣನ್ನು ನನ್ನ ಕಣ್ಣಲ್ಲಿ ನೆಟ್ಟಾಗ*
*ಪ್ರತಿಬಿಂಬ ಪ್ರತಿಬಿಂಬ ಕಂಡಾಗ*
*ಕವನವಂತೂ ಎಲ್ಲೋ ಜಾರಿ ಹೋಗಿ*
*ಕಾಡಿಗೆ ಮಾತ್ರ ತುಂಟನಗೆ ನಕ್ಕಿತು .*

*೨) ಮೊದಲ ಬಾರಿಗೆ ನಿನ್ನ ಮುತ್ತುಗಳು*
*ಮೌನವಾಗಿ ನನ್ನ*
*ಮೈತುಂಬ ಹೆಸರ ಬರೆಯುವಾಗ*
*ಆ ನಿಶ್ಶಬ್ದತೆಯಲ್ಲಿ ಮೌನವೂ ಹಾಡತೊಡಗಿತ್ತು*

**(ನಾನು ಮತ್ತು ಅವನು – ಪುಟ – ೪೨)**

ಇತ್ತೀಚಿನ ಮಹಿಳಾ ಕಾವ್ಯದ ಬೆಳವಣಿಗೆಯನ್ನು ಗುರುತಿಸುವಾಗ ಬಿ. ಎನ್. ಸುಮಿತ್ರಾಬಾಯಿಯವರು ದೇಸೀ ಸ್ತ್ರೀ ಸಂಸ್ಕೃತಿಯು ಸ್ವಂತ ಪರಂಪರೆಯ ಹುಡುಕಾಟದ ಕಡೆಗೆ ಸಾಗಿದೆ ಎನ್ನುತ್ತಾರೆ. ನಮ್ಮ ಸಂಸ್ಕೃತಿಯ ವೈಶಿಷ್ಟ್ಯಗಳನ್ನು ಮಹಿಳಾ ಕಾವ್ಯದಲ್ಲಿ ಗುರುತಿಸಬಹುದೆನ್ನುತ್ತಾರೆ. ಅದಕ್ಕೆ ಸೇರ್ಪಡೆಯಾಗಿ ಇನ್ನೊಂದು ಮಾತು.

ಒಂದು ಕಾಲಕ್ಕೆ 'ಅಮ್ಮ ಅಜ್ಜಿಯರು' ಪರಂಪರೆಯ

ಬಿಗಿ ಹಿಡಿತದ ಸಂಕೇತಗಳು. 'ಅಮ್ಮ ಜಾಗ ಬಿಡೆ ನಾನು ಮುಂದೋಗಬೇಕು' ಎಂದರು ನಮ್ಮ ಕವಿಗಳು. 'ಅಮ್ಮಾ ಸಾಕು ಮಾಡೆ ನಿನ್ನ ಪುರಾಣ ಆಲದ ಮರದ ನೆರಳಲ್ಲಿ ಬೆಳೆದು ಮಾಸಿದ ಗೋಡೆಗಳ ನಡುವೆ ಬಚ್ಚಿಡಬೇಕೆ ನನ್ನದೆಯ ಗೂಡು' ಎಂದವರು ಈಗ ಗೋದತ್ತೆಯ ಬದುಕಿನ ಕ್ರಮವನ್ನು ಅರ್ಥೈಸಿಕೊಳ್ಳುತ್ತಾ ಹೊರಟಿದ್ದಾರೆ. (ಗೋದತ್ತೆ ಮತ್ತು ಬೆಳ್ಳಿ ನಾಣ್ಯ - ಸರ್ವಮಂಗಳ).

*ಬದುಕು ಬಗೆಯಬಾರದು ಮಗಳೇ ಆದರ*
*ಒಳಹೋಗಬೇಕು, ಬಗೆದರೇನೆ ಇಬ್ಭಾಗ ಅಷ್ಟೆ,*
*ಬತ್ತಿ ಹೊಸೆಯುತ್ತಲೇ ಹೆಣೆದುಕೊಳ್ಳುತ್ತಿದ್ದ*
*ಅಜ್ಜಿಯನ್ನು ತಿಳಿವಿಗೆ ತರುತ್ತಿದ್ದಾರೆ.*

ಶಶಿಕಲಾ ವೀರಯ್ಯ ಸ್ವಾಮಿಯವರ 'ಆಹ್ವಾನ' ಕವಿತೆಯು ಹೆಣ್ಣಿನ ಮಹತ್ವ ಎಲ್ಲ ಕಾಲಕ್ಕೂ ನಿಲ್ಲಬಲ್ಲುದೆಂಬ ಸತ್ಯದ ಕಡೆ ಇದೆ. ಬದುಕಿನ ಎಲ್ಲ ಕಷ್ಟಗಳಿಗೂ ಎದೆಯೊಡ್ಡಿ ಎಲ್ಲ ರೂಪಾಂತರಗಳು ಗಟ್ಟಿಯಾದ ಆಕಾರವಾಗಿ ಮತ್ತೆ ಮತ್ತೆ ನೀರುಣಿಸುವ ಹೆಣ್ಣಿನ ಶಕ್ತಿಯನ್ನು ಗೌರವಿಸಿದ್ದಾರೆ.

ಕೊಡುವ, ನೀಡುವ, ಸಲಹುವ, ಕಾಪಾಡುವ, ಶಕ್ತಿಗಳು ಹೆಣ್ಣಿನ ಗುಣಗಳೆಂದು ಅವು ದೌರ್ಬಲ್ಯಕ್ಕೆ ದಾರಿ ಎಂದು ತಿರಸ್ಕಾರಕ್ಕೆ ಒಳಗಾಗಿದ್ದು, ಬದಲಾಗಿ ಈಗ ಅದೇ ಸಾಮರಸ್ಯದ ಸುಂದರ ಬದುಕಿಗೆ ಬೇಕಾದ ಶಕ್ತಿಯೆನ್ನುವುದರ ಕಡೆ ಮಹಿಳಾ ಕಾವ್ಯ ಚಲಿಸುತ್ತಿದೆ. ಇದರೊಳಗೆ ಮಹಿಳೆಯರು ತಮ್ಮ ಅಸ್ಮಿತೆಗಾಗಿ ಪ್ರಯತ್ನಿಸುತ್ತಿದ್ದಾರೆ. ಮಹಿಳೆಯರ ಗ್ರಹಿಕೆ, ಓದು, ಬರಹಗಳನ್ನು ಸಮಾಜ ಸಂಸ್ಕೃತಿಗಳು ಎಷ್ಟೇ ಅವ್ಯಕ್ತವಾಗಿ ನಿಯಂತ್ರಿಸಿದರೂ ತನ್ನ ''ಸ್ಪೇಸ''ನ್ನು ಆಕೆ ಹುಡುಕಿ ಕೊಳ್ಳುತ್ತಿದ್ದಾಳೆ. ಹುಡುಕಿ ಗೆದ್ದು ತನ್ನ ವ್ಯಾನಿಟಿ ಬ್ಯಾಗಿನಲ್ಲಿ ಕಾಪಿಟ್ಟಿದ್ದಾಳೆ. ಮತ್ತು ಜೋರಾಗಿ ವೈದೇಹಿಯಂತೆ ಹೇಳಬಲ್ಲಳು, ''ಇಣುಕಬಾರದು ಚೀಲದೊಳಗನು''. ಕಾಪುರುಷರೆ, ವ್ಯಾನಿಟಿ ಬ್ಯಾಗಿನಲ್ಲಿ ಇಣುಕಿದಾಗ ನಿಮಗೆ ಸಿಗುವುದು ಒಣಗಿದ ಹೂದಳ, ವಿಳಾಸವಿಲ್ಲದ ಲಕೋಟೆ, ಹುಣಸಿಪಿಕ್ಕೆ, ನವಿಲುಗರಿ, ದಾರದ ಹುಂಡೆ ಮುಂತಾದವು. ಇವುಗಳೊಂದಿಗೆ ಮಾತನಾಡಿದರೆ ನಿಮಗೆ ಇವು ತಿಳಿಯುವುದೇ ಇಲ್ಲ ಅವೇ ನಮ್ಮ ಬದುಕಿನ ಅಪೂರ್ವ ಕ್ಷಣಗಳು'' – ಎಂದು ಮಹಿಳೆ ಉಪಮೆ ರೂಪಕಗಳಾಚೆ ನಿಂತು ಅಸ್ಮಿತೆಯನ್ನು ಪ್ರತಿಷ್ಠಾಪಿಸುತ್ತಿದ್ದಾಳೆ. ಜೊತೆಗೆ ಆ ದಾರಿ ನನ್ನದು, ನೀವು ಬರುವುದಾದರೆ ಬನ್ನಿ ಎಂದು ಧೈರ್ಯ, ಸ್ಥೈರ್ಯದ ಭಾಷೆಯಲ್ಲಿ ಹೇಮಾ ಪಟ್ಟಣ ಶೆಟ್ಟಿಯವರ 'ಆಹ್ವಾನ' ಕವಿತೆಯಂತೆ ಆಹ್ವಾನ ನೀಡುತ್ತಾಳೆ. ನನ್ನ ಭಾಷೆ ನಿನಗ ತಿಳಿಯುತ್ತಿಲ್ಲ ಎಂದು ನೊಂದವಳು,

*ನನಗೆ ಆಕಾರವಿಲ್ಲ*
*ನಿನಗೆ ನೋಟವಿಲ್ಲ*
*ಕಾಣಿಸುವುದು ಹೇಗೆ ?*
*ನನಗೆ ಭಾಷೆಯಿಲ್ಲ*
*ನಿನಗೆ ಕಿವಿಯಿಲ್ಲ*

ಮಾತಾಡುವುದು ಹೇಗೆ ? – ಎಂದವರು ಈಗ ತಮ್ಮ ಭಾಷೆಯನ್ನು ಕಟ್ಟಿಕೊಂಡಿದ್ದಾರೆ. ಅದು ಬೆಳೆಯುತ್ತಲೇ ಇದೆ. ಬೆಳೆದು ನಿಂತು ಮಾಗಿದ ಅವರ ಬದುಕಿನ ಅನುಭವದಂತೆ ಭಾಷೆಯು ಸುಪುಷ್ಪವಾಗುತ್ತಿದೆ. ಇಂದಿನ ತಾಂತ್ರಿಕ ಜಗತ್ತನ್ನು ತನ್ನೊಳಗಾಗಿಸಿಕೊಂಡು ಬದುಕಿನ ಆಶಯಕ್ಕೆ ಪೂರಕವಾಗಿ ಭಾಷೆಯನ್ನು ಬೆಳೆಸಿಕೊಂಡಿದ್ದಾರೆ. ಮಹತ್ವದ ಕವಿತೆಯೊಂದನ್ನು ಉಲ್ಲೇಖಿಸುತ್ತ ಮಹಿಳಾ ಕಾವ್ಯ ಸಾಧಿಸಿದ ಯಶಸ್ಸನ್ನು ತಿಳಿಸಿ ನನ್ನ ಮಾತನ್ನು ಮುಗಿಸುತ್ತಿದ್ದೇನೆ.

ಸಾರ್ಥಕ ಸಂಬಂಧಗಳಲ್ಲ ಇರುವುದು ಸಾರ್ಥಕ ಘಳಿಗೆಗಳು ಎಂಬ ಸತ್ಯದ ಅರಿವು ಇಲ್ಲಿದೆ ಎಂದು ಹೆಚ್. ಎಸ್. ಆರ್. ಮುನ್ನುಡಿಯಲ್ಲಿ ಗುರುತಿಸಿರುವ ಈ ಪದ್ಯದ ಮೊಬೈಲ್ ಭಾಷೆಯನ್ನು ಗಮನಿಸಿ :

*ಈ ಮಾರ್ಗವು ಚಾಲನೆಯಲ್ಲಿಲ್ಲ*
*ಸದಾ ತೆರವಾಗಿದ್ದ ಮಾರ್ಗದಲ್ಲಿ ಅಡೆತಡೆ*
*ಈಗ ಮಾರ್ಗವು ಕಾರ್ಯನಿರತವಾಗಿದೆ.*
*ದಯವಿಟ್ಟು ಸ್ವಲ್ಪ ಸಮಯದ ನಂತರ ಪ್ರಯತ್ನಿಸಿ*
*ಸ್ವಲ್ಪ ಸಮಯದ ನಂತರ ಪ್ರಯತ್ನಿಸಿದರೆ*
*ಮಾರ್ಗವು ಸದ್ಯಕ್ಕೆ ಸೇವೆಯಲ್ಲಿರುತ್ತಿರಲಿಲ್ಲ*
..........................................
*ಹಾಗೆ ಸದಾ ಸೇವೆಯಲ್ಲಿರುವ ಬಗ್ಗೆ*
*ನಮ್ಮ ನಡುವೆ ಕರಾರೇನೂ ಆಗಿರಲಿಲ್ಲ*

ಎನ್ನುತ್ತಾರೆ ಪ್ರತಿಭಾ. ಇದನ್ನು ಕರಾರುಗಳಿಲ್ಲದ ಸಾಮಾಜಿಕವಾಗಿ ಒಪ್ಪಿತವೋ ? ಪ್ರಶ್ನಾರ್ಹವೋ ಆಗಿರಬಹುದಾದ ಸಂಬಂಧವೊಂದು, ಬದುಕನ್ನು ಬೆಳಗಿದ, ಅರಸಿದ ಘಳಿಗೆಯೇ ಅಂತಿಮವಾಗಿ ಪ್ರತಿಭಾಗೆ ಮುಖ್ಯ ಎನ್ನುತ್ತಾರೆ. ಎಂ. ಎಸ್. ಆಶಾದೇವಿ, ನನಗಿಲ್ಲ ಮುಖ್ಯವಾಗಿದ್ದು. 'ಆಶಯ ಮತ್ತು ಅಭಿವ್ಯಕ್ತಿ' ಎರಡರ ಅವಿಭಾವದ ಸಂಬಂಧ ಮೊಬೈಲ್ ಭಾಷೆಯಲ್ಲಿ ಒಡಮೂಡಿದ ಬಗೆಯಲ್ಲಿ.

ವಿನಯಾ ಒಕ್ಕುಂದ ಅವರ ಇತ್ತೀಚಿನ ಒಂದು ಪದ್ಯ ಮಹಿಳಾ ಕಾವ್ಯ ಭಾಷೆಯಲ್ಲಿ ಸಾಧಿಸಿದ ಎತ್ತರವನ್ನು ಹೇಳುವಂತಹುದು :

*ಹಿಂಸೆ ಎಂದರೇನು ?*
*ಮಗು ಕೇಳಿತು*
*ಹಾದುಹೋಯಿತು ಎಷ್ಟೆಲ್ಲ ಚಿತ್ರ*
*ಅಜ್ಜನ ಮನೆ ಗಿಳಿ ಗೂಡಕ್ಕಿದ್ದ ಜಿಂಕೆಯ ಕೊಂಬು*
*ದೇವರ ಪೀಠಕ್ಕೆ ಹಾಸಿದ್ದ ಹುಲಿಯ ಚರ್ಮ*
*ಅಡಿಗೆ ಮನೆಯ ಮೋರಿಯಲಿ ಹರಿದ ಕೆಂಪು*
*ನಾನೇ ಕತ್ತರಿಸಿ ಬಿಸಾಡಿದ ಗಿಡ*
*ಕಣ್ಣೀರೂ ಬತ್ತಿದ ಆ ಮುಖ*
*ನೆನಪಾಯಿತು.*
*ದುಶ್ಯಾಸನನ ಕೈ , ದುರ್ಯೋಧನನ ನಗು*
*ಧರ್ಮಜನ ಮೌನ, ಕರ್ಣನ ಕಣ್ಸನ್ನೆ*
*ಭೀಮಾದಿಗಳ ಸಂಯಮ, ರಾಜಧರ್ಮ*
*ನೋಡಿದ್ದೆ*
*ಎದುರು ಬಯಲಲ್ಲಿ*
*ನಾಯಿಗಳು ಹಿಡಿದು ಹರಿದ*
*ಹಂದಿಮರಿ*
*ಒಂದು ಚಿತ್ರ ಮಾತ್ರ*
*ಕಾಂಡಕೊರಕ ಹುಳದಂತೆ ಕೊರೆಯುತ್ತಿದೆ.*
*ಸಜ್ಜನಿಕೆಯ ಧ್ಯಾನವಾಸಿನೊಳಗವರು*
*ಮಗುವಿನ ತಬ್ಬಲಿತನವ ಬಳಸುತ್ತಿದ್ದರು*
*ನಾನು ಬರ್ಫ ಉಟ್ಟಂತೆ*
*ದಂಗು ಬಡಿದು ನಿಂತಿದ್ದೆ*

ಇಲ್ಲಿ ಕಣ್ಣಿಗೆ ಕಾಣುವ ಹಿಂಸೆಯನ್ನು, ಕಾಣುವ ರೂಪಕಗಳಲ್ಲಿ ಹೇಳಿದೆ. ಆದರೆ ಇನ್ನೊಂದು ಹಿಂಸೆ ಇದೆಯಲ್ಲಾ ನಮ್ಮ ಕಣ್ಣಿಗೆ ಕಾಣದ ಆದರೆ ಮೈಮನಗಳಿಗೆ ರಪ ರಪಂದು ಅಪ್ಪಳಿಸುವ ಹಿಂಸೆ ಅದನ್ನು ಹೇಗೆ ಹೇಳ ಬಹುದು ನೋಡಿ, ಇಂದಿನ ಈ ಹೊಸ ಭಾಷೆ ಹೀಗಿದೆ :

*ಅವರು*
*ಪರಿಣಿತರು*
*ವೈರಿಗಳಿಲ್ಲದಂತೆ ನೋಡಿಕೊಂಡು*
*ಹೂವಿನ ದೇಟು ಮುರಿದ ನಾಜೂಕಿನಲಿ*
*ಭಾವನೆಯ ಮುರಿದರು*
*ಹರಿತ ಚಾಕುವಿನ ಚಕ ಚಕ ನುಲಿತದಲಿ*
*ನೆತ್ತರಂಟದ ಹಾಗೆ ಕತ್ತರಿಸಿದರು*
*ಆ ಎಲ್ಲ ಹೊತ್ತಲ್ಲೂ*
*ಎಂದೂ ಆರದ ಮಂದಹಾಸವ*
*ಅವರ ತುಟಿಗಳಿಗಂಟಿಸಿದ ದೇವರೆ*
*ಎಂದೂ ಬಿರುಸಾಗದ ದನಿಯ*
*ಕಂಠಕ್ಕೆ ಕೊಟ್ಟ ಪರವರ್ದಿಗಾರನೆ*
*ಎಂದೂ ಕೆಂಪುಗುಳದ ಕಣ್ಣ*
*ಮಿಂಚ ಕೊಟ್ಟ ದಯಾಳುವೆ*
*ಹಿಂಸೆಗೆ ಇದಾವ ಹೊಸ ಭಾಷೆ ಬರೆದೆ ?*

೨೧ನೇ ಶತಮಾನದ ಹಿಂಸೆಯು ಈ ಕ್ರಮದ್ದು. ಈ 'ಅವರು' ಯಾರು ? ಯಾರ್‍ಯಾರಾಗಿರಬಹುದು ? ನಮ್ಮ - ನಮ್ಮ ಚೌಕಟ್ಟಿಗೆ ಬಿಟ್ಟಿದ್ದು.

**ಡಾ|| ಕೆ. ಆರ್. ಸಿದ್ದಗಂಗಮ್ಮ**
ಲಿಂಗರಾಜ ಕಾಲೇಜು, ಬೆಳಗಾವಿ.

# ಅಭಿನಂದನೆಗಳು



**ನವಕರ್ನಾಟಕ ಪ್ರಕಾಶನಕ್ಕೆ ಹಲವಾರು ಪುಸ್ತಕಗಳನ್ನು ಬರೆದಿರುವ ಜನಪ್ರಿಯ ವಿಜ್ಞಾನ ಲೇಖಕರಾದ ಶ್ರೀ ಟಿ. ಆರ್. ಅನಂತರಾಮು ಅವರಿಗೆ 'ಕರ್ನಾಟಕ ವಿಜ್ಞಾನ–ತಂತ್ರಜ್ಞಾನ ಅಕಾಡೆಮಿ' ನೀಡುವ ೨೦೧೨ನೇ ಸಾಲಿನ ಶ್ರೇಷ್ಠ ಲೇಖಕ ಪ್ರಶಸ್ತಿಯನ್ನು ಅವರ 'ದೈತ್ಯ ಪ್ರತಿಭೆಗಳ ಹೆಗಲ ಮೇಲೆ' (ಪ್ರ – ಸಪ್ನ ಬುಕ್ ಹೌಸ್) ಎಂಬ ಕೃತಿಗೆ ನೀಡಲಾಗಿದೆ. ಪ್ರಶಸ್ತಿ ಪುರಸ್ಕೃತರಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.**

◆ ಡಾ|| ಎಚ್. ಎಸ್. ಗೋಪಾಲ ರಾವ್ ◆




**ಭಾ**ರತ ಮತ್ತು ಪಾಕಿಸ್ತಾನವನ್ನು ಮಾತ್ರವಲ್ಲದೆ ಕಾಶ್ಮೀರಿಗಳನ್ನೂ ಅರವತ್ತು ವರ್ಷಕ್ಕೂ ಹೆಚ್ಚು ಕಾಲದಿಂದ ಕಾಡುತ್ತಿರುವ ಕಾಶ್ಮೀರದ ಸಮಸ್ಯೆ ಬಗೆಹರಿಯುವ ಸೂಚನೆಯೇ ಇಲ್ಲ ಎಂಬ ನಿರಾಶೆಯ ವಾತಾವರಣವು ಇಡೀ ವಿಶ್ವವನ್ನು ಚಿಂತೆಗೀಡುಮಾಡಿದೆ. ಕಾಶ್ಮೀರವು ಒಂದು ಸಮಸ್ಯೆಯಾಗಬೇಕಾದ ಕಾರಣವೇ ಇರಲಿಲ್ಲ, ಕಾಶ್ಮೀರಿಗಳು ಯಾವುದೇ ಆತಂಕವಿಲ್ಲದೆ, ನೆಮ್ಮದಿಯಿಂದ ಬದುಕುವ ದಿನಗಳಿಗಾಗಿ ಹಂಬಲಿಸುತ್ತಿದ್ದಾರೆ ಎಂಬ ಸರಳ ಸತ್ಯವನ್ನು ಇಡೀ ವಿಶ್ವ ಅರ್ಥಮಾಡಿಕೊಳ್ಳುವ ಅವಶ್ಯಕತೆ ಇದೆ ಎಂದು ಶಾಂತಿಯನ್ನು ಬಯಸುವ ಯಾರಿಗೇ ಆದರೂ ಅನಿಸಬಹುದು.

ವಿಶ್ವದ ಇತಿಹಾಸದಲ್ಲಿ ಅದೆಷ್ಟೋ ಘಟನೆಗಳು ಕಪ್ಪು ಚುಕ್ಕೆಯಂತೆ ಉಳಿದುಹೋಗಿವೆ. ಅಂತಹವುಗಳಲ್ಲಿ ಭಾರತದ ವಿಭಜನೆಯೂ ಒಂದು. ಮುತ್ಸದ್ದಿಗಳೆಂದು ಭಾವಿಸಲಾದ ಕೆಲವು ರಾಜಕಾರಣಿಗಳ ಹಠಮಾರಿತನದಿಂದ ಸೃಷ್ಟಿಯಾದ ಸಮಸ್ಯೆ ಅಂತಹುದೇ ಪ್ರತಿಷ್ಠೆಯ ಕಾರಣದಿಂದ ಬಗೆಹರಿಯದೆ, ದಿನದಿಂದ ದಿನಕ್ಕೆ ಉಲ್ಬಣಗೊಳ್ಳುತ್ತಿದೆ. ಯಾರಿಗೂ ಸಮಸ್ಯೆಯ ನಿವಾರಣೆ ಬೇಡವಾಗಿದೆ; ಸಮಸ್ಯೆ ಬಗೆಹರಿದರೆ, ಸಂಘರ್ಷಕ್ಕೆ ಕಾರಣ ಇರುವುದಿಲ್ಲ, ಆಗ ರಾಜಕಾರಣದಿಂದ ಪ್ರಯೋಜನ ಪಡೆಯುವವರಿಗೆ ಅವಕಾಶಗಳು ತಪ್ಪುತ್ತವೆ. ಸದಾ ಸುದ್ದಿಯಲ್ಲಿರಬಯಸುವ, ತಾವೇ ದೇಶದ ಭವಿಷ್ಯವನ್ನು ನಿರ್ಧರಿಸುವ ಜವಾಬ್ದಾರಿ ಮತ್ತು ಹೊಣೆಗಾರಿಕೆ ಹೊತ್ತವರು ಎಂದು ಸ್ವಯಂಘೋಷಣೆ ಮಾಡಿಕೊಂಡ ಮುಂದಾಳುಗಳು ಹೊಸ ಹೊಸ ಸಮಸ್ಯೆಗಳನ್ನು ಸೃಷ್ಟಿಸುತ್ತಾರೆ. ಇದರಿಂದ ಆಯಾ ಪ್ರದೇಶದ ಜನರಿಗೆ, ಅದರಲ್ಲೂ ಸಾಮಾನ್ಯ ಜನರಿಗೆ ತೊಂದರೆಗಳು ಹೆಚ್ಚುತ್ತವೆ. ಒಟ್ಟಾರೆ ನೋವನ್ನು ಅನುಭವಿಸಬೇಕಾದವರು ಸಾಮಾನ್ಯ ಜನ. ಕಾಶ್ಮೀರದ ಸಮಸ್ಯೆಯಿಂದ ತೊಂದರೆ ಅನುಭವಿಸುತ್ತಿರುವವರು ಸಾಮಾನ್ಯ ಜನ. ಶ್ರೀಮಂತರು ಮತ್ತು ಅಧಿಕಾರಸ್ಥರು ಯಾವುದೇ ಗೋಜುಗೊಂದಲಗಳಿಗೆ ಗುರಿಯಾಗದೆ ನೆಮ್ಮದಿಯಿಂದಿದ್ದಾರೆ.

ಕಾಶ್ಮೀರವು ಸಮಸ್ಯೆಯ ಕೇಂದ್ರವಾಗಲು ಕಾರಣವೇನು? ಸಂಯುಕ್ತ ಭಾರತದಲ್ಲಿ ಕಾಶ್ಮೀರದ ಸ್ಥಾನ ಏನಾಗಿತ್ತು? ದೇಶದ ವಿಭಜನೆಯೊಂದಿಗೆ ಸೃಷ್ಟಿಯಾದ ಕಾಶ್ಮೀರದ ಸಮಸ್ಯೆಯ ನಿವಾರಣೆಗೆ ಉಪಾಯಗಳೇ ಇಲ್ಲವೆ? ಕಾಶ್ಮೀರವು ಇಂತಹ ಇನ್ನೂ ಅನೇಕ ಪ್ರಶ್ನೆಗಳನ್ನು ಹುಟ್ಟುಹಾಕಿದೆ. ಇವುಗಳಿಗೆಲ್ಲಾ ಉತ್ತರ ಇಲ್ಲವೆಂದಲ್ಲ.

ಭಾರತದ ವಿಭಜನೆಯೊಂದಿಗೆ ಸೃಷ್ಟಿಯಾಗಿರುವ ಕಾಶ್ಮೀರ ಸಮಸ್ಯೆ ಇಂದಿಗೂ ಮುಂದುವರಿದುಕೊಂಡೇ ಬಂದಿದೆ. ಇದು ಭಾರತದ ಇತಿಹಾಸಕಾರರನ್ನು ಮಾತ್ರವಲ್ಲದೆ, ಬಹುತೇಕ ಇಡೀ ವಿಶ್ವದ ಎಲ್ಲ ಇತಿಹಾಸಕಾರರು ಮತ್ತು ರಾಜತಂತ್ರಜ್ಞರ ಬುದ್ಧಿ ಮತ್ತು ಮನಸ್ಸುಗಳನ್ನೂ ಆಕ್ರಮಿಸಿಕೊಂಡಿದೆ. ಬಹುತೇಕ ಎಲ್ಲ ಇತಿಹಾಸಕಾರರು, ರಾಜತಂತ್ರಜ್ಞರು ಮತ್ತು ಜನತೆಯೂ ಈ ಸಮಸ್ಯೆ ಆದಷ್ಟು ಬೇಗ ಬಗೆಹರಿಯಲೆಂದು ಆಶಿಸುತ್ತಾರೆ. ಆದರೆ ಎರಡೂ ದೇಶಗಳು ಮಾತ್ರವಲ್ಲದೆ, ಇನ್ನೂ ಹಲವು ಆಸಕ್ತ ದೇಶಗಳ ರಾಜಕಾರಣಿಗಳಿಗೆ ಸಮಸ್ಯೆ ಬಗೆಹರಿಸುವುದರ ಬಗ್ಗೆ ಅಷ್ಟೊಂದು ಆಸಕ್ತಿ ಇಲ್ಲ, ಹಾಗೇನಾದರೂ ಸಮಸ್ಯೆ ಬಗೆಹರಿದರೆ, ನಂತರ

# ಸ್ವರ್ಗವೆನಿಸಿಕೊಂಡರೂ ಸ್ವರ್ಗವಾಗದ ಕಾಶ್ಮೀರ




ಲೇಖಕರು
**ಡಾ|| ಸಿ. ಚಂದ್ರಪ್ಪ**
ಪುಟಗಳು : xviii + ೩೧೮ ಬೆಲೆ : ರೂ. ೨೨೫
ಪ್ರಕಾಶಕರು
ಸೃಷ್ಟಿ ಪಬ್ಲಿಕೇಷನ್ಸ್, ಬೆಂಗಳೂರು

**ಕಾಶ್ಮೀರವು ಸಮಸ್ಯೆಯ ಕೇಂದ್ರವಾಗಲು ಕಾರಣವೇನು? ಸಂಯುಕ್ತ ಭಾರತದಲ್ಲಿ ಕಾಶ್ಮೀರದ ಸ್ಥಾನ ಏನಾಗಿತ್ತು? ದೇಶದ ವಿಭಜನೆಯೊಂದಿಗೆ ಸೃಷ್ಟಿಯಾದ ಕಾಶ್ಮೀರದ ಸಮಸ್ಯೆಯ ನಿವಾರಣೆಗೆ ಉಪಾಯಗಳೇ ಇಲ್ಲವೆ? ಕಾಶ್ಮೀರವು ಇಂತಹ ಇನ್ನೂ ಅನೇಕ ಪ್ರಶ್ನೆಗಳನ್ನು ಹುಟ್ಟುಹಾಕಿದೆ. ಇವುಗಳಿಗೆಲ್ಲಾ ಉತ್ತರ ಇಲ್ಲವೆಂದಲ್ಲ. ಭಾರತದ ವಿಭಜನೆಯೊಂದಿಗೆ ಸೃಷ್ಟಿಯಾಗಿರುವ ಕಾಶ್ಮೀರ ಸಮಸ್ಯೆ ಇಂದಿಗೂ ಮುಂದುವರಿದುಕೊಂಡೇ ಬಂದಿದೆ. ಇದು ಭಾರತದ ಇತಿಹಾಸಕಾರರನ್ನು ಮಾತ್ರವಲ್ಲದೆ, ಬಹುತೇಕ ಇಡೀ ವಿಶ್ವದ ಎಲ್ಲ ಇತಿಹಾಸಕಾರರು ಮತ್ತು ರಾಜತಂತ್ರಜ್ಞರ ಬುದ್ಧಿ ಮತ್ತು ಮನಸ್ಸುಗಳನ್ನೂ ಆಕ್ರಮಿಸಿಕೊಂಡಿದೆ.**

ಚರ್ಚಿಸಲು ಅಥವಾ ಆರೋಪ ಮತ್ತು ಪ್ರತ್ಯಾರೋಪಗಳಿಗೆ ಕಾರಣಗಳೇ ಇಲ್ಲವಾಗುತ್ತದೆ. ಸಮಸ್ಯೆ ಜೀವಂತವಾಗಿದ್ದರೆ, ತಮ್ಮ ಆರೋಪ- ಪ್ರತ್ಯಾರೋಪಗಳ, ದ್ವೇಷ ಮನೋಭಾವದ ಸಂಘರ್ಷವನ್ನು ನಿರಂತರವಾಗಿ ಮುಂದುವರಿಸಿಕೊಂಡು ಹೋಗಬಹುದು. ತಮ್ಮ ಅಸ್ತಿತ್ವವನ್ನು ಸಾಬೀತುಪಡಿಸಲು ಇಂತಹ ತಂತ್ರಗಾರಿಕೆ ಬೇಕಾಗುತ್ತದೆ.

ಡಾ|| ಸಿ. ಚಂದ್ರಪ್ಪ ಅವರ 'ಭಾರತ ಮತ್ತು ಪಾಕಿಸ್ತಾನ-ಕಾಶ್ಮೀರ' ಕೃತಿಗೆ ಮುನ್ನುಡಿ ಬರೆದಿರುವ ರಾಜ್ಯಶಾಸ್ತ್ರದ ಪ್ರಾಧ್ಯಾಪಕ ಪ್ರೊ|| ಎಂ. ಜೆ. ಕೃಷ್ಣನ್, ಕೃತಿಕಾರರು, ''ಹೇರಳವಾಗಿ ಆನುಷಂಗಿಕ ಮಾಹಿತಿಗಳನ್ನು ಆಧರಿಸಿ, ಭಾರತ ಮತ್ತು ಪಾಕಿಸ್ತಾನದ ವಿಭಜನೆಯ ಹಂತದಿಂದ ಆರಂಭಿಸಿ, ಇತ್ತೀಚಿನ ಭಾರತದ ಸಂಧಾನಕಾರರ ವರದಿಯವರೆಗೆ ವಿಸ್ತೃತವಾಗಿ ನಿರೂಪಿಸಿದ್ದಾರೆ'' ಎಂಬ ಮಾತಿಗೆ ಸಮ್ಮತಿ ಸೂಚಕವಾಗಿ ಪ್ರೊ|| ಸಿ. ಚಂದ್ರಪ್ಪ ಅವರು ೨೦೧೨ರ ಮೇ ತಿಂಗಳಲ್ಲಿ ಪ್ರಕಟವಾದ ಮಾಹಿತಿಯನ್ನೂ ಆಧರಿಸಿರುವುದನ್ನು ಉಲ್ಲೇಖಿಸಬಹುದು.

ಭಾರತಕ್ಕೆ ಸ್ವಾತಂತ್ರ್ಯ ದೊರೆಯುವ ಸ್ವಲ್ಪ ದಿನಗಳ ಮೊದಲೇ ಭಾರತವನ್ನು ಎರಡು ಸ್ವತಂತ್ರ ರಾಷ್ಟ್ರಗಳನ್ನಾಗಿ ವಿಭಜಿಸುವ ತೀರ್ಮಾನವಾಗಿತ್ತು. ಆ ಪ್ರಕಾರ ಭಾರತಕ್ಕೆ ಸ್ವಾತಂತ್ರ್ಯ ಬಂದರೂ, ದೇಶವು ಎರಡು ಭಾಗಗಳಾಗಿ ಒಡೆದು, ಪಾಕಿಸ್ತಾನವು ಅಸ್ತಿತ್ವಕ್ಕೆ ಬಂದಿತು. ಆ ಹೊತ್ತಿಗೆ ಭಾರತದಲ್ಲಿಯೇ ಸ್ವತಂತ್ರ ಸಂಸ್ಥಾನಗಳಲ್ಲದೆ, ಬ್ರಿಟಿಷರ ಆಳ್ವಿಕೆಗೆ ಒಳಪಟ್ಟಿದ್ದ ಪ್ರದೇಶಗಳೂ ಇದ್ದವು. ಬ್ರಿಟಿಷರು ತಮ್ಮ ಆಡಳಿತ ವ್ಯಾಪ್ತಿಯಲ್ಲಿದ್ದ ಪ್ರದೇಶಗಳನ್ನು ಸ್ವತಂತ್ರ ಎಂದು ಘೋಷಿಸಿದರೂ, ಸ್ವತಂತ್ರ ಸಂಸ್ಥಾನಗಳು ವಿಲೀನಗೊಳ್ಳದೆ, ಭಾರತದ ಒಕ್ಕೂಟ ವ್ಯವಸ್ಥೆ ಅಸ್ತಿತ್ವಕ್ಕೆ ಬರಲು ಸಾಧ್ಯವಿರಲಿಲ್ಲ. ಸರ್ದಾರ್ ಪಟೇಲ್ ಸೇರಿದಂತೆ ಅನೇಕ ಹಿರಿಯ ಮುತ್ಸದ್ದಿಗಳ ಪ್ರಯತ್ನದಿಂದಾಗಿ ಸಂಸ್ಥಾನಗಳು ಭಾರತದ ಒಕ್ಕೂಟ ವ್ಯವಸ್ಥೆಗೆ ಸೇರಿಕೊಂಡವು.

ಭಾರತ ವಿಭಜನೆಯ ಸಂದರ್ಭದಲ್ಲಿ ಆದ ಹಾನಿಯನ್ನು, ನೋವನ್ನು ನೆನಪು ಮಾಡಿಕೊಳ್ಳುವುದೇ ದುಸ್ತರ ಎನ್ನುವ ಪರಿಸ್ಥಿತಿ ಇಂದಿಗೂ ಇದೆ. ದೇಶದ ವಿಭಜನೆಗೆ ಮನಃಪೂರ್ವಕವಾಗಿ ಒಪ್ಪಿಕೊಳ್ಳದ ಭಾರತ, ಪಾಕಿಸ್ತಾನದ ನಾಶಕ್ಕೆ ಪ್ರಯತ್ನಿಸುತ್ತಿದೆ ಎಂಬ ಭಾವನೆ ಇದೆ ಎಂದು ತಿಳಿಸುವ ಲೇಖಕರು, ಭಾರತ ಮತ್ತು ಪಾಕಿಸ್ತಾನಗಳ ಸಂಬಂಧ ಹದಗೆಡಲು ಕಾರಣವಾದ ಕೆಲವು ಅಂಶಗಳನ್ನು ಗುರುತಿಸಿದ್ದಾರೆ. ಇದರಲ್ಲಿ ಕಾಶ್ಮೀರ ವಿವಾದವೂ ಒಂದು. ಮೊದಲಿಗೆ ಪಾಕಿಸ್ತಾನದ ಜೊತೆಗೆ ಉತ್ತಮ ಬಾಂಧವ್ಯ ಹೊಂದಿರದಿದ್ದ ಚೀನಾ, ನಂತರದ ದಿನಗಳಲ್ಲಿ ಬಾಂಧವ್ಯವನ್ನು ಉತ್ತಮಪಡಿಸಿಕೊಂಡಿದೆ. ೧೯೫೪ರಿಂದಲೂ ಅಮೆರಿಕಾ ಪಾಕಿಸ್ತಾನಕ್ಕೆ ಒಂದಲ್ಲ ಒಂದು ರೀತಿಯ, ಅದರಲ್ಲೂ ವಿಶೇಷವಾಗಿ ಮಿಲಿಟರಿ ನೆರವನ್ನು ನೀಡುತ್ತಿದೆ. ಈ ಎಲ್ಲ ಕಾರಣಗಳಿಂದ ಪಾಕಿಸ್ತಾನ ಮತ್ತು ಭಾರತದ ಸಂಬಂಧ ಸುಧಾರಣೆ ಆಗುವುದರ ಬದಲು ಹದಗೆಡುತ್ತಿದೆ ಎಂಬ ಅಭಿಪ್ರಾಯವಿದೆ.

ಕಾಶ್ಮೀರದ ಮಹಾರಾಜ ಹರಿಸಿಂಗ್, ಮೊದಲಿಗೆ ಭಾರತ ಅಥವಾ ಪಾಕಿಸ್ತಾನ, ಇವೆರಡರಲ್ಲಿ ಯಾವ ಒಕ್ಕೂಟಕ್ಕೂ ಸೇರದೆ ಸ್ವತಂತ್ರವಾಗಿರುವ ನಿರ್ಧಾರ ಮಾಡಿದ್ದರೂ, ಪಾಕಿಸ್ತಾನದ ಶಸ್ತ್ರಸಜ್ಜಿತ ದಾಳಿಯಿಂದ ರಕ್ಷಣೆ ಪಡೆಯುವ ಸಲುವಾಗಿ ಭಾರತ ಒಕ್ಕೂಟದ ಜೊತೆಗೆ ಸೇರಲು ನಿರ್ಧರಿಸಿ, ೧೯೪೭ರ ಅಕ್ಟೋಬರ್ ೧೬ರಂದು ಒಪ್ಪಂದಕ್ಕೆ ಸಹಿ ಮಾಡಿದ ನಂತರ ಬಿಗಡಾಯಿಸಿದ ಪರಿಸ್ಥಿತಿ ಇನ್ನೂ ಸುಧಾರಿಸಿಲ್ಲ. ೧೯೪೭ರ ಡಿಸೆಂಬರ್‌ನಿಂದಲೂ ವಿವಾದವು ವಿಶ್ವಸಂಸ್ಥೆಯ ಅಂಗಳದಲ್ಲಿದೆ. ೧೯೫೧ರಲ್ಲಿ ಚುನಾಯಿತವಾದ ಕಾಶ್ಮೀರದ ರಾಜ್ಯಾಂಗ ಸಭೆಯು ೧೯೫೧ರಲ್ಲಿ ಭಾರತದೊಡನೆ ಕಾಶ್ಮೀರವು ವಿಲೀನವಾಗುವುದಕ್ಕೆ ಒಪ್ಪಿಗೆ ನೀಡಿದೆ. ಚುನಾಯಿತ ಸರ್ಕಾರವು ನೀಡಿರುವ ಒಪ್ಪಿಗೆಯನ್ನು ಜನತೆಯ ಅಭಿಪ್ರಾಯ ಎಂದೇ ಪರಿಗಣಿಸಬೇಕು ಎಂಬುದು ಕೆಲವು ರಾಜನೀತಿಜ್ಞರ ಅಭಿಪ್ರಾಯ. ಆದರೆ ಇದನ್ನು ಪಾಕಿಸ್ತಾನ ಒಪ್ಪುತ್ತಿಲ್ಲ.

ಈ ಸಂದರ್ಭದಲ್ಲಿ ಲೇಖಕರು ಕ್ರಿ.ಶ. ೧೨ನೆಯ ಶತಮಾನದಿಂದ ೧೯೪೭ರವರೆಗಿನ ಕಾಶ್ಮೀರದ ಇತಿಹಾಸವನ್ನು ಸಂಕ್ಷಿಪ್ತವಾಗಿ ನಿರೂಪಿಸಿ, ಮುಂದಿನ ಚರ್ಚೆಗಳಿಗೆ ಸರಿಯಾದ ವೇದಿಕೆಯನ್ನು ನಿರ್ಮಿಸಿದ್ದಾರೆ. ಕೆಲವು ನಾಯಕರ ಭಿನ್ನಾಭಿಪ್ರಾಯಗಳು ನಂತರದ ದಿನಗಳಲ್ಲಿ ಹೇಗೆ ಘರ್ಷಣೆಗಳಿಗೆ ಅವಕಾಶ ನೀಡಿದವು ಎಂಬ ಬಗ್ಗೆ ಲೇಖಕರು ವಿಶದವಾಗಿ ಚರ್ಚಿಸಿದ್ದಾರೆ.

ಜನಾಭಿಪ್ರಾಯ ಪಡೆದು ಕಾಶ್ಮೀರದ ಸಮಸ್ಯೆಯನ್ನು ಬಗೆಹರಿಸಬಹುದೆಂಬ ಪಾಕಿಸ್ತಾನದ ಬೇಡಿಕೆಯ ಬಗ್ಗೆ ಹಲವು ಚರ್ಚೆಗಳು ನಡೆದಿವೆ. ಮುಕ್ತ ವಾತಾವರಣದಲ್ಲಿ ಜನಾಭಿಪ್ರಾಯ ಸಂಗ್ರಹಣೆಯಾದರೆ, ಸ್ಪಷ್ಟ ಅಭಿಪ್ರಾಯ ದೊರೆಯುವ ಸಂಭವವಿದೆ. ಬಂದೂಕಿನ ತುದಿಯನ್ನು ತಲೆಗೆ ಗುರಿ ಇಟ್ಟು ಪಡೆಯುವ ಜನಾಭಿಪ್ರಾಯವು ಮುಕ್ತವಲ್ಲ ಎಂಬ ಮಾತನ್ನು ಪಾಕಿಸ್ತಾನ ಒಪ್ಪಲು ಸಿದ್ಧವಿಲ್ಲ.

೧೯೪೭ರಲ್ಲಿ ಕಾಶ್ಮೀರವು ಭಾರತದೊಡನೆ ವಿಲೀನವಾದ ನಂತರ ಅಲ್ಲಿ ಪ್ರಜಾತಂತ್ರ ವ್ಯವಸ್ಥೆ ಯಶಸ್ವಿಯಾಗಿ ಕಾರ್ಯನಿರ್ವಹಿಸುತ್ತಿದೆ ಎಂದು ಎಲ್ಲರೂ ಬಲ್ಲರು. ರಾಜಕೀಯ ಪಕ್ಷಗಳ ನಾಯಕರ ಭಿನ್ನಾಭಿಪ್ರಾಯವನ್ನು ಇಡಿಯಾಗಿ ಕಾಶ್ಮೀರ ಜನತೆಯ ಅಭಿಪ್ರಾಯ ಎಂದು ಒಪ್ಪಿಕೊಳ್ಳುವುದು ಎಷ್ಟು ಸಮಂಜಸ ಎಂಬ ಬಗ್ಗೆ ತರ್ಕಬದ್ಧ ಚರ್ಚೆ ನಡೆದರೆ, ಸಮಸ್ಯೆಗೆ ಪರಿಹಾರ ಸಿಗಬಹುದು. ಕಾಶ್ಮೀರದ ಸಮಸ್ಯೆಯ ವಿಚಾರದಲ್ಲಿ ಕಾಶ್ಮೀರದ ನಾಯಕರ ನಡುವೆ ಇರುವ ಭಿನ್ನಾಭಿಪ್ರಾಯಗಳನ್ನು ಲೇಖಕರು ಅನೇಕ ಮೂಲಗಳಿಂದ ಸಂಗ್ರಹಿಸಿ, ಆ ಹಿನ್ನೆಲೆಯಲ್ಲಿ ಸಾಧ್ಯವಿದ್ದಷ್ಟೂ ತರ್ಕಬದ್ಧ ಪರಿಶೀಲನೆ ಮಾಡಿದ್ದಾರೆ.

ಭಾರತ ಮತ್ತು ಪಾಕಿಸ್ತಾನಗಳ ನಡುವೆ ೧೯೬೫ ಮತ್ತು ೧೯೭೧ರಲ್ಲಿ ನಡೆದ ಯುದ್ಧಗಳು ಎರಡೂ ದೇಶಗಳ ನಡುವಿನ ದ್ವೇಷವನ್ನು ಹೆಚ್ಚಿಸಿವೆಯಷ್ಟೇ ಹೊರತು ಯಾವುದೇ ಸಮಸ್ಯೆಯನ್ನು ನಿವಾರಿಸಿಲ್ಲ. ೧೯೬೬ರ ಆರಂಭದಲ್ಲಿ ಆದ ತಾಷ್ಕೆಂಟ್ ಒಪ್ಪಂದವೂ ಭಾರತ-ಪಾಕಿಸ್ತಾನಗಳ ಸಮಸ್ಯೆಯನ್ನು ನಿವಾರಿಸಿಲ್ಲ. ಈ ಎಲ್ಲ ವಿಷಯಗಳನ್ನು ಕುರಿತು ಕ್ಷ-ಕಿರಣ ಬೀರುವ ಕೆಲಸವನ್ನು ಡಾ|| ಸಿ. ಚಂದ್ರಪ್ಪ ಮಾಡಿದ್ದಾರೆ.

ಕಾಶ್ಮೀರದ ಸಮಸ್ಯೆಯು ಬಗೆಹರಿಯದೆ ಉಲ್ಬಣಗೊಳ್ಳುತ್ತಿರುವುದಕ್ಕೆ ಕಾಶ್ಮೀರದ ರಾಜಕೀಯ ಚಟುವಟಿಕೆಗಳೂ ಕಾರಣ ಎಂಬುದನ್ನು ಲೇಖಕರು ಗುರುತಿಸಿದ್ದಾರೆ. ಕಾಂಗ್ರೆಸ್ ಮತ್ತು ನ್ಯಾಷನಲ್ ಕಾನ್ಫರೆನ್ಸ್ ಪಕ್ಷಗಳ ನಡುವಿನ ಸ್ಪರ್ಧೆಯು ಸಮಸ್ಯೆಯ ನಿವಾರಣೆಗೆ ಪೂರಕವಾಗಿಲ್ಲ. ಈ ವಿಚಾರಗಳನ್ನು ಲೇಖಕರು ಅಂಕಿ-ಅಂಶ ಮಾಹಿತಿಗಳ ಸಹಿತ ವಿಶ್ಲೇಷಿಸಿದ್ದಾರೆ. ಪಾಕಿಸ್ತಾನ ಮತ್ತು ಭಾರತ ಎರಡರ ಮೊಂಡುವಾದಗಳು ಸಮಸ್ಯೆಯು ಬಗೆಹರಿಯಲು ಅಡ್ಡಿಯಾಗಿವೆ ಎಂಬುದು ಸ್ಪಷ್ಟವಾಗಿದೆ. ಕಾಶ್ಮೀರದ ಬಗ್ಗೆ ಅಧ್ಯಯನ ಮಾಡುತ್ತಿರುವ ಸಂಸ್ಥೆಯೊಂದರ ಪ್ರಕಾರ, ಸ್ವಯಂನಿರ್ಣಯಾಧಿಕಾರದ ಬಗ್ಗೆ ನಡೆಯುತ್ತಿದ್ದ ಹೋರಾಟವನ್ನು ಹಲವು ಬಗೆಯ ಮೋಸ ಮತ್ತು ವಂಚನೆಗಳು ದಮನಗೊಳಿಸಿದ್ದರೂ, ಕಾಶ್ಮೀರದ ಜನತೆಯು ಸ್ವಾಭಿಮಾನದಿಂದ, ಅಹಿಂಸಾತ್ಮಕ ಹೋರಾಟದಿಂದ ಯಾವುದೇ ಪ್ರಯೋಜನವಿಲ್ಲ ಎಂಬ ಕಾರಣದಿಂದ ಸಶಸ್ತ್ರ ಹೋರಾಟಕ್ಕೆ ಅಣಿಯಾಗಿದ್ದಾರೆ. ಈ ಸಂದರ್ಭದಲ್ಲಿ ಸೃಷ್ಟಿಯಾದದ್ದು ಜೆ.ಕೆ.ಎಲ್.ಎಫ್. ಎಂಬ ಸಂಘಟನೆ. ಜೆ.ಕೆ.ಎಲ್.ಎಫ್.ನ ಧರ್ಮನಿರಪೇಕ್ಷ ನಿಲುವನ್ನು ಪ್ರತಿಭಟಿಸುವ ಸಲುವಾಗಿ ಪಾಕಿಸ್ತಾನ ಹಿಜಬುಲ್ ಮುಜಾಹಿದ್ದೀನ್ ಸಂಘಟನೆಯನ್ನು ಸಮರ್ಥಿಸುತ್ತದೆ ಎಂದು ತಿಳಿಯಲಾಗಿದೆ. ಎರಡೂ ದೇಶಗಳು ಬೆಂಬಲ ನೀಡುವ ಪಕ್ಷಗಳು ಪರಸ್ಪರ ಹಿಂಸಾತ್ಮಕ ಕೃತ್ಯಗಳಲ್ಲಿ ನಿರತವಾಗಿರುವುದನ್ನು ಲೇಖಕರು ಮನಗಾಣಿಸುತ್ತಾ, ಯಾವುದೇ ನೆರವಿಲ್ಲದ ಕಾಶ್ಮೀರಿ ಪಂಡಿತರು ಕಾಶ್ಮೀರವನ್ನು ತೊರೆದುಹೋಗಿದ್ದಾರೆಂದು ಹೇಳುತ್ತಾರೆ. ಮೊದಲಿಗೆ ಸೌಹಾರ್ದತೆಯಿಂದ ಬದುಕು ನಡೆಸುತ್ತಿದ್ದ ಮುಸಲ್ಮಾನರು

(೫೬ನೇ ಪುಟಕ್ಕೆ)

## ಅಭಿನಂದನೆಗಳು



ನವಕರ್ನಾಟಕ ಪ್ರಕಾಶನ ಪ್ರಕಟಿಸಿದ 'ಸ್ಟೀಫನ್ ಹಾಕಿಂಗ್. ಬದುಕು ಮತ್ತು ವಿಚಾರ' ಕೃತಿಗಾಗಿ ಲೇಖಕಿ ಪ್ರೊ|| ಬಿ. ಎಸ್. ಮಯೂರ ಅವರಿಗೆ ಉತ್ತರ ಕರ್ನಾಟಕ ಲೇಖಕಿಯರ ಸಂಘದ ವತಿಯಿಂದ ಕೊಡಲಾಗುವ ೨೦೧೨ನೇ ಸಾಲಿನ 'ಇನ್‌ಫೋಸಿಸ್ ಸಾಹಿತ್ಯ ಪ್ರಶಸ್ತಿ' ಹಾಗೂ ಬಿ. ರಂಗನಾಯಕಮ್ಮ ಕೃತಿಗೆ ಬಿ.ಎಂ.ಶ್ರೀ. ಪ್ರತಿಷ್ಠಾನ ನೀಡುವ 'ಸಾವಿತ್ರಮ್ಮ ದತ್ತಿ ಸಾಹಿತ್ಯ ಪ್ರಶಸ್ತಿ ಇವೆರಡೂ ಲಭಿಸಿವೆ. ಪ್ರಶಸ್ತಿ ಪುರಸ್ಕೃತರನ್ನು 'ನವಕರ್ನಾಟಕ' ಮತ್ತು 'ಹೊಸತು ಬಳಗ' ಸಂತೋಷದಿಂದ ಅಭಿನಂದಿಸುತ್ತದೆ.

# ಅದ್ಭುತ-ಬೊಂಬಾಟ್-ಸೂಪರ್-ಸಖತ್ ಇತ್ಯಾದಿ!

ಎಸ್. ಜಿ. ಶಿವಶಂಕರ್

ಅರೆ... ಈ ಎಲ್ಲ ಪದಗಳ ಅರ್ಥವೂ ಒಂದೇ ಎನಿಸುತ್ತಿದೆಯೆ...? ಖಂಡಿತಾ ಎಲ್ಲವೂ ಒಂದೇ ಅರ್ಥ ಕೊಡುವುದು ನಿಜ! ಆದರೆ ಮೊದಲ ಪದದಿಂದ ಕೊನೆಯ ಪದ ಪ್ರಯೋಗ ಚಾಲ್ತಿಗೆ ಬರುವವರೆಗೆ ಎಷ್ಟು ಸಮಯ ಹಿಡಿದಿದೆ, ಬದಲಾವಣೆ ಹೇಗೆ ಆಗಿದೆ ಎನ್ನುವುದನ್ನೇ ನಾನೀಗ ಕೊರೆಯಲು, ಕ್ಷಮಿಸಿ, ಹೇಳಲು ಹೊರಟಿರುವುದು.

ನಾವು ಮೆಚ್ಚಿಕೊಂಡ, ಬರೀ ಮೆಚ್ಚಿಕೊಳ್ಳುವುದಷ್ಟೇ ಅಲ್ಲ ಅದನ್ನೂ ಮೀರಿದ ರಸಾನುಭವವನ್ನು ನೀಡಿದ ಯಾವುದೇ ವಸ್ತು, ವಿಷಯ, ಸಂಗೀತ, ಸಿನಿಮಾ, ಪ್ರಕೃತಿ ಇಂಥವನ್ನೆಲ್ಲಾ ವರ್ಣಿಸಲು ಮೇಲಿನ ಪದಗಳನ್ನು ಉಪಯೋಗಿಸುತ್ತೇವೆ. ಇದರಲ್ಲೇನು ವಿಶೇಷ ಎನ್ನುವಿರೇನು...?

ಸರಿ ಸುಮಾರು ಸಾವಿರದ ಒಂಭೈನೂರ ಅರವತ್ತೆಂಟರ ಸಮಯದಲ್ಲಿ ನಾನು ಕಾಲೇಜು ಮೆಟ್ಟಿಲು ತುಳಿದಿದ್ದೆ, ಬರೀ ತುಳಿದಿದ್ದೆ, ಓದಲಿಲ್ಲವೆ ಎಂಬ ಅನುಮಾನ ನಿಮಗೆ ಬಂದಿಲ್ಲ ಎಂದು ನಂಬಿ ಮುಂದುವರಿಯುವೆ. ಆಗ ನಾನು ಮತ್ತು ನನ್ನ ಗೆಳೆಯರು ತಿಂಗಳಿಗೊಂದೋ ಇಲ್ಲಾ ಎರಡು ತಿಂಗಳಿಗೊಂದೋ ಸಿನಿಮಾ ನೋಡುತ್ತಿದ್ದೆವು. ಅದು ಕುಮಾರರ ಕಾಲ. ಹಿಂದಿಯಲ್ಲಿ ದಿಲೀಪ್ ಕುಮಾರ್, ರಾಜೇಂದ್ರ ಕುಮಾರ್, ಪ್ರದೀಪ್ ಕುಮಾರ್, ರಾಜಕಪೂರ ಇವರು ರಾರಾಜಿಸುತ್ತಿದ್ದ ಕಾಲ. ನಟಿಯರು ಸಾಧನಾ, ವೈಜಯಂತಿಮಾಲಾ, ಪದ್ಮಿನಿ, ಮೀನಾಕುಮಾರಿ ಮುಂತಾದವರು ಬೆಳ್ಳಿತೆರೆಯ ನಕ್ಷತ್ರಗಳಾಗಿ ಮಿಂಚುತ್ತಿದ್ದರು. ಕನ್ನಡದಲ್ಲಿ ರಾಜಕುಮಾರ್, ಕಲ್ಯಾಣ್ ಕುಮಾರ್, ಉದಯ ಕುಮಾರ್, ಅರುಣ್ ಕುಮಾರ್ – ಮುಂತಾದವರು ನಟಿಸುತ್ತಿದ್ದರು. ಸಿನಿಮಾ ತುಂಬ ಚೆನ್ನಾಗಿದ್ದಾಗ ನಾವು ''ಅದ್ಭುತವಾಗಿತ್ತು! ಅದ್ಭುತವಾದ ಅಭಿನಯ'' ಎಂದೆಲ್ಲಾ ವರ್ಣಿಸುತ್ತಿದ್ದೆವು. ಆ ಕಾಲದಲ್ಲಿ ಇಂದು ಮನೆಮನೆಯಲ್ಲಿ ವಿರಾಜಮಾನವಾಗಿರುವ ಟಿವಿ ಎಂಬ ಮೂರ್ಖರ ಪೆಟ್ಟಿಗೆ ಇರಲಿಲ್ಲ! ಎಲ್ಲರ ಮನೆಯಲ್ಲೂ ರೇಡಿಯೋಗಳು ಇರುತ್ತಿದ್ದವು. ಕಾಲಕಾಲಕ್ಕೆ ನ್ಯೂಸ್, ಕೆಲವೊಮ್ಮೆ ಚಲನಚಿತ್ರ ಗೀತೆಗಳು, ಅಪರೂಪಕ್ಕೆ ಸಿನಿಮಾದ ಸೌಂಡ್‌ಟ್ರ್ಯಾಕ್ ಎಂಬ ಕಾರ್ಯಕ್ರಮಗಳು ಬಿತ್ತರವಾಗುತ್ತಿದ್ದವು. ಸೌಂಡ್ ಟ್ರ್ಯಾಕ್ ಎಂದರೆ ಈಗಿನ ಕಾಲದವರಿಗೆ ಅರ್ಥವಾಗದು. ಇಡೀ ಸಿನಿಮಾವನ್ನು ಧ್ವನಿಯ ಮೂಲಕ ಬಿತ್ತರಿಸುವುದನ್ನೇ ಸೌಂಡ್‌ಟ್ರ್ಯಾಕ್ ಎಂದು ಕರೆಯುತ್ತಿದ್ದರು. ಅದನ್ನು ಕೇಳಲು ಮನೆ ಮಂದಿಯೆಲ್ಲಾ ಕಾತರರಾಗಿ ಕೇಳುತ್ತಿದ್ದ ಕಾಲವೊಂದಿತ್ತು. ಅದನ್ನೂ ನಾವು 'ಅದ್ಭುತವಾಗಿತ್ತು' ಎಂಬ ಪದಪ್ರಯೋಗದೊಂದಿಗೇ ವರ್ಣಿಸುತ್ತಿದ್ದೆವು. ರೇಡಿಯೋ ಸಿಲೋನ್ ಎಂಬ ಶ್ರೀಲಂಕಾದ ಸ್ಟೇಷನ್ನಿನಲ್ಲಿ 'ಬಿನಾಕಾ ಗೀತ್ ಮಾಲಾ' ಎಂಬ ಕಾರ್ಯಕ್ರಮ ಶನಿವಾರ ಬಿತ್ತರವಾಗುತ್ತಿದ್ದ ನೆನಪು. ಅದರಲ್ಲಿ ಅಮೀನ್ ಸಯಾನಿ ಎಂಬ ಮಾಂತ್ರಿಕ ಮಾತುಗಾರ ಕೇಳುಗರ ಕೋರಿಕೆಯ ಮೇರೆಗೆ ಹಿಂದಿ ಸಿನಿಮಾ ಹಾಡುಗಳನ್ನು ಬಿತ್ತರಿಸುತ್ತಿದ್ದ. ಆ ಕಾರ್ಯಕ್ರಮ ಬಹುತೇಕ ಎಲ್ಲರ ಮೆಚ್ಚಿನ ಕಾರ್ಯಕ್ರಮವಾಗಿತ್ತು. ಅದನ್ನು ಕೇಳಿ ಆನಂದಿಸುತ್ತಿದ್ದೆವು, ಆ ಕಾಲ, ಅಂಥ ಕಾರ್ಯಕ್ರಮಗಳು ನಿಜಕ್ಕೂ ಅದ್ಭುತವೇ ಆಗಿದ್ದವು. ಈ ಪದ ಅಚ್ಚ ಕನ್ನಡದ್ದು ಎನ್ನುವುದನ್ನು ತಾವುಗಳು ಗಮನಿಸುವಿರೆಂದು ತಿಳಿದಿದ್ದೇನೆ.

ನಾನು ಪ್ರೀ-ಯೂನಿವರ್ಸಿಟಿ ಮುಗಿಸಿ, ಇಂಜಿನಿಯರಿಂಗ್ ಸೇರಿ ಅದನ್ನು ಮುಗಿಸುವ ಹೊತ್ತಿಗೆ ಕಾಲ ಸುಮಾರು ಸಾವಿರದ ಒಂಭೈನೂರಾ ಎಪ್ಪತ್ನಾಲ್ಕು. ಆ ವೇಳೆಗಾಗಲೇ ಜನಸಂಖ್ಯೆ ಹೆಚ್ಚಾಗಿತ್ತು. ಆಗ 'ಅದ್ಭುತ' ಎಂಬ ಪದವನ್ನು ಕೊಚ್ಚಿಹಾಕಿ ಅದರ ಜಾಗವನ್ನು 'ಬೊಂಬಾಟ್' ಎನ್ನುವ ಪದ ಆಕ್ರಮಿಸಿಬಿಟ್ಟಿತ್ತು! ಇದರ ಉಗಮ ಹೇಗಾಯಿತೋ ತಿಳಿಯದು. ಇದು ಅಪ್ಪಟ ಕನ್ನಡ ಪದವಂತೂ ಅಲ್ಲ! ನನಗಿಂತ ಕಿರಿಯರು ಈ ಪದವನ್ನು ಉಪಯೋಗಿಸುವುದು ಹೆಚ್ಚಾಗಿತ್ತು. ನಾನು ಈ ಪದವನ್ನು ಉಪಯೋಗಿಸಿದ್ದು ಕಡಿಮೆಯೇ. ಅದೇಕೋ ಈ ಪದದ ಬಗೆಗೆ ನನಗೆ ಅಷ್ಟೇನೂ ಪ್ರೀತಿ ಉಕ್ಕಲಿಲ್ಲ, ನನ್ನ ಜೊತೆಯವರು ಕೂಡ ಈ ಮಾತು ಉಪಯೋಗಿಸಿದ್ದು ಕಡಿಮೆಯೇ...! ಕಡಿಮೆಯೇನು... ಇಲ್ಲವೇ ಇಲ್ಲ! ಕ್ರಮೇಣ ಈ ಪದ ನಮಗೆ ತಿಳಿಯದಂತೆ ನಮ್ಮ ತಲೆಯನ್ನೂ ಹೊಕ್ಕು ನಾವೂ ಅದೇ ಪದವನ್ನು ಒಪ್ಪಿಕೊಂಡಿದ್ದೆವು. ನಾವು ಎಂದರೆ ನನ್ನ ತಲೆಮಾರಿನ ಜನ. ಎಂದರೆ ಸರಿ ಸುಮಾರು ೧೯೫೦ರ ಆಚೀಚೆ ಹುಟ್ಟಿದವರು. ಈ ಬೊಂಬಾಟ್ ಪದದ ಉಗಮ ತಿಳಿಯದು. ಬಹುಶಃ ಇದು ಹಿಂದಿ ಮೂಲದ್ದೋ ಇಲ್ಲಾ ಮರಾಠಿ ಮೂಲದ್ದೋ ಇರಬಹುದು. ನಾನೇನೂ ಭಾಷಾ ಪಂಡಿತನಲ್ಲ – ಇದರ ಸಂಶೋಧನೆ ಮಾಡಲು. ಈ ಪದ ಪ್ರಯೋಗಕ್ಕೆ ಪ್ರೇರಣೆ ಕೆಲವು ಸಿನಿಮಾಗಳೂ ಇರಬಹುದು. ಕೆಲವು ಹಾಸ್ಯ ನಟರು ಇದಕ್ಕೆ ಕಾರಣ ಇದ್ದರೂ ಇರಬಹುದು. ಆ ಸಿನಿಮಾಗಳು ಯಾವ ಭಾಷೆಯದಾದರೂ ಇದ್ದಿರಬಹುದು. ಅಂದಿನ ದಿನಗಳಲ್ಲಿ ಕಾಲೇಜಿನಲ್ಲಿ ಕಲಿಯುತ್ತಿದ್ದ ನಾವೆಲ್ಲರೂ, ಎಂದರೆ ಹಿಂದಿ ಸಿನಿಮಾ ನೋಡುವವರು ಸ್ವಲ್ಪ ಸ್ಟ್ಯಾಂಡರ್ಡ್ ಜನರು. ಇಂಗ್ಲಿಷ್ ಸಿನಿಮಾ ನೋಡುವವರು ಇನ್ನೂ ಹೆಚ್ಚಿನ ಸ್ಟ್ಯಾಂಡರ್ಡ್ ಜನರೆಂದು ತಿಳಿದಿದ್ದೆವು. ಆ ಕಾರಣಕ್ಕಾಗಿಯೇ ಅರ್ಥವಾಗದಿದ್ದರೂ ಹಿಂದಿ ಮತ್ತು ಇಂಗ್ಲಿಷ್ ಸಿನಿಮಾಕ್ಕೆ ಹೋಗುತ್ತಿದ್ದೆವು. ಹಿಂದಿ ಬಹುತೇಕ ಅರ್ಥವಾಗುತ್ತಿದ್ದರೂ ಇಂಗ್ಲಿಷ್ ಮಾತ್ರ ಚೂರೂ ಅರ್ಥವಾಗುತ್ತಿರಲಿಲ್ಲ. ಆದರೂ ನೋಡುವುದನ್ನು ಬಿಡುತ್ತಿರಲಿಲ್ಲ, ಗುಂಪಿನಲ್ಲಿ ನಾವೆಲ್ಲರೂ ನಮ್ಮ ಇಂಗ್ಲಿಷ್ ಅಜ್ಞಾನವನ್ನು ಮುಚ್ಚಿಟ್ಟುಕೊಳ್ಳಲು ಸಿನಿಮಾವನ್ನು ಹೋಗುತ್ತಿದ್ದೆವು. ಸಿನಿಮಾ ನಟ-ನಟಿಯರು ಉಪಯೋಗಿಸಿದ ಪದಗಳನ್ನು ಉಪಯೋಗಿಸುತ್ತಿದ್ದ ಕಾಲ ಅದು. ಬೊಂಬಾಟ್ ಪದಪ್ರಯೋಗ ನಿಂತು 'ಸೂಪರ್' ಪದ ಯಾವಾಗ ಶುರುವಾಯಿತು ಎಂಬುದರ ಕಾಲಘಟ್ಟವನ್ನು ನಾನು ನೀಡಲಾರೆ. ಈ ಪದಗಳ ಸ್ಥಿತ್ಯಂತರದ ಕಾಲವನ್ನು ಗುರುತಿಸುವುದು ಕೂಡ ಕಷ್ಟವೇ. ಸೂಪರ್ ಎನ್ನುವುದು ತುಂಬ ಇತ್ತೀಚಿನದು ಎಂದು ನನ್ನ ಗುಮಾನಿ. ಕಾರಣ ಈ ಸಾಲು ಬರೆಯುವಾಗ ನನ್ನ ಮನಸ್ಸಿನಲ್ಲಿ ಸಿನಿಮಾ ನಟರುಗಳಾದ ಉಪೇಂದ್ರ ಮತ್ತು ಜಗ್ಗೇಶ್ ಇದ್ದಾರೆ. ಬಹುಶಃ ಈ ಪದ ಜನಪ್ರಿಯವಾಗಲು ಇವರೇ ಕಾರಣವೇನೋ..? ಇವೆಲ್ಲಾ ಕೇವಲ ನನ್ನ ಊಹಾಪೋಹಗಳೇ ಹೊರತು ನನ್ನ ಲೇಖನವನ್ನೇ ಅಧಿಕೃತ ಎಂದು ಉದಹರಿಸುವ ಪ್ರಯತ್ನಕ್ಕೆ ತೊಡಗದಿರಿ.

'ಬೊಂಬಾಟ್' ಪದಕ್ಕೆ ಪರ್ಯಾಯವಾಗಿ 'ಸೂಪರ್' ಪದ ಬಳಕೆಗೆ ಬಂತು! ಇದು ನೇರವಾಗಿ ಇಂಗ್ಲಿಷಿನ ಪದ ಎಂದು ಘಂಟಾಘೋಷವಾಗಿ ಹೇಳಬಲ್ಲೆ! ಸೂಪರ್ ಎಂಬ ಪದಕ್ಕೆ ಅರ್ಥ 'ಅತೀತ', 'ಎಲ್ಲವನ್ನೂ ಮೀರಿದ' ಎನ್ನುವುದು. ಹಾಗಾಗಿ ಈ ಪದ ಮತ್ತು ಪದ ಪ್ರಯೋಗ ಅರ್ಥವತ್ತಾಗಿಯೇ ಕಾಣುತ್ತದೆ. ಹೆಚ್ಚು ಯುವಜನರು ಮತ್ತು ಪಡ್ಡೆ ಹುಡುಗರೇ ಈ ಪದದ ವಾರಸುದಾರರು. ಇವರು ಕನ್ನಡ ಮಾತಿನ ಜೊತೆಗೆ ಈ ಸೂಪರ್ ಪದವನ್ನು ಹೆಣೆಯುತ್ತಾರೆ. ಉದಾಹರಣೆಗೆ, ಈ ಮಾತುಗಳನ್ನು ಗಮನಿಸಿ.

*'ಬೊಂಬಾಟ್' ಪದಕ್ಕೆ ಪರ್ಯಾಯವಾಗಿ 'ಸೂಪರ್' ಪದ ಬಳಕೆಗೆ ಬಂತು! ಇದು ನೇರವಾಗಿ ಇಂಗ್ಲಿಷಿನ ಪದ ಎಂದು ಘಂಟಾಘೋಷವಾಗಿ ಹೇಳಬಲ್ಲೆ! ಸೂಪರ್ ಎಂಬ ಪದಕ್ಕೆ ಅರ್ಥ 'ಅತೀತ', 'ಎಲ್ಲವನ್ನೂ ಮೀರಿದ' ಎನ್ನುವುದು. ಹಾಗಾಗಿ ಈ ಪದ ಮತ್ತು ಪದ ಪ್ರಯೋಗ ಅರ್ಥವತ್ತಾಗಿಯೇ ಕಾಣುತ್ತದೆ. ಹೆಚ್ಚು ಯುವಜನರು ಮತ್ತು ಪಡ್ಡೆ ಹುಡುಗರೇ ಈ ಪದದ ವಾರಸುದಾರರು. ಇವರು ಕನ್ನಡ ಮಾತಿನ ಜೊತೆಗೆ ಈ ಸೂಪರ್ ಪದವನ್ನು ಹೆಣೆಯುತ್ತಾರೆ.*

''ಹೇಗಿತ್ತು ಸಿನಿಮಾ..?''

''ಸೂಪರಾಗಿತ್ತು!''

ನೋಡಿ, ಇಲ್ಲಿ 'ಸೂಪರ್' ಎನ್ನುವ ಇಂಗ್ಲಿಷ್ ಪದವನ್ನು 'ಆಗಿತ್ತು' ಎನ್ನುವ ಕನ್ನಡ ಪದದ ಜೊತೆ ಸೇರಿಸಿ 'ಸೂಪರಾಗಿತ್ತು' ಎನ್ನುವ ಕಂಗ್ಲಿಷ್ ಪದವನ್ನು ಸೃಷ್ಟಿ ಮಾಡಿದ್ದಾರೆ - ಸೃಜನಶೀಲರು !

ಸಿನಿಮಾ ವರ್ಣನೆಯ ಜೊತೆಗೆ ಈ ಪದ ಎಲ್ಲವನ್ನೂ ವರ್ಣಿಸುವ ಗುಣವಿಶೇಷಣವಾಗಿದ್ದು ಅಚ್ಚರಿಯೇನಲ್ಲ. ಉದಾಹರಣೆಗೆ, ಹೋಟಲಿನ ತಿನಿಸೊಂದನ್ನು 'ಸೂಪರಾಗಿತ್ತು' ಎನ್ನುವುದು. ಇತ್ತೀಚೆಗಂತೂ ಎಲ್ಲ ಟಿವಿ ಚಾನೆಲ್‌ನವರೂ ಸಿನಿಮಾ ಹೊಸದಾಗಿ ಬಿಡುಗಡೆಯಾದಾಗ ಪ್ರಥಮ ಪ್ರದರ್ಶನ ನೋಡಿ ಬಂದ ಪ್ರೇಕ್ಷಕರನ್ನು ಸಿನಿಮಾ ಹೇಗಿತ್ತು? ಎಂದು ಕೇಳಿದರೆ ಅವರೆಲ್ಲಾ ಒಂದೇ ಪದದಲ್ಲಿ ಹೇಳುವುದು ಸಾಮಾನ್ಯವಾಗಿ ಆ ಒಂದು ಪದವೇ ಅದು 'ಸೂಪರ್'.

'ಸೂಪರ್' ಪದದ ನಂತರ... ಅಲ್ಲಲ್ಲ... ಅದರ ಜೊತೆಗೇ ಇನ್ನೊಂದು ಪದವೂ ಈಗ ಚಲಾವಣೆಯಲ್ಲಿದೆ. ಅದೇ 'ಸಖತ್'! ಇದು ಕೇಳಲು ಅಷ್ಟೇನೂ ಚೆನ್ನಾಗಿಲ್ಲ ಎಂದು ನನ್ನ ವೈಯಕ್ತಿಕ ಅಭಿಪ್ರಾಯ! ಕಾರಣ..? ಅದೇಕೋ ಈ ಪದ ಶಿಷ್ಟ ಪದವಲ್ಲ ಅನ್ನಿಸುತ್ತಿದೆ ನನಗೆ! ನಿಜ ಹೇಳಬೇಕೆಂದರೆ, ಇದನ್ನು ಗಲೀಜು ಪದ ಎಂದು ನಾನು ಕರೆಯಬಯಸುತ್ತೇನೆ. ನಿಮ್ಮ ವಿಷಯ ನನಗೆ ಗೊತ್ತಿಲ್ಲ. ಈ ಪದ ಇವತ್ತಿನ ಪಡ್ಡೆ ಹುಡುಗರು ಮತ್ತು ಎಳೆಯರು ಹೆಚ್ಚಿಗೆ ಉಪಯೋಗಿಸುತ್ತಿದ್ದಾರೆ! ಈವರೆಗೆ ನಾವು ಕೇಳಿರುವ ಎಲ್ಲ ಪದಗಳಿಗಿಂತ ಇದು ಸ್ವಲ್ಪ ಕೆಟ್ಟದಾಗಿ ಕೇಳಿಸುತ್ತದೆ, ಕೆಳಮಟ್ಟದ ಪದ ಎನಿಸುತ್ತದೆ!

ಕನ್ನಡ ಸಿನಿಮಾ ಸಾಹಿತ್ಯ ಇತ್ತೀಚೆಗೆ ಕುಲಗೆಡುತ್ತಿದೆ ಎಂದು ಅನೇಕರು ಅಭಿಪ್ರಾಯಪಡುತ್ತಾರೆ. ಈ ಸಮಯದಲ್ಲೇ 'ಸಖತ್ ಹಾಟ್ ಮಗಾ!' ಎಂಬ ಚರಣ ಹಾಡೊಂದರಲ್ಲಿ ಕೇಳಿದ ನೆನಪು. ಇಂತಹವನ್ನು ಪತ್ರಿಕೆಗಳು ಸಹ ವಾಚಾಮಗೋಚರವಾಗಿ ಹೀಗಳೆದದ್ದು ಎಲ್ಲರೂ ತಿಳಿದಿರುವ ಸಂಗತಿ! ಇತ್ತೀಚಿನ ಸಿನಿಮಾ ಒಂದರಲ್ಲಿ 'ಹೊಡಿ ಮಗ ಹೊಡಿ ಮಗ ಬಿಡಬೇಡ ಅವನ್ನ' ಎಂಬುದು ಕೂಡ ಹಾಡಾಗಿದ್ದು ನಿಮಗೆ ತಿಳಿದಿರಬಹುದು. ಇಂತಹ ಬೆಳವಣಿಗೆಗಳ ಕಾಲದಲ್ಲಿ ಬಂದಿರುವುದೇ ಈ ಹೊಸ ಪದ 'ಸಖತ್'! ಇದರ ಮೂಲ ದೇವರಾಣೆ ನನಗೆ ತಿಳಿದಿಲ್ಲ! ಆಸಕ್ತಿಯಿದ್ದರೆ ತಾವುಗಳು ಸಂಶೋಧಿಸಬಹುದು. ಅಂತಹ ಸಂಶೋಧನೆಯ ಫಲಿತಾಂಶದಲ್ಲಿಯೂ ನನಗೆ ಎಳ್ಳಷ್ಟೂ ಆಸಕ್ತಿಯಿಲ್ಲ ಎಂದು ನಮ್ರತೆಯಿಂದ ತಿಳಿಸುತ್ತಿದ್ದೇನೆ.

ಈ ಸಖತ್ ಎನ್ನುವ ಪದ ಇಂತಹದ್ದಕ್ಕೇ ಉಪಯೋಗಿಸಬೇಕೆಂದೇನೂ ಇಲ್ಲ! ಹೆಣ್ಣಿನ ಸೌಂದರ್ಯ ವರ್ಣಿಸಲು ಈ 'ಸಖತ್ತಾಗಿದ್ದಾಳೆ' ಎಂದು ಹೇಳುತ್ತಾರೆ! ಹೋಟೆಲೊಂದರ ತಿನಿಸು ವರ್ಣಿಸಲು 'ಸಖತ್ತಾಗಿತ್ತು'! ಯಾರನ್ನೋ ಥಳಿಸಲು 'ಸಖತ್ತಾಗಿ ತದುಕಿದೆ' ಎಂದೂ, ಇಂಪಾದ ಹಾಡನ್ನು ಕೇಳಿದಾಗ 'ಸಖತ್ತಾಗಿದೆ' ಎಂದೂ, 'ಕೊನೆಗೆ ಸಾಹಿತ್ಯ ಕೃತಿಯೊಂದನ್ನೂ 'ಸಖತ್ತಾಗಿದೆ' ಎಂದೂ ವರ್ಣಿಸುವುದು ಇಂದಿನವರ ವರಸೆ! ಈ ಪದ ಕೇಳಿದಾಗ ಕಿವಿಗೂ ಅಷ್ಟೇನೂ ಹಿತವಾಗಿರುವುದಿಲ್ಲ! ಬಹುಶಃ ನಿಮಗೂ ಹೀಗನ್ನಿಸಬಹುದು. ಆದುದರಿಂದಲೇ ಈ ಪದದ ಬಗೆಗೆ ನನಗೆ ಹೆಚ್ಚಿನ ಗೌರವವಿಲ್ಲ!

ಅದ್ಭುತ, ಬೊಂಬಾಟ್, ಸೂಪರ್ ಮತ್ತು ಸಖತ್ – ಈ ಪದಗಳ ಬೆಳವಣಿಗೆ ಆದುದರಿಂದಲೇ ನನಗೆ ಈ ಪದದ ಬಗೆಗೆ ಹೆಚ್ಚಿನ ಗೌರವ ಇಲ್ಲ. ಹೇಳಿರುವುದನ್ನು ಓದಿದ ನಿಮಗೆ ಮೊದಲಿನ ಪದಗಳು ಈಗ ಚಲಾವಣೆಯಲ್ಲಿಲ್ಲವೇನೋ ಎಂಬ ಅನುಮಾನ ಬರಬಹುದು. ಹಾಗಾಗಿಲ್ಲ ಎಂದು ಸ್ಪಷ್ಟಪಡಿಸಲು ಇಚ್ಛೆಸುತ್ತೇನೆ. ಈ ಎಲ್ಲ ಪದಗಳಲ್ಲಿ ಕೆಲವು ಬಳಕೆಯಲ್ಲಿ ಕಡಿಮೆಯಾಗಿರಬಹುದೇ ಹೊರತು ಅವು ನಶಿಸಿಲ್ಲ! ನಾನು ವಿಶ್ಲೇಷಿಸಿದ ಎಲ್ಲ ಪದಗಳೂ ಚಲಾವಣೆಯಲ್ಲಿರಬಹುದು. ಅವು ಕೆಲವೊಂದು ವಯೋಮಾನದವರಲ್ಲಿ, ಕೆಲವೊಂದು ಪ್ರದೇಶಗಳಲ್ಲಿ ಪ್ರಚಲಿತವಾಗಿವೆ ಎನ್ನುವುದು ನನ್ನ ಅಂಬೋಣ!

**ಎಸ್. ಜಿ. ಶಿವಶಂಕರ್**
ನಂ. ೫೧೭೭, 'ಶಿವಲತ', ಹೆಚ್.ಟಿ. ಜೋಡಿ ರಸ್ತೆ
ವಿಜಯನಗರ ೨ನೇ ಹಂತ, ಮೈಸೂರು - ೫೭೦ ೦೧೭

*(೫೪ನೇ ಪುಟದಿಂದ)*

ಮತ್ತು ಕಾಶ್ಮೀರಿ ಪಂಡಿತರು ಪರಸ್ಪರ ಅನುಮಾನಿಸುವ ಸನ್ನಿವೇಶಗಳ ಸೃಷ್ಟಿಗೆ ಕಾರಣವಾದ ಅಂಶಗಳನ್ನು ಲೇಖಕರು ವಿಶದಪಡಿಸಿದ್ದಾರೆ.

ವಿಶ್ವಸಂಸ್ಥೆಯು ೧೯೪೮ರಲ್ಲಿ ಒಪ್ಪಿಕೊಂಡಿರುವ ಒಂದು ನಿರ್ಣಯದ ಪ್ರಕಾರ ಕಾಶ್ಮೀರವು ಭಾರತದ ಒಂದು ಭಾಗ. ಪಾಕ್ ಬಲವಂತದಿಂದ ಕಾಶ್ಮೀರದ ಕೆಲವು ಭಾಗಗಳನ್ನು ಆಕ್ರಮಿಸಿಕೊಂಡಿದೆ. ಅದನ್ನು 'ಪಾಕ್ ಆಕ್ರಮಿತ ಕಾಶ್ಮೀರ' ಎಂದೇ ಗುರುತಿಸಲಾಗುತ್ತಿದೆ. ಪಾಕಿಸ್ತಾನದಿಂದ ಪೂರ್ವ ಪಾಕಿಸ್ತಾನ ಬೇರ್ಪಟ್ಟಾಗಿನಿಂದ ಪಾಕಿಸ್ತಾನದ ಸಿಟ್ಟು ಮತ್ತಷ್ಟು ಹೆಚ್ಚಿದೆ; ಜೊತೆಗೆ ಮೊಂಡುತನವೂ ಸಹ. ೧೯೭೨ರ ಸಿಮ್ಲಾ ದ್ವಿಪಕ್ಷೀಯ ಒಪ್ಪಂದವೂ ಸಹ ವಿಫಲವಾಗಿ ಭಾರತ ಮತ್ತು ಪಾಕಿಸ್ತಾನಗಳ ನಡುವಿನ ಬಾಂಧವ್ಯದಲ್ಲಿ ಸುಧಾರಣೆಯಾಗಿಲ್ಲ. ಪಾಕಿಸ್ತಾನವು ತನ್ನ ಆಂತರಿಕ ಸಮಸ್ಯೆಗಳನ್ನು ಮುಚ್ಚಿಹಾಕುವ ಸಲುವಾಗಿಯಾದರೂ, ಜನತೆಯ ಗಮನವನ್ನು ಬೇರೆಡೆಗೆ ತಿರುಗಿಸಬೇಕಾದ ಸಂದರ್ಭದಲ್ಲಿ ಭಾರತದೊಂದಿಗಿನ ವಿರಸವನ್ನು ದೊಡ್ಡದು ಮಾಡಿ ಸಂಘರ್ಷಕ್ಕೆ ಅಣಿಮಾಡಿಕೊಳ್ಳುತ್ತದೆ. ಅಂತಹ ಸಂದರ್ಭದಲ್ಲೇ ಕಾರ್ಗಿಲ್ ಯುದ್ಧ ಘಟಿಸಿದೆ.

ಆರೋಪ, ಪ್ರತ್ಯಾರೋಪಗಳಲ್ಲಿ ನಿರತವಾದ ಎರಡೂ ದೇಶಗಳ ರಾಜಕಾರಣಿಗಳು ಸಾಮಾನ್ಯ ಪ್ರಜೆಗಳ ಬದುಕು, ಬವಣೆಗಳ ಬಗ್ಗೆ ನಿಶ್ಚಿಂತರಾಗಿರುವಂತೆ ತೋರುತ್ತದೆ. ಭಯೋತ್ಪಾದನೆಯ ಉಗಮಸ್ಥಾನವೇ ಪಾಕಿಸ್ತಾನ ಎಂಬ ಭಾವನೆ ಇತ್ತೀಚಿನ ದಿನಗಳಲ್ಲಿ ದಟ್ಟವಾಗಿ ವ್ಯಕ್ತವಾಗುತ್ತಿದೆ. ಕೆಲವು ವರ್ಷಗಳಿಂದೀಚೆಗೆ ಭಾರತವೂ ಭಯೋತ್ಪಾದನೆಗೆ ಗುರಿಯಾಗುತ್ತಿದೆ. ಭಯೋತ್ಪಾದಕರಿಗೆ ಒಂದು ನಿಶ್ಚಿತ ಧರ್ಮ ಇರುವುದಿಲ್ಲ. ಮುಸಲ್ಮಾನ್ ಭಯೋತ್ಪಾದಕರಿರುವಂತೆಯೇ ಹಿಂದೂ ಭಯೋತ್ಪಾದಕರೂ ಇರುತ್ತಾರೆ ಎಂಬ ಅಂಶವನ್ನು ಲೇಖಕರು ಹಲವು ಮಾಹಿತಿಗಳ ಮೂಲಕ ಸ್ಪಷ್ಟಪಡಿಸಿದ್ದಾರೆ. ಎರಡೂ ದೇಶಗಳ ಜನರಿಗೆ ಈಗ ಬೇಕಾಗಿರುವುದು ಶಾಂತಿಯೇ ಹೊರತು ಹಿಂಸೆಯಲ್ಲ ಎಂಬ ಸರಳ ಸತ್ಯವನ್ನು ಎರಡೂ ದೇಶಗಳ ಮತ್ತು ಸಂಬಂಧಿತ ಇತರ ದೇಶಗಳ ನಾಯಕರು ತಿಳಿಯಬೇಕಾಗಿದೆ.

''ಅಮೆರಿಕಾದ ಸಂಶೋಧನಾ ಸಂಸ್ಥೆಯೊಂದು ಭಾರತ-ಪಾಕ್ ನಡುವಿನ ಸಂಬಂಧಗಳನ್ನು ಅಧ್ಯಯನ ಮಾಡಿ ಸಲ್ಲಿಸಿದ ವರದಿ ತಿಳಿಸುವಂತೆ, ಕಾಶ್ಮೀರ ಸಮಸ್ಯೆಯನ್ನು ಬಗೆಹರಿಸಿ, ಶಾಂತಿಯುತ ಜೀವನ ನಡೆಸುವುದು ಪಾಕಿಸ್ತಾನಕ್ಕೆ ಬೇಡವಾಗಿದೆ. ಪಾಕ್‌ನಲ್ಲಿ ಆಂತರಿಕ ಅಸಂತೋಷ ಉಲ್ಬಣಗೊಂಡಾಗ ಜನರ ಗಮನ ಬೇರೆಡೆಗೆ ತಿರುಗಿಸುವುದಾಗಿದೆ'' ಮೇಲಿನ ಹೇಳಿಕೆಯನ್ನು ಸಮರ್ಥಿಸಲು ಇನ್ನೂ ಆಧಾರಗಳು ಬೇಕಾಗುತ್ತವೆ. ಅಕಸ್ಮಾತ್ ಅಭಿಪ್ರಾಯವನ್ನು ಸಮರ್ಥಿಸುವುದಾದರೆ, ಪಾಕಿಸ್ತಾನಕ್ಕೆ ಸಮಸ್ಯೆ ನಿವಾರಣೆ ಆಗುವುದು ಬೇಡವಾಗಿದೆ ಎಂದಾದರೆ, ಎರಡೂ ದೇಶಗಳ ಒಳಗಿರುವ ಜನರಿಗಿಂತ ಹೆಚ್ಚಾಗಿ ಗಡಿ ಭಾಗದಲ್ಲಿರುವ ಜನರು ಅನುಭವಿಸಬೇಕಾದ ತೊಂದರೆಗಳನ್ನು ಊಹಿಸಿಕೊಳ್ಳುವುದೂ ಕಷ್ಟವಾಗುತ್ತದೆ.

ಈವರೆಗಿನ ಆಗುಹೋಗುಗಳನ್ನು ಗಮನಿಸಿದ ಯಾರಿಗೇ ಆದರೂ ಕಾಶ್ಮೀರ ಸಮಸ್ಯೆಯು ಮಾತುಕತೆಗಳ ಮೂಲಕ ಪರಿಹಾರವಾಗುವಷ್ಟು ಸರಳವಲ್ಲ ಎಂಬ ಅಭಿಪ್ರಾಯವನ್ನೂ ಲೇಖಕರು ದಾಖಲಿಸಿದ್ದಾರೆ. ''ರಾಷ್ಟ್ರೀಯ ಅಸ್ಮಿತೆಗೆ, ಜನತೆಯ ಭಾವನೆಗಳಿಗೆ ಧಕ್ಕೆ ತಂದು ಕಾಶ್ಮೀರವನ್ನು ದುರ್ಬಲ ಮಾಡಿದ್ದು ನಮ್ಮನ್ನೇ ಆಳಿದ ಸರ್ಕಾರಗಳು. ಇಂದಿಗೂ ಕಾಶ್ಮೀರದಲ್ಲಿ ಇತರ ರಾಜ್ಯಗಳಂತೆ ಜನಜೀವನ ಸಾಮಾನ್ಯವಾಗಿಲ್ಲ'' ಎಂಬ ಲೇಖಕರ ಅಭಿಪ್ರಾಯವನ್ನು ತಳ್ಳಿಹಾಕಲು ಸಾಧ್ಯವಿಲ್ಲ. ಕಾಶ್ಮೀರ ಸಮಸ್ಯೆ ಎಂಬ ರೋಗಕ್ಕೆ ಸಂಬಂಧವೇ ಇಲ್ಲದ ಚಿಕಿತ್ಸೆಯನ್ನು ತೋರಿಕೆಗೆ ನೀಡಲಾಗುತ್ತದೆ. ಈ ಮಾತನ್ನು ದಾಖಲಿಸಲು ಲೇಖಕರು ಸಾಕಷ್ಟು ಅಧ್ಯಯನ ಮಾಡಿರುವುದನ್ನು ಪ್ರತಿಯೊಂದು ಅಧ್ಯಾಯದ ಕೊನೆಯಲ್ಲಿ ಅವರು ನೀಡಿರುವ ಅಡಿಟಿಪ್ಪಣಿಗಳು ಸ್ಪಷ್ಟಪಡಿಸುತ್ತವೆ. ಬಾಲಗೋಪಾಲ್ ಕೆ., ಸ್ಕೊಫೀಲ್ಡ್, ಚೌಧರಿ, ರಾಮಸ್ವಾಮಿ, ಎಸ್.ಆರ್., ನಿತ್ಯಾನಂದಸ್ವಾಮಿ, ಮತ್ತಿನ್ನೂ ಅನೇಕರ ಅಭಿಪ್ರಾಯಗಳನ್ನು ಮತ್ತು ಹಲವು ಪತ್ರಿಕೆಗಳಲ್ಲಿ ಪ್ರಕಟವಾಗಿರುವ ವಿಶೇಷ ಲೇಖನಗಳನ್ನು ಆಧರಿಸಿ, ಕಾಶ್ಮೀರ ಸಮಸ್ಯೆಯನ್ನು ಪರಿಶೀಲಿಸಿರುವ ಲೇಖಕರ ಶ್ರಮವನ್ನು ಮೆಚ್ಚಬೇಕಾಗಿದೆ.

ಇಂತಹ ಅಧ್ಯಯನಯೋಗ್ಯ ಪುಸ್ತಕಗಳು ಪ್ರಕಟವಾಗುವಾಗ ಪಠ್ಯದ ಕರಡು ತಿದ್ದುವುದು ಅತ್ಯಂತ ಮುಖ್ಯ ಮತ್ತು ಅವಶ್ಯಕ. ಆ ನಿಟ್ಟಿನಲ್ಲಿ ಈ ಕೃತಿಯು ಸುಲಭ ಓದಿಗೆ ದಕ್ಕುವುದಿಲ್ಲ. ಈ ದೋಷದ ನಿವಾರಣೆಯಾಗಿದ್ದರೆ, ಲೇಖಕರ ಶ್ರಮ ಮತ್ತಷ್ಟು ಸಾರ್ಥಕವಾಗುತ್ತಿತ್ತು ಮತ್ತು ಎರಡು ದೇಶಗಳ ನೆಮ್ಮದಿಯನ್ನು ಕೆಡಿಸುತ್ತಿರುವ ಸಮಸ್ಯೆಯೊಂದನ್ನು ಎಲ್ಲ ಓದುಗರೂ ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತಿತ್ತು.

**ಡಾ|| ಎಚ್. ಎಸ್. ಗೋಪಾಲ ರಾವ್**
ನಂ. ೧೪೪, ಸ್ವಸ್ತಿಶ್ರೀ ಸ್ಕಂದ, ಐ.ವೈ.ಡಿ.ರಸ್ತೆ, ಅರಸಿನಕುಂಟೆ, ನೆಲಮಂಗಲ ತಾ||
ಬೆಂಗಳೂರು ಗ್ರಾಮಾಂತರ ಜಿಲ್ಲೆ ೫೬೨ ೧೨೩



# ಕೃಷಿ ವಿಜ್ಞಾನ ತಿರಸ್ಕರಿಸುವುದು ಕೃಷಿ ಬಿಕ್ಕಟ್ಟಿಗೆ ಪರಿಹಾರವಲ್ಲ

**ಪ್ರದೀಪ್ ಬೆಳಗಲ್, ಗುರುಸಿದ್ಧಮೂರ್ತಿ ಕೆ. ಎಂ.**

ಕೃಷಿ ಬಿಕ್ಕಟ್ಟು ಹಲವರ ಗಮನ ಸೆಳೆಯುತ್ತಿದೆ. ಹೀಗಾಗಿ ಕೃಷಿ ಬಿಕ್ಕಟ್ಟಿನ ಬಗೆಗೆ ಎಲ್. ಸಿ. ನಾಗರಾಜ್ ಅವರ ಲೇಖನ 'ಅವನತಿಯತ್ತ ಭಾರತದ ಕೃಷಿ' ('ಹೊಸತು', ಜನವರಿ, ೨೦೧೩) ಗಮನ ಸೆಳೆಯುತ್ತದೆ. ಆದರೆ ಲೇಖನದಲ್ಲಿ ಕೃಷಿ ವಿಜ್ಞಾನದ ಬಗೆಗಿನ ವಸ್ತುನಿಷ್ಠ ಅರಿವಿನ ಕೊರತೆ ಎದ್ದು ಕಾಣುತ್ತದೆ. ಕೃಷಿ ವಿಜ್ಞಾನ ಒಂದು ಅನ್ವಯಿಕ ವಿಜ್ಞಾನ. ಹೀಗಾಗಿ ಅದು ಜೀವಶಾಸ್ತ್ರ, ರಸಾಯನಶಾಸ್ತ್ರಗಳಂತಹ ಹಲವು ಮೂಲಭೂತ ವಿಜ್ಞಾನಗಳನ್ನು, ಸಸ್ಯ-ರೋಗಶಾಸ್ತ್ರ ಗಳಂತಹ ಮಿಶ್ರ ವಿಜ್ಞಾನಗಳನ್ನು ಬಳಸುತ್ತದೆ ಮತ್ತು ಬೆಳೆ-ವಿಜ್ಞಾನ, ಮಣ್ಣು-ವಿಜ್ಞಾನ ಗಳಂತಹ ಹೊಸ ವಿಜ್ಞಾನ ಶಾಖೆಗಳನ್ನು ಹುಟ್ಟುಹಾಕಿದೆ. ಇಲ್ಲಿನ ಸಂಶೋಧನೆಗಳ ಮೂಲ ತತ್ತ್ವಜ್ಞಾನ ಬಹಳಷ್ಟು ಸಲ ಒಟ್ಟಾರೆ ಕೃಷಿಯ ಬಗೆಗಿನ ಸರಕಾರದ ತತ್ತ್ವಜ್ಞಾನದ ಒಳಗೆ ಇರುತ್ತದೆ ಮತ್ತು ಈ ಸಂಶೋಧನೆಗಳ ಅಳವಡಿಕೆ ರೈತಾಪಿ ಜನತೆಯ ಮೇಲಿರುತ್ತದೆ.

ಕೃಷಿ ಬಿಕ್ಕಟ್ಟಿಗೆ ಹಲವು ಹತ್ತು ಕಾರಣಗಳನ್ನು ಮುಂದೆ ಮಾಡಲಾಗುತ್ತಿದೆ, ಇವುಗಳಲ್ಲಿ ಹಲವು ಕಾರಣಗಳು ಸರಕಾರದ ನೀತಿಗಳಿಗಷ್ಟೇ ಸಂಬಂಧಿಸಿವೆ. ಕೃಷಿ ಉತ್ಪನ್ನಗಳಿಗೆ ಸರಕಾರ ಕೊಡುವ ಅವೈಜ್ಞಾನಿಕ ಬೆಂಬಲ ಬೆಲೆ; ಸಾರ್ವಜನಿಕ ಪಡಿತರ ವ್ಯವಸ್ಥೆಯು ಕೆಲವೇ ಧಾನ್ಯಗಳನ್ನು (ಅಕ್ಕಿ ಮತ್ತು ಗೋಧಿ) ಪ್ರೋತ್ಸಾಹಿಸಿ ನಮ್ಮ ಬೇಸಾಯ-ವಾತಾವರಣ ವಲಯಕ್ಕೆ (ಅಗ್ರೋ-ಕೈಮಾಟಿಕ್ ಝೋನ್) ಪೂರಕವಾದ ರಾಗಿ, ಜೋಳ, ಸಜ್ಜೆ, ನವಣೆಗಳಂತಹ ಕಿರುಧಾನ್ಯಗಳನ್ನು ಕಡೆಗಣಿಸಿರುವುದು; ನೀರಾವರಿ ಬೇಸಾಯಕ್ಕೆ ಸೀಮಿತವಾದ ಆಧುನಿಕ ಕೃಷಿಯ ಬಗೆಗಿನ ಒತ್ತು ಮುಂತಾದವು ಇಂತಹ ಕಾರಣಗಳಲ್ಲಿ ಕೆಲವು. ಈ ಕಾರಣಗಳ ಬಗೆಗಿನ ವಿವರಣೆಗಳ ಹರಹು ತೀರಾ ದೊಡ್ಡದು. ವಾಸ್ತವದಲ್ಲಿ ಈ ಬಿಕ್ಕಟ್ಟಿಗೆ ಏಕಕಾರಣ ವಿವರಣೆ ಸರಿಯಾಗಲಾರದು. ಹೀಗಾಗಿ, ಕೃಷಿ ಬಿಕ್ಕಟ್ಟಿನ ಬಗೆಗಿನ ಚರ್ಚೆಯಲ್ಲಿ ಹಲವು ವರ್ಗದ ಜನರು ಪಾಲ್ಗೊಳ್ಳುವುದು ಈ ಬಗೆಗಿನ ಚಿಂತನೆಗಳನ್ನು ಸರಿದಾರಿಗೆ ಹಚ್ಚಲು ಸಹಾಯಕವಾಗಬಲ್ಲದು. ಆದರೆ ಇಂತಹ ಚಿಂತನೆಗಳ ನೆಲೆ ಕೃಷಿ ವಿಜ್ಞಾನ ಶಾಖೆಗಳ ಬಗೆಗಿನ ಸರಿಯಾದ ಅವಗಾಹನೆ ಆಧಾರದಲ್ಲಿ ನಡೆಯಬೇಕಿದೆ. ಬದಲಿಗೆ 'ಕೃಷಿ-ವಿಜ್ಞಾನದಲ್ಲೇನಿದೆ ಮಣ್ಣು' ಎಂಬ ಮನೋಭಾವ ತನ್ನದಾಗಿಸಿಕೊಳ್ಳುವುದು ಇದಕ್ಕೆ ಖಂಡಿತ ಸಹಾಯಕವಾಗಲಾರದು.

ಯಾವುದೇ ಚಿಂತನೆಗಳಲ್ಲಿ ವಾಸ್ತವಗಳನ್ನು ತಪ್ಪಾಗಿ ಗ್ರಹಿಸಿದಾಗ ಅಥವಾ/ಮತ್ತು ತರ್ಕವನ್ನು ತಪ್ಪಾಗಿ ಬಳಸಿದಾಗ ಅಸಹನೆ ಮೂಡುತ್ತದೆ. ಆದರೆ, ಇಲ್ಲಿ ಕೃಷಿ ವಿಜ್ಞಾನದ ಬಗೆಗಿನ ಅಸಹನೆಯ ಕಾರಣಕ್ಕೆ ವಾಸ್ತವಾಂಶಗಳನ್ನು ತಿರುಚಲಾಗಿದೆ ಮತ್ತು ತರ್ಕವನ್ನು ತಪ್ಪಾಗಿ ಅರ್ಥೈಸಲಾಗಿದೆ ಎಂದೇ ಭಾಸವಾಗುತ್ತದೆ.

ಭಾರತದಲ್ಲಿನ ವ್ಯವಸಾಯ ಭೂಮಿ ಬರಡಾಗಿಸುವಿಕೆ

> ಇಂದು ಬಿಂಬಿಸಲಾಗುತ್ತಿರುವ 'ಅಭಿವೃದ್ಧಿ ಮತ್ತು ಬೆಳವಣಿಗೆ' ಎಂಬ ಗ್ರಹಿಕೆಗಳ ಬಗೆಗಿನ ಮಿತಿಯ ಬಗೆಗೆ ದಶಕಗಳ ಹಿಂದೆ 'ಲಿಮಿಟ್ಸ್ ಟು ಗ್ರೋಥ್' ಎಂದು ಚರ್ಚಿಸಲಾಗಿದೆಯಾದರೂ ಜಾಗತೀಕರಣದ ವಾದಗಳನ್ನು ಪೂರ್ಣವಾಗಿ ನುಂಗಿರುವ ಮಧ್ಯಮ ವರ್ಗ ಜಾಣ ಮರೆವಿಗೆ ಒಳಗಾಗಿದೆ. ಈಗಿನ ಕೆಲವೊಂದು ರಾಸಾಯನಿಕ ಗೊಬ್ಬರಗಳ ಮುಂದೆ ಲಭ್ಯವಾಗುವ ಅಂದಾಜು, ಮಿತಿ ನಮ್ಮನ್ನು ಎಚ್ಚರಿಸಬೇಕು ಮತ್ತು ರೋಗ, ಕೀಟಗಳ ಕಾಟಕ್ಕೆ ಜೈವಿಕ, ಯಾಂತ್ರಿಕ ಪರಿಹಾರಗಳ ಕಡೆಗೂ ಅಷ್ಟೇ ತೀವ್ರವಾಗಿ ಗಮನಹರಿಸುವುದು ಸಹ ಮುಖ್ಯ. ಅಲ್ಲದೆ ಇಂತಹ ಬದಲೀ ವ್ಯವಸ್ಥೆಯ ಸಾಧ್ಯತೆಗಳು ಬೀಜ, ಮಣ್ಣನ್ನೂ ಒಳಗೊಂಡು ಕೃಷಿಯ ಎಲ್ಲಾ ಆಯಾಮಗಳನ್ನೂ ಒಳಗೊಳ್ಳಬೇಕಾಗುತ್ತದೆ. ಆದರೆ ಇವಾವುವು ತಕ್ಷಣದಲ್ಲಿ ಕೃಷಿಯನ್ನು ಬಿಕ್ಕಟ್ಟಿನಿಂದ ಪಾರು ಮಾಡಲಾರವೆಂಬುದು ನಿಚ್ಚಳವೇ ಇದೆ. ಏಕೆಂದರೆ ಕೃಷಿ ವ್ಯವಸ್ಥೆಯು ಆರ್ಥಿಕತೆಯನ್ನೂ ಒಳಗೊಂಡಂತೆ ನಮ್ಮ ಒಟ್ಟಾರೆ ಸಮಾಜದ ಭಾಗ, ಇಲ್ಲಿ ಬೆಂಬಲ ಬೆಲೆ, ಒಳಸುರಿಗಳ ಬೆಲೆ, ದಿನ ದಿನಕ್ಕೂ ಹೆಚ್ಚುತ್ತಿರುವ ಬಂಡವಾಳದ ಅಗತ್ಯ, ಸಣ್ಣ –ಅತಿಸಣ್ಣ ರೈತರೇ ಹೆಚ್ಚಾಗಿರುವುದು, ಮಾರುಕಟ್ಟೆಯ ಸಂಕೀರ್ಣತೆ – ಹೀಗೆ ಹಲವು ಸಮಸ್ಯೆಗಳ ಜಾಲಗಳೊಂದಿಗೆ ಹೆಣೆದುಕೊಂಡಿದೆ.

# ಪ್ರೇಮ ಪಯಣ



**ಅ**ಪ್ಪ ಪ್ರೇಮಕ್ಕೆ
ಮೋಸ ಮಾಡಿದ
ಅದಾರೋ ಶ್ರೀಮಂತ
ಸುಂದರಿಯ ಬೆನ್ನುಬಿದ್ದ

ಅವ್ವಳ ಕಣ್ಣಲ್ಲಿ
ಹಳ್ಳ ನಿಲ್ಲಲಿಲ್ಲ
ನೊಂದು ಕೂಳು ತಿನ್ನುವುದು ಬಿಟ್ಟಳು
ಅವಳೊಟ್ಟೆಯಲ್ಲಿದ್ದ
ನನಗೆ ರೋಗ ಬಡಕೊಂಡು
ಪೀಚಲು ಕಾಲುಗಳೊಂದಿಗೆ
ಹೆಳವನಾಗಿ ಹುಟ್ಟಿದೆ.

ಸಣ್ಣ ಹುಡುಗರ ದಂಡು
ಶಾಲೆಗೆ ಹೋಗುವುದು ಕಂಡು
ದುಃಖ ಉಮ್ಮಳಿಸಿ ಬರುತಿದೆ
ನಾನು ಎದ್ದು ಓಡಾಡಿದ್ದರೆ
ಈ ತೆವಳು ಗಾಲಿಯ ಮಣೆಯ
ಮೇಲಿನ ಪಯಣದ ಗೊಡವೆ ಬೇಕಿರಲಿಲ್ಲ,
ಅವ್ವ ನನಗಾಗಿ 'ನೀ ಉಣ್ಣಬೇಕಿತ್ತು'

ಗಾಲಿಯ ಮಣೆಯ ಮೇಲೆ
ಕೂರಿಸಿ ಈ 'ಅಮೀರ'ನ
ಕೈಹಿಡಿದು ಫಾತಿಮಾ
ತೇಕುತ್ತಾ ನಡೆಯುತ್ತಾಳೆ.

ಯಾರ ಹೊರೆಯ ಯಾರ
ಎಳೆಯಬೇಕಾಗಿದೆ ಪಾಪ
ಕಪ್ಪನೆಯ ಬುರುಕಾದಲ್ಲೂ
ಬೆವತು ಕಣ್ಣು ತುಂಬಿಕೊಂಡಿರಬೇಕು.

ಅವಳಿಗೆ ಅದೆಷ್ಟೋ ಸಾರಿ ಹೇಳಿದ್ದೇನೆ
ನನ್ನ ಇಲ್ಲಿಯೆ ಕೈಬಿಟ್ಟು
ಕಾಲುಳ್ಳವನ ಜೋಡಿ ನೀ
ನಡೆದು ಬಿಡು ಎಂದು.

ತಾನೇ ತನ್ನ ಪ್ರೇಮಕ್ಕೆ
ಮೋಸ ಮಾಡಲಾರಳು ಈ ಫಾತಿಮಾ
ಹೆಂಡರಿದ್ದು ಸಂಜೆಯಾದರೆ
ಸೂಳಿಗೇರಿ ಸೇರುವ
ಕಾಲುಳ್ಳ ಭಂಡರ
ಜೊತೆ ಕೂಡಿ ಬಾಳದೆ

ನನ್ನ ನಂಬಿದ ನಿನ್ನ ಬದುಕಲ್ಲೆ
ಕಣ್ಣೀರ ಒರಸಿ ಬಾಳುವುದೇ ಪ್ರೇಮ
ನನ್ನದು ಗೋರಿ ಕಟ್ಟುವ
ಷಹಜಹಾನನ ಪ್ರೇಮವಲ್ಲ
ಬಾಳ ಬಿಸಲೈತಿ ಕುಡಿಯಾಕ ನೀರು ಬೇಕೇನು
ಗರಿಮಿ ಹೈ ಪೀನೆಕಾ ಪಾನಿ ಚಾಹಿಯೇ ಕ್ಯಾ.

**ಡಾ|| ಸಿ. ಮಂಜುನಾಥ**
ಸರಕಾರಿ ಪ್ರಥಮ ದರ್ಜೆ ಕಾಲೇಜು, ತೇರದಾಳ,
ಜಮಖಂಡಿ ತಾಲೂಕು, ಬಾಗಲಕೋಟೆ - ೫೮೭ ೩೧೫

ಬಗೆಗಿನ ವಿವರಗಳನ್ನು ನೀಡುವಲ್ಲಿ ಲೇಖಕರ ಮಾಹಿತಿ ಕೊರತೆ ನಿಚ್ಚಳವಾಗಿ ಕಾಣುತ್ತದೆ. ವಾಸ್ತವದಲ್ಲಿ ಈ ಬಗೆಗಿನ ಪ್ರಾಥಮಿಕ ಮಾಹಿತಿ ಇದ್ದವರು ಸಹ ಲೇಖಕರ ಮಾಹಿತಿ (ಪಶ್ಚಿಮ ಬಂಗಾಳದ ಆರ್ಸೆನಿಕ್ ಸಮಸ್ಯೆ ಹಾಗೂ ಭಾರ ಲೋಹಗಳಿಂದ ಬರಡಾಗುವಿಕೆ ಬಗೆಗೆ) ತಪ್ಪು ಎಂದು ಹೇಳಬಲ್ಲರು. ಲೇಖಕರು ದಿಕ್ಕು ತಪ್ಪಿಸುವ ಇಂತಹ ಮಾಹಿತಿಗಳನ್ನು ಓದುಗರಿಗೆ ನೀಡುವ ಉದ್ದೇಶವಾದರೂ ಏನು ? ಇಂತಹ ಹಲವು ಹತ್ತು ತಪ್ಪು ಗ್ರಹೀತಗಳು, ಗ್ರಹಿಕೆಗಳು ಲೇಖನದಾದ್ಯಂತ ಹೇರಳವಾಗಿವೆ. ಇಲ್ಲಿ ಲೇಖಕರು ಮಾಡಿರುವುದೆಂದರೆ ಹಲವು ಒಪ್ಪಿತ ನಿಲುವುಗಳನ್ನು (ಉದಾಹರಣೆಗೆ ಕೃಷಿಯಲ್ಲಿ ಎಗ್ಗಿಲ್ಲದ ಅನಗತ್ಯ ಕೀಟ/ಕ್ರಿಮಿ/ ಕಳೆನಾಶಕಗಳ ಬಳಕೆ, ಹೆಚ್ಚುತ್ತಿರುವ ಅನಗತ್ಯ ರಾಸಾಯನಿಕ ಗೊಬ್ಬರಗಳ ಬಳಕೆ, ಅಗತ್ಯಕ್ಕಿಂತ ಹೆಚ್ಚು ನೀರು ಬಳಕೆ ಮುಂತಾದವು) ತಪ್ಪಾಗಿ ಗ್ರಹಿಸಿ ಮತ್ತು ಹಲವೆಡೆ ತಪ್ಪಾಗಿ ಬಳಸಿ ತಮಗೆ ತೋಚಿದ ನಿರ್ಣಯವನ್ನು ನಮಗೆ ಉಣಬಡಿಸಿದ್ದಾರೆ.

ಲೇಖನದಲ್ಲಿ 'ಕ್ಯಾನ್ಸರ್ ರೈಲು' ಎಂದು ಕರೆಯಲಾದುದರ ಬಗೆಗಿನ ಬಿಡುಬೀಸು ಹೇಳಿಕೆಗಳ ನಿರ್ಣಯಗಳು ದಿಗಿಲಿಕ್ಕಿಸುವಂತಿವೆ. ಪಂಜಾಬಿನ ಹಸಿರು ಕ್ರಾಂತಿ ಪ್ರದೇಶಗಳಲ್ಲಿ ಕ್ಯಾನ್ಸರ್ ಮತ್ತು ಪಾರ್ಕಿನ್‌ಸನ್ಸ್ ಕಾಯಿಲೆ ಕಾಣಿಸಿಕೊಂಡಿದೆ ಎಂದು 'ರೈಲುಬಿಡುವ' ಲೇಖಕರು ಕ್ಯಾನ್ಸರ್‌ಗೆ ಕಾರಣವಾಗಬಲ್ಲ ತಂಬಾಕು, ವಿಕಿರಣಗಳಂತಹ ಹಲವು ಕಾರಣಗಳನ್ನು ಪರಿಗಣಿಸದೆ ಅದನ್ನು ನೇರವಾಗಿ 'ಹಸಿರುಕ್ರಾಂತಿಗೆ' ಆರೋಪಿಸುತ್ತಾರೆ (ರೈಲು ನಂ. ೫೪೭೦೩, ಪ್ರಜಾವಾಣಿ ೦೫-೦೬-೨೦೧೨. ಆನಂದತೀರ್ಥ ಪ್ಯಾಟಿ ಅವರ ಲೇಖನ ಈ ವಿಮರ್ಶೆಗೆ ಹೊರತಲ್ಲ). ಭಾರತದ ಸರಾಸರಿಗಿಂತ ಕಡಿಮೆ ಕ್ಯಾನ್ಸರ್ ರೋಗಿಗಳು ಪಂಜಾಬಿನಲ್ಲಿದ್ದಾರೆ ಎಂದು ಅಂಕಿ-ಅಂಶಗಳು ಹೇಳುವುದಕ್ಕೆ ವಿವರಣೆ ಅಗತ್ಯವೆಂದು ಸಹ ಲೇಖಕರಿಗೆ ಅನ್ನಿಸುವುದಿಲ್ಲ. ಆನ್‌ಲೈನ್ ಮೆಡಿಕಲ್ ಜರ್ನಲ್ ಲ್ಯಾನೆಸೆಟ್-ಕಾಮ್‌ನ ಇತ್ತೀಚಿನ ಸರ್ವೆ ಸಹ ೨೦೧೦ರ ಒಂದು ಲಕ್ಷ ಸಾವುಗಳಲ್ಲಿ ಕ್ಯಾನ್ಸರಿನಿಂದಾದ ಸಾವಿನ ಸಂಖ್ಯೆ ಪಂಜಾಬಿನಲ್ಲಿ ೮೦.೬ ಮತ್ತು ಭಾರತದ ಸರಾಸರಿ ೯೭.೬ ಎನ್ನುತ್ತದೆ. ಆಸಕ್ತಿದಾಯಕ ಅಂಶವೆಂದರೆ ಕರ್ನಾಟಕದಲ್ಲಿ ಈ ಸಂಖ್ಯೆ ೧೨೦.೭. ಈ ಆರೋಪಗಳ ಹಿನ್ನೆಲೆಯಲ್ಲಿಯೇ ಪಂಜಾಬಿನ ನೀರಿನಲ್ಲಿ ಯುರೇನಿಯಂನ ಅಂಶ ಹೆಚ್ಚಿರುವುದರ ಬಗೆಗೂ ವರದಿಯಾಗಿದೆ (ದಿ ಟ್ರಿಬ್ಯೂನ್, ಸೆಪ್ಟೆಂಬರ್ ೧೭, ೨೦೧೦). ಇಲ್ಲಿ ಲೇಖಕರು ವಾಸ್ತವವನ್ನು ಮುಚ್ಚಿಡುವದರೆಡೆ/ತಿರುಚುವದರೆಡೆ ಬೊಟ್ಟು ಮಾಡಿ ತೋರಿಸುತ್ತಿರುವುದರ ಅರ್ಥ ಕೃಷಿಯಲ್ಲಿ ರಾಸಾಯನಿಕಗಳ ಬಳಕೆಯಲ್ಲಿ ತಪ್ಪುಗಳಾಗುತ್ತಿಲ್ಲವೆಂದಲ್ಲ, ಬದಲಾಗಿ ಇಲ್ಲಿಯ ಅವಸರದ ತೀರ್ಮಾನಗಳು ಆಧುನಿಕ ಕೃಷಿಯ ಬಗೆಗೆ ಅಸಹನೆ, ಪೂರ್ವಗ್ರಹ ತೋರುತ್ತದೆ ಎಂದು ಹೇಳಲು, ಹೀಗಾಗಿ ಇಲ್ಲಿಯ ಅವರ ಬಿಡುಬೀಸು ಹೇಳಿಕೆಗಳನ್ನು ಸುಳ್ಳುಗಳ ಸರಮಾಲೆಗಳೆನ್ನಬೇಕೋ ಅಥವಾ ಕುಟಿಲತನದ ವಾದಗಳೆನ್ನಬೇಕೋ ಓದುಗರ ನಿರ್ಣಯಕ್ಕೆ ಬಿಡುವುದು ಲೇಸೆಂದು ಭಾವಿಸುತ್ತೇವೆ.

**ರಾಸಾಯನಿಕ ಗೊಬ್ಬರಗಳು ಮತ್ತು ಕೃಷಿ ತಂತ್ರಜ್ಞಾನ**

ಲೇಖಕರು ಕೃಷಿ ವಿಜ್ಞಾನದ ಅರಿವಿಲ್ಲದ ಕಾರಣಕ್ಕೆ ''ದ್ವಿದಳ ಸಸ್ಯಗಳು ಬೆಳವಣಿಗೆ ಆಗಬೇಕಾದರೆ ಮಣ್ಣಿನಲ್ಲಿ ಮಾಲಿಬ್ಡಿನಂ ಎಂಬ ಲಘು ಪೋಷಕಾಂಶ ನೈಸರ್ಗಿಕವಾಗಿ ಉತ್ಪನ್ನವಾಗಬೇಕು'' ಎಂದು ಅಪ್ಪಣೆ ಕೊಡುತ್ತಾರೆ (ಬಹುಶಃ ದೇವರು ಬಿಟ್ಟುಹೋದ ರಥವನ್ನು ಅವರೇ ಹತ್ತಿದ ಕಾರಣಕ್ಕೆ ಎಂದು ಕಾಣುತ್ತದೆ). ಮಾಲಿಬ್ಡಿನಂ ಒಂದು ಧಾತು ಮತ್ತು ಅದು ನಿಸರ್ಗದಲ್ಲಿ ಸಹಜವಾಗಿರುತ್ತದೆ, ಅದನ್ನು ಉತ್ಪಾದಿಸಲು ಬರುವುದಿಲ್ಲ. ದ್ವಿದಳಧಾನ್ಯ ಸಸ್ಯಗಳಲ್ಲಿ ಪೋಷಕಾಂಶವಾಗಿ ಮಾಲಿಬ್ಡಿನಂಗೆ ಮಹತ್ವ ಇರುವುದು ಈ ಸಸ್ಯಗಳು





ಗಾಳಿಯಲ್ಲಿನ ಸಾರಜನಕ ಅಥವಾ ನೈಟ್ರೋಜನ್ - ಹಿಡಿದಿಡುವ (ನೈಟ್ರೋಜನ್ ಫಿಕ್ಸೇಶನ್) ಪ್ರಕ್ರಿಯೆಯಲ್ಲಿ ಮಾಲಿಬ್ಡಿನಂ ವೇಗ-ಹೆಚ್ಚಿಸುವ (ಕ್ಯಾಟಾಲಿಸ್ಟ್ ಅಥವಾ ವೇಗವರ್ಧಕ) ಕೆಲಸ ಮಾಡುವ ಕಾರಣಕ್ಕೆ. ಮಣ್ಣಿನಲ್ಲಿ ಸಾವಯವ ಅಂಶ ಹಲವು ಲಘು ಪೋಷಕಾಂಶಗಳನ್ನು ಸಾವಯವ ಕಾಂಪೌಂಡ್‌ಗಳಾಗಿಸುವ ಮೂಲಕ ನೀರಿನ ಬಸಿಯುವಿಕೆಯಲ್ಲಿ ತೊಳೆದು ಹೋಗದಂತೆ ಹಿಡಿದಿರಿಸುತ್ತದೆ ಮತ್ತು ಮುಂದೆ ಬಿಡುಗಡೆ ಮಾಡುತ್ತದೆ. (ಮಣ್ಣಿನಲ್ಲಿನ ಸಾವಯವ ಅಂಶ ಮಾಡುವ ಹಲವು 'ಒಳ್ಳೆ'ಯ ಕೆಲಸಗಳಲ್ಲಿ ಇದೂ ಒಂದು. ಮಣ್ಣಿನ ಫಲವತ್ತಿಕೆಯಲ್ಲಿ ಸಾವಯವ ಅಂಶದ ಮಹತ್ವ ಸಾರಿದವನೇ ಅಲ್‌ಬ್ರೆಕ್ಟ್ ಮತ್ತು ಕೃಷಿ ವಿಜ್ಞಾನದಲ್ಲಿ ಇದು ಮಹತ್ವದ ಕೊಡುಗೆ ಎಂದೇ ಪರಿಗಣಿತವಾಗಿದೆ). ವಾಸ್ತವದಲ್ಲಿ ವಿಜ್ಞಾನ ಇತಿಹಾಸ ವಿವರಿಸುವಲ್ಲಿ ಮಣ್ಣಿನ ದಾಹದಂತಹ ಅವೈಜ್ಞಾನಿಕ ಪರಿಕಲ್ಪನೆಯನ್ನು ಲೇಖಕರು ಬಳಸಿದ್ದಾರೆ. ೧೯ನೆಯ ಶತಮಾನದ ಆರಂಭಕ್ಕಾಗಲೇ ರಂಜಕ ಅಥವಾ ಪಾಸ್ಪರಸ್ ಸಸ್ಯದ ಬೆಳವಣಿಗೆಗೆ ಅಗತ್ಯ ಎಂಬುದು ಗೊತ್ತಾಗಿತ್ತು, ಹೀಗಾಗಿ, ದೊಡ್ಡ ಮಟ್ಟದಲ್ಲಿ ಮೂಳೆಗಳನ್ನು ಪುಡಿ ಮಾಡಿ ಗೊಬ್ಬರವಾಗಿ ಬಳಸುವುದು ಬ್ರಿಟನ್‌ನಲ್ಲಿ ಚಾಲ್ತಿಗೆ ಬಂತು. ಆದರೆ, ಮೂಳೆಗಳಲ್ಲಿನ ರಂಜಕ ನೀರಿನಲ್ಲಿ ಕರಗದ ಕಾರಣಕ್ಕೆ ನಿಧಾನವಾಗಿ ಸಸ್ಯಗಳಿಗೆ ದೊರಕುತ್ತದೆ ಎಂಬುದು ಗಮನಕ್ಕೆ ಬಂತು. ಹಲವು ಪಕ್ಷಿಗಳ ಹಿಕ್ಕೆಗಳಲ್ಲಿ ರಂಜಕ ದೊರೆಯುತ್ತದೆ ಎಂದು ತಿಳಿದು ದೊಡ್ಡ ಮಟ್ಟದಲ್ಲಿ ಇವನ್ನು ಬಳಸಲಾಗುತ್ತಿತ್ತು. ಇದನ್ನು 'ಭೂಮಿಯ ಕೃತಕ ದಾಹ' ಎಂದು ಬಣ್ಣಿಸುವುದು ಸರಿಯಲ್ಲ. ಲೀಬಿಗ್‌ನದು ಈ ಬಗೆಗಿನ ಆರಂಭಿಕ ವೈಜ್ಞಾನಿಕ ಅಧ್ಯಯನಗಳಲ್ಲಿ ಒಂದು ಮತ್ತು ಮಹತ್ವದ್ದು ಸಹ. ಅವನು ಒಟ್ಟು ಮೂರು ಪ್ರಮುಖ ಸಸ್ಯ ಪೋಷಕಾಂಶಗಳನ್ನು (ಸಾರಜನಕ ಅಥವಾ ನೈಟ್ರೋಜನ್, ರಂಜಕ ಅಥವಾ ಪಾಸ್ಪರಸ್ ಮತ್ತು ಪೊಟ್ಯಾಷ್) ಗುರುತಿಸುತ್ತಾನೆ. ಹೀಗಾಗಿ ಲೀಬಿಗ್, ''ನಾನು ತಪ್ಪು ಮಾಡಿದ್ದೇನೆ, ದೇವರ ಸೃಷ್ಟಿಯನ್ನು ಮೀರಿದ್ದೇನೆ'' ಎಂದು ಏಕೆ ಹೇಳುತ್ತಾನೆ ಎಂದು ನಮಗೆ ತಿಳಿಯದಾದರೂ (ಈ ಬಗೆಗಿನ ಮಾಹಿತಿ ನಮಗೆ ದೊರೆತಿಲ್ಲ) ಅವನು ದೈವ ಸೃಷ್ಟಿಯ ಯಾವ ನಿಯಮ ಮೀರಿದ ಎಂದು ಲೇಖಕರು ಭಾವಿಸುತ್ತಾರೆ? ಪ್ರಕೃತಿಯ ನಿಯಮ ಅರಿತು ಬಳಸುವುದು ದೈವಸೃಷ್ಟಿಯನ್ನು ಮೀರುವುದು ಎನ್ನುವುದಾದರೆ ಮಾನವನ ಏಳಿಗೆಯ ಸ್ವರೂಪ ಇದೇ ಅಲ್ಲವೇ ?

ಕೃಷಿ ವಿಜ್ಞಾನಿಗಳು ವಿಜ್ಞಾನದ ಪರವಾದ ಪುಂಗಿ ಊದುತ್ತಿರಬಹುದು, ಹಾಗೆಯೇ ಲೇಖಕರಿಗೆ ಬೇರೆಯದೇ ಆದ ಸಾಂಪ್ರದಾಯಿಕ ಅಥವಾ ವೈಚಾರಿಕ ಪುಂಗಿಯೂ ಇರಬಹುದು. ಆದರೆ, ಇದು ವಾಸ್ತವಾಂಶಗಳನ್ನು ತಿರುಚುವಲ್ಲಿ ಕೊನೆಗೊಳ್ಳಬಾರದು. ಭಾರತದಲ್ಲಿ ರೈತಾಪಿ ಜನ ಉಳಿಸಿಕೊಂಡು ಬಂದ ಕೃಷಿ ಸಂಪ್ರದಾಯ ಮೂಲಭೂತವಾಗಿ ಆಚರಣೆಯದು. ಹೀಗಾಗಿ ಭಾರತೀಯ ಶಿಷ್ಟ ಸಂಪ್ರದಾಯದಲ್ಲಿ (ಉದಾಹರಣೆಗೆ, ವೃಕ್ಷಾಯುರ್ವೇದ) ಕೃಷಿ ಮತ್ತು ಸಸ್ಯ ಬೆಳವಣಿಗೆಯ ಬಗೆಗಿನ ಜ್ಞಾನಕ್ಕಿಂತ ರೈತರ ಕೃಷಿ ಆಚರಣೆಗಳೊಳಗಿನ ಜ್ಞಾನವೇ ಹೆಚ್ಚು ಉಪಯುಕ್ತವಾಗಬಲ್ಲದು ಎಂಬುದು ನಿಚ್ಚಳವೇ ಇದೆ.

ನಿಜವಾಗಿ ರಾಸಾಯನಿಕಗಳು ಇಲ್ಲದ ಕೃಷಿಯೇ 'ಸಹಜ' ಎಂಬ 'ಆದರ್ಶವಾದಿ' ನಂಬಿಕೆಯ ಪರಿಣಾಮವಾಗಿ 'ರಾಸಾಯನಿಕರಹಿತ ಕೃಷಿ' ದಾರಿಯನ್ನು ಕೆಲವರು ಅಳವಡಿಸಿಕೊಂಡಿರಲೂಬಹುದು. ಆದರೆ ಕೃಷಿ ಮತ್ತು ರಾಸಾಯನಿಕ ಒಳಸುರಿಗಳ ಬಗೆಗಿನ ತಪ್ಪು ತರ್ಕದ (ರಿಡಕ್ಷನಿಸ್ಟ್ ಅಥವಾ ಸರಳೀಕರಿಸಿದ ತರ್ಕದ ಗ್ರಹಿಕೆ) ಹಿನ್ನೆಲೆಯಲ್ಲಿ ಮಣ್ಣಿನ ಸಾವಯವ ಅಂಶದ ಕಡೆಯ ಒತ್ತು ತಪ್ಪಲ್ಲವಾದರೂ ಅದು ಇನ್ನೊಂದು ತುದಿಯನ್ನು ಮುಟ್ಟಬಾರದು ಎಂದು ವಿಜ್ಞಾನಿಗಳು ವಾದಿಸುತ್ತಾರೆ. ಸಾವಯವ ಕೃಷಿಯ ಉತ್ಪಾದನೆಗಳು ಸಾಮಾನ್ಯ ಉತ್ಪಾದನೆಗಳಿಗಿಂತ 'ಆರೋಗ್ಯಕರ' ಎಂದು ಸಾಬೀತಾಗಿಲ್ಲ ಎಂದು ಅವರು ಹೇಳುತ್ತಾರೆ. ಬದಲಿಗೆ ಇಂತಹ ಕೃಷಿ ಉತ್ಪನ್ನಗಳಲ್ಲಿ ನೈಟ್ರೇಟ್ ಮತ್ತು ಪ್ರೋಟೀನ್ ಅಂಶ ಕಡಿಮೆ ಇರುತ್ತದೆ ಎಂದು ಹೇಳಲಾಗಿದೆ (ಅರ್ಬನ್ ಮೈಥ್ಸ್ ಆಫ್ ಆರ್ಗನಿಕ್ ಫಾರ್ಮಿಂಗ್, ಆಂಥೋನಿ ಥ್ರೆವವಾಸ್, ನೇಚರ್, ೨೨ನೇ ಮಾರ್ಚ್ ೨೦೦೧). ಇನ್ನೂ ಕೆಲವರು ಇಳುವರಿ ಕಡಿಮೆಯಾಗುತ್ತದೆ ಎಂದು ವಾದಿಸುತ್ತಾರೆ. (ಇಂದಿನ ಸಾವಯವ ಕೃಷಿ ಉತ್ಪಾದನೆ ಬೆಲೆ ಇದನ್ನೇ ಸೂಚಿಸುತ್ತದೆ ಅಲ್ಲವೇ ?).




**ಕೃಷಿ ಜ್ಞಾನ ಮತ್ತು ರೈತ**

ಕೃಷಿ ತಂತ್ರಜ್ಞಾನ ಅಳವಡಿಕೆಯಲ್ಲಿ ಹಲವು ತೊಂದರೆಗಳಿವೆ. ಅದರಲ್ಲಿ ಮುಖ್ಯವಾದುದು ಹಲವು ಒಳಸುರಿಗಳು ಹೇಗೆ ಕೆಲಸ ಮಾಡುತ್ತವೆ ಎಂಬುದರ ಪ್ರಾಥಮಿಕ ಗ್ರಹಿಕೆಯ ಕೊರತೆ (ಕೇವಲ ರೈತರಿಗಷ್ಟೇ ಅಲ್ಲ, ಹಲವು ಕಂಪೆನಿಗಳ ಮಾರಾಟಗಾರರಿಗೂ ಸಹ). ಹಲವು ಸಲ ಈ ಬಗೆಗಿನ ಗ್ರಹಿಕೆ 'ಇಷ್ಟು ಹಾಕಿದರೆ-ಅಷ್ಟು, ಇನ್ನಷ್ಟು ಹಾಕಿದರೆ ಮತ್ತಷ್ಟು' ಎಂಬ ಸರಳೀಕೃತ ಅಥವಾ ರಿಡಕ್ಷನಿಸ್ಟ್ ತರ್ಕದೊಳಗೇ ಇರುತ್ತದೆ. ವಾಸ್ತವದಲ್ಲಿ ಈ ಸಂಬಂಧದ ಸಂಕೀರ್ಣತೆ ಅರಿಯಲು ಮಣ್ಣಿನ ಬಗೆಗಿನ, ಸಸ್ಯಗಳ ಬಗೆಗಿನ ವೈಜ್ಞಾನಿಕ ಅರಿವು ಸಹ ಮುಖ್ಯವಾಗುತ್ತದೆ. ಅವುಗಳಿರುವುದು ಇಂಗ್ಲಿಷ್‌ನಲ್ಲಿ. ಅದನ್ನು ರೈತರಿಗೆ ಕೊಡುವ ಅಗತ್ಯವಿರುವುದು ಅರಿವಿನ ಹೆಚ್ಚಳ ತಂತ್ರಜ್ಞಾನದ ಅಳವಡಿಕೆಯ ಕಾರ್ಯಕ್ಷಮತೆಯನ್ನು ಹೆಚ್ಚಿಸುತ್ತದೆ ಎಂಬ ಕಾರಣಕ್ಕೆ. ಇದಕ್ಕೆ ಭಿನ್ನವಾಗಿ 'ನಮಗೆ ಗೊತ್ತು, ನಾವು ಹೇಳುತ್ತೇವೆ, ನೀವು ಮಾಡಿ' ಎಂಬ ಅಧಿಕಾರಶಾಹಿ ಮನೋಭಾವವೇ ಎಲ್ಲೆಡೆ ಮನೆಮಾಡಿದೆ. ಈ ಬಗೆಗಿನ ಅರಿವು ರೈತರಿಗೆ ತಲುಪಿಸುವಲ್ಲಿ ಇರುವ ಅನೇಕ ಅಡ್ಡಿಗಳಲ್ಲಿ ಭಾಷೆಯ ಅಡ್ಡಿ ಪ್ರಮುಖವಾದುದು ಮತ್ತು ಇಂದೂ ಸಹ ಇದು

ಮುಂದುವರಿದಿದೆ. ಇಲ್ಲಿನ 'ಇಂಗ್ಲಿಷ್ ಬಾಬುಗಳಿಗೆ' (ಎಲ್ಲಡೆಯಂತೆ ಕೃಷಿ ವಿಜ್ಞಾನಿಗಳಲ್ಲಿಯೂ ಈ ಗುಂಪು ದೊಡ್ಡದೇ ಇದೆ) ಇದೊಂದು ತೊಂದರೆ ಅನ್ನಿಸುತ್ತಿಲ್ಲ. ಕೃಷಿ ತಂತ್ರಜ್ಞಾನದ ತಿಳುವಳಿಕೆ ಮತ್ತು ಅದರ ಬಳಕೆಯ ನಡುವಿನ ಕಂದರ ಕಡಿಮೆಯಾಗಲು ಬಳಕೆದಾರರ ಅರಿವನ್ನು ಹೆಚ್ಚಿಸುವುದಲ್ಲದೆ ಬೇರೆ ಯಾವ ಅಡ್ಡ ದಾರಿಯೂ ಇಲ್ಲ. ಇಂತಹ ಅರಿವಿನ ಹೆಚ್ಚಳ ರೈತನ ಭೂಮಿಯ 'ಆರೋಗ್ಯ'ಕ್ಕಷ್ಟೇ ಅಲ್ಲ, ಬಹುಸಂಖ್ಯಾತ ಕೃಷಿ ಬಳಕೆದಾರರ ಆರೋಗ್ಯ ಸುಧಾರಣೆಗೂ ಸಂಬಂಧಿಸಿದೆ.

ಕೃಷಿಯಲ್ಲಿ ಬಳಸುವ ಒಳಸುರಿಗಳಲ್ಲಿ ರಾಸಾಯನಿಕ ಗೊಬ್ಬರ ಹೆಚ್ಚು ಬಳಕೆ. ಕೆಲವೊಮ್ಮೆ ಮಣ್ಣಿನ ಆರೋಗ್ಯಕ್ಕೂ ಮಾರಕವಾಗಬಲ್ಲದು. ಹಾಗೆಯೇ ಕ್ರಿಮಿ/ಕೀಟ/ಕಳೆ ನಾಶಕಗಳು ಹೆಚ್ಚು ಬಳಸಿದಲ್ಲಿ ಅವುಗಳ ಉಳಿಕೆ ಆಹಾರ ವರ್ತುಲ ಪ್ರವೇಶಿಸಿ ಸಾರ್ವಜನಿಕ ಆರೋಗ್ಯಕ್ಕೂ ಮಾರಕವಾಗಬಲ್ಲದು. ಅಲ್ಲದೆ ಇವುಗಳ ಬಳಕೆಯಲ್ಲಿ ಶಿಫಾರಸು ಮಾಡಿದ ರಕ್ಷಣೆಯ ಕ್ರಮಗಳನ್ನು (ಗ್ಲೌಸು, ಮುಖವಾಡ ಧರಿಸುವುದು, ಬಳಕೆಯ ನಂತರದ ಶುಚಿ ಮುಂತಾದವು) ಪಾಲಿಸದಿರುವುದು, ಶಿಫಾರಸು ಮಾಡಿದ್ದಕ್ಕಿಂತ ಹೆಚ್ಚು ರಾಸಾಯನಿಕಗಳ ಬಳಕೆಯೂ ಹಲವು ತೊಂದರೆಗಳಿಗೆ ಮೂಲ. ವಾಸ್ತವದಲ್ಲಿ ಈ ಬಗೆಗಿನ ಅರಿವಿನ ಕೊರತೆ ಬಹುಸಂಖ್ಯಾತ ಸಣ್ಣ ಮತ್ತು ಅತಿಸಣ್ಣ ರೈತರಿಗೆ ಹೆಚ್ಚು ಮಾರಕ. ಏಕೆಂದರೆ ಅವರು ದೊಡ್ಡ ರೈತರಂತಲ್ಲದೆ ನೇರವಾಗಿ ಕೃಷಿ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಈ ಎಲ್ಲಾ ಅರಿವಿನ ನಡುವೆಯೂ ಆಗುತ್ತಿರುವುದೇ ಬೇರೆ. ಸಾಮಾನ್ಯವಾಗಿ ಎಷ್ಟು ಕ್ರಿಮಿ/ಕೀಟ/ಕಳೆನಾಶಕ ಬಳಸಬೇಕೆಂದು ಹೇಳುವುದು ಮಾರಾಟಗಾರ (ಶಿಫಾರಸು ಮಾಡಿದ್ದಕ್ಕಿಂತ ಹೆಚ್ಚು ಹೇಳಿರಲೂ ಸಾಧ್ಯ). ರೈತ, ಬಳಕೆಯಲ್ಲಿ ಪರಿಣಾಮಕಾರಿಯಾಗಿರಲೆಂದು ಇನ್ನೂ ಹೆಚ್ಚು ಮಾಡುತ್ತಾನೆ. ಇವೆಲ್ಲವೂ ಬದಲಾಗಬೇಕಾದರೆ ಒಟ್ಟಾರೆ ರೈತರ ಅರಿವು, ಗ್ರಹಿಕೆಯೊಂದಿಗೆ, ಬಳಕೆಯ ರೀತಿಯೂ ಸಹ ಬದಲಾಗಬೇಕು.

**ಬದಲಿ ಕೃಷಿಯ ತಾತ್ವಿಕತೆ**

ಬದಲಿ ಕೃಷಿಯ ತಾತ್ವಿಕತೆಗೆ, ನಮ್ಮ ವಸಾಹತುಶಾಹಿ ವಿರೋಧಿ ದೇಸಿ ಚಳುವಳಿಯ ಕಾಲದ 'ಗತ ವೈಭವೀಕರಣದ' ಬರವಣಿಗೆಗಳನ್ನು ಆಧಾರವಾಗಿಸಿ ಕೊಂಡ ಹಿಮ್ಮುಖವಾಗಿ ನೋಡುವ ಚಿಂತನೆಗಳು ದೇಸೀಯ ಹೋರಾಟಕ್ಕೆ ಹಿಂದೆ ಸ್ಫೂರ್ತಿಯಾಗಿರ ಬಹುದಾದರೂ, ಇಂದಿನ ಸಮಸ್ಯೆಗೆ ಪರಿಹಾರಗಳಾಗಲಾರವು. ಬದಲಿಗೆ, ನಾವು ಆಧುನಿಕ ವಿಜ್ಞಾನದ ಗ್ರಹಿಕೆ ಬಳಕೆ ಹೇಗೆ ಜಾಗತೀಕರಣವು ಮುಕ್ಕಾಗಿಸಿದೆ ಎಂಬುದನ್ನು ಗಮನಿಸಬೇಕು. ಜಾಗತೀಕರಣ ಪ್ರಚೋದಿಸುತ್ತಿರುವ ಸಣ್ಣ ವರ್ಗವೊಂದರ ಕೊಳ್ಳುಬಾಕತನದ ಆಧಾರದ ಮೇಲಿನ ಬೆಳವಣಿಗೆಯು ಆರ್ಥಿಕತೆಯ ಮೇಲೆ ತೀವ್ರ ಮಿತಿಗಳನ್ನು ಹೇರುತ್ತದೆ ಎಂಬುದನ್ನು ಗುರುತಿಸಬೇಕಿದೆ.

ಇಂದು ಬಿಂಬಿಸಲಾಗುತ್ತಿರುವ 'ಅಭಿವೃದ್ಧಿ ಮತ್ತು ಬೆಳವಣಿಗೆ' ಎಂಬ ಗ್ರಹಿಕೆಗಳ ಬಗೆಗಿನ ಮಿತಿಯ ಬಗೆಗೆ ದಶಕಗಳ ಹಿಂದೆ 'ಲಿಮಿಟ್ಸ್ ಟು ಗ್ರೋಥ್' ಎಂದು ಚರ್ಚಿಸಲಾಗಿದೆಯಾದರೂ ಜಾಗತೀಕರಣದ ವಾದಗಳನ್ನು

## ಉರುಳು ಸೇವೆ

**ದೇವರೆಡೆಯ ಮೇಲೆ**
**ಸೇವೆಗೆ**
**ದೇಹ ಉರುಳದೆ**
**ನನಗಾದರೂ**
**ಆ ಎಡೆ ತಿನ್ನಲು**
**ಕೊಡಬಾರದೆ ?**

**ಪುಂಡಲೀಕ ಪಾಟೀಲ**
'ಶಾಂತಲಾ' ಪ್ಲಾ. ನಂ. ೨೧೮, ಬಾಕ್ಸಯಿಟ್ ರೋಡ
ವಿದ್ಯಾನಗರ, ಅಂಚೆ : ಹಿಂಡಲಗಿ
ಬೆಳಗಾವಿ - ೫೯೧೧೦೮

ಪೂರ್ಣವಾಗಿ ನುಂಗಿರುವ ಮಧ್ಯಮ ವರ್ಗ ಜಾಣ ಮರೆವಿಗೆ ಒಳಗಾಗಿದೆ. ಈಗಿನ ಕೆಲವೊಂದು ರಾಸಾಯನಿಕ ಗೊಬ್ಬರಗಳ ಮುಂದೆ ಲಭ್ಯವಾಗುವ ಅಂದಾಜು, ಮಿತಿ ನಮ್ಮನ್ನು ಎಚ್ಚರಿಸಬೇಕು ಮತ್ತು ರೋಗ, ಕೀಟಗಳ ಕಾಟಕ್ಕೆ ಜೈವಿಕ, ಯಾಂತ್ರಿಕ ಪರಿಹಾರಗಳ ಕಡೆಗೂ ಅಷ್ಟೇ ತೀವ್ರವಾಗಿ ಗಮನಹರಿಸುವುದು ಸಹ ಮುಖ್ಯ. ಅಲ್ಲದೆ ಇಂತಹ ಬದಲೀ ವ್ಯವಸ್ಥೆಯ ಸಾಧ್ಯತೆಗಳು ಬೀಜ, ಮಣ್ಣನ್ನೂ ಒಳಗೊಂಡು ಕೃಷಿಯ ಎಲ್ಲಾ ಆಯಾಮಗಳನ್ನೂ ಒಳಗೊಳ್ಳಬೇಕಾಗುತ್ತದೆ. ಆದರೆ ಇವಾವುವು ತಕ್ಷಣದಲ್ಲಿ ಕೃಷಿಯನ್ನು ಬಿಕ್ಕಟ್ಟಿನಿಂದ ಪಾರು ಮಾಡಲಾರವೆಂಬುದು ನಿಚ್ಚಳವೇ ಇದೆ. ಏಕೆಂದರೆ ಕೃಷಿ ವ್ಯವಸ್ಥೆಯು ಆರ್ಥಿಕತೆಯನ್ನೂ ಒಳಗೊಂಡಂತೆ ನಮ್ಮ ಒಟ್ಟಾರೆ ಸಮಾಜದ ಭಾಗ, ಇಲ್ಲಿ ಬೆಂಬಲ ಬೆಲೆ, ಒಳಸುರಿಗಳ ಬೆಲೆ, ದಿನ ದಿನಕ್ಕೂ ಹೆಚ್ಚುತ್ತಿರುವ ಬಂಡವಾಳದ ಅಗತ್ಯ, ಸಣ್ಣ-ಅತಿಸಣ್ಣ ರೈತರೇ ಹೆಚ್ಚಾಗ್ಗಿರುವುದು, ಮಾರುಕಟ್ಟೆಯ ಸಂಕೀರ್ಣತೆ – ಹೀಗೆ ಹಲವು ಸಮಸ್ಯೆಗಳ ಜಾಲಗಳೊಂದಿಗೆ ಹೆಣೆದು ಕೊಂಡಿದೆ. ಇಲ್ಲಿನ ಬಿಕ್ಕಟ್ಟನ್ನು ಕೃಷಿ ವಿಜ್ಞಾನವನ್ನು ತಿರಸ್ಕರಿಸಲು ಬಳಸದೆ ವಿಮರ್ಶಿಸುವಲ್ಲಿ ಬಳಸುವುದು ಸಮತೋಲನದ ದೃಷ್ಟಿಕೋನಕ್ಕೆ ಪೂರಕವಾಗಬಲ್ಲದು. ಇಂದೂ ಸಹ ಬಿಟಿ ಹತ್ತಿಯ ಪರಿಣಾಮದ ಬಗೆಗೆ ಕೃಷಿ ವಿಜ್ಞಾನಿಗಳಲ್ಲಿ ಏಕಾಭಿಪ್ರಾಯವಿಲ್ಲ. ಕಳೆದ ಹತ್ತು ವರ್ಷಗಳ ಅನುಭವ ಹತ್ತಿಯ ಕಾಯಿಕೊರಕ ಹುಳದ ನಿಯಂತ್ರಣದ ಪರಿಣಾಮವಾಗಿ ಕೀಟನಾಶಕದ ಬಳಕೆ ಕಡಿಮೆಯಾಗಿದೆ ಮತ್ತು ಎಕರೆವಾರು ಇಳುವರಿ ಹೆಚ್ಚಿದೆ ಎಂದು ಒಂದು ವರ್ಗ ಅಂಕಿ-ಸಂಖ್ಯೆಗಳನ್ನು ನೀಡುತ್ತಿದ್ದರೆ, ಇನ್ನೊಂದು ವರ್ಗ ಈ ಹತ್ತಿಯಲ್ಲಿನ ಜೆನೆಟಿಕ್ ಅಂಶ ಆಹಾರ ವರ್ತುಲವನ್ನು ಪ್ರವೇಶಿಸಿ ಕೇಡು ಉಂಟುಮಾಡಬಹುದು ಎಂದು ಶಂಕಿಸುತ್ತಿದೆ. ಇನ್ನೊಂದೆಡೆ ಎಂಡೋಸಲ್ಫಾನ್‌ನಂತಹ ತೀವ್ರ ವಿಷಕಾರಕಗಳು, ನಿಷೇಧಗಳ ನಡುವೆಯೂ, ಮಾರುಕಟ್ಟೆಯಲ್ಲಿ ಲಭ್ಯವಿವೆ ಎಂಬಂತಹ ಆಘಾತಕಾರಿ ವಾಸ್ತವಗಳು ನಮ್ಮನ್ನಿನ್ನೂ ಜಾಗ್ರತವಾಗಿಸಿಲ್ಲ. ಸಾವಿರ ಸಂಖ್ಯೆಯಲ್ಲಿ ಸಾವಿಗೆ ಕಾರಣವಾದ ಯುನಿಯನ್ ಕಾರ್ಬೈಡ್‌ಗಳಂತಹ ಕಂಪೆನಿಗಳನ್ನು ಸಹ ಅಂತಹ ಕೃತ್ಯದ ಹೊಣೆ ಹೊತ್ತುಕೊಳ್ಳುವಂತೆ ಮಾಡಲು ಹಲವು ದಶಕಗಳ ನಂತರವೂ ಸರಕಾರಗಳಿಗೆ ಸಾಧ್ಯವಾಗಿಲ್ಲ. ಹೀಗಾಗಿ, ನಾಳೆ ಏಕಸ್ವಾಮ್ಯ ಪಡೆದ ಕಂಪೆನಿಗಳು ಬಿಟಿ ಹತ್ತಿಯ ಬೀಜದ ಬೆಲೆಯನ್ನೋ (ಅಥವಾ ಇನ್ನಾವುದೇ ಒಳಸುರಿಯ ಬೆಲೆಯನ್ನು) ಅಥವಾ ತಾನು ಕೊಳ್ಳುವ ಉತ್ಪನ್ನದ ಬೆಲೆಯನ್ನೋ ಬೇಕಾಬಿಟ್ಟಿಯಾಗಿ ಏರಿಸಿ/ಇಳಿಸಿ ರೈತರನ್ನು ದಿವಾಳಿಯ ಅಂಚಿಗೆ ತಳ್ಳಿದರೆ ಸರಕಾರ ಮಾರುಕಟ್ಟೆ, ಸ್ಪರ್ಧೆ, ಹೊಸ ಆರ್ಥಿಕ ನೀತಿ ಮುಂತಾದ ಚಿಂತನೆಗಳ ಹೆಸರಿನಲ್ಲಿ ರೈತರ ಬೆಂಬಲಕ್ಕೆ ಬರದೆ ಇರುವ ಸಾಧ್ಯತೆಯೇ ಹೆಚ್ಚು. ಹೀಗಾಗಿ, ಏಕಕಾರಣದ ತೀರ ಸರಳ ಗ್ರಹಿಕೆಗಳ ದೋಷಾರೋಪಣೆ ಹುತ್ತವ ಬಡಿಯುವ ಕೆಲಸವಾಗಬಲ್ಲದಷ್ಟೇ.

**ಫ್ಯಾಸಿಸ್ಟಂ ಅಥವಾ ಆದರ್ಶವಾದ**

ಯುರೋಪಿನಲ್ಲಿ ಇಪ್ಪತ್ತನೆಯ ಶತಮಾನದ ಫ್ಯಾಸಿಸ್ಟಂನ ಸಾಮಾಜಿಕ ಬೇರುಗಳನ್ನು ಹುಡುಕುವ ಪ್ರಯತ್ನ ಮಾಡಲಾಗಿದೆ. ಸಾಮಾಜಿಕ ಪರಿಸರವಾದಿಗಳು ಇಂದಿನ ಪರಿಸರದ ಬಿಕ್ಕಟ್ಟಿಗೆ ಒಂದು ಜನಾಂಗ, ಮತಧರ್ಮ ಅಥವಾ ವಿಜ್ಞಾನ ಮುಂತಾದ ಯಾವುದೇ ಒಂದು ಕಾರಣವೆಂದು ಭಾವಿಸುವುದು ತಪ್ಪೆಂದು ಹೇಳುತ್ತಾ, ಎಲ್ಲ ವೇಳೆಯಲ್ಲಿಯೂ ಇಂತಹ ಚಿಂತನೆಗಳು ಪ್ರಗತಿಪರ ಆದರ್ಶವಾದ ಆಗಿರಬೇಕೆಂದೇನೂ ಇಲ್ಲ ಎಂದು ವಾದಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಅವರು ನಾಜಿಗಳು ಆರ್ಯ ಜನಾಂಗ ಶ್ರೇಷ್ಠತೆಯ ವಾದದೊಂದಿಗೆ ಪರಿಸರವಾದ, ಸಾವಯವ ಕೃಷಿ, ಸಸ್ಯಾಹಾರ, ಪ್ರಕೃತಿ ಪೂಜೆಯನ್ನೂ ತಮ್ಮ ಸಿದ್ಧಾಂತದಲ್ಲಿ ಪ್ರಮುಖವಾಗಿಸಿಕೊಂಡರು ಎಂಬುದರೆಡೆ ಗಮನ ಸೆಳೆದಿದ್ದಾರೆ. ಇಂತಹ ಪ್ರತಿಕ್ರಿಯೆಗೆ ಭಾಗಶಃ ಕಾರಣ ಆಧುನಿಕ ಸಮಾಜ ಹುಟ್ಟುಹಾಕಿದ ಹಲವು ಆಶಯಗಳು ಪೂರ್ಣಗೊಳ್ಳದ್ದು ಅಥವಾ ಹಿಂದಿನ ಸಮಾಜದ ಬಗೆಗಿನ ಮೋಹವೂ ಆಗಿರಬಹುದು. ಕೆಲವೊಮ್ಮೆ ಆಧುನಿಕ ಸಮಾಜದ ಅಗತ್ಯವಾದ ಸಮಾನಾವಕಾಶಗಳ ಸಮಾಜ ರಚಿಸುವಲ್ಲಿನ ಪ್ರಯತ್ನಗಳನ್ನು ಕೆಲವು ವರ್ಗಗಳು ತಮಗೆ ಆಧುನಿಕ ಸಮಾಜದ ಹಿಂದಿನ ಸಮಾಜದಲ್ಲಿದ್ದ 'ಸವಲತ್ತುಗಳನ್ನು ಕಿತ್ತುಕೊಳ್ಳಲಾಗಿದೆ' ಅಥವಾ 'ಅಸಮಾನತೆಗಳನ್ನು ಪೋಷಿಸಲಾಗುತ್ತಿದೆ' ಎಂಬ ತಪ್ಪು ಗ್ರಹಿಕೆಗಳೂ ಆಧುನಿಕ ಸಮಾಜ/ಚಿಂತನೆಗಳ ವಿರೋಧಿ ನಿಲುವುಗಳನ್ನು ಪೋಷಿಸಿರಲೂಬಹುದು. ಹೀಗಾಗಿ, ಬಲಪಂಥೀಯ ಸಾಂಸ್ಕೃತಿಕ ಚಳುವಳಿ ಕಟ್ಟಹೊರಟಿರುವ ಶಕ್ತಿಗಳು ಇಂತಹ ಅಸಮಾಧಾನ ಗಳನ್ನು ಬಳಸುತ್ತಿವೆಯೇ ಎಂಬ ಅಧ್ಯಯನವೂ ಈ ನಿಟ್ಟಿನಲ್ಲಿ ಸರಿಯಾದ ಅವಗಾಹನೆಗೆ ಸಹಾಯಕವಾಗಬಲ್ಲದು.

**ಪ್ರದೀಪ್ ಬೆಳಗಲ್**
**ಗುರುಸಿದ್ಧಮೂರ್ತಿ ಕೆ. ಎಂ.**
ಕೇರಾಫ್ : 'ನಿತ್ಯೋತ್ಸವ', ಡಾ|| ಭರತ್ ಹೆಲ್ತ್ ಕ್ಲಿನಿಕ್ ಎದುರು
ಕಪ್ಪಗಲ್ ರಸ್ತೆ, ಗಾಂಧಿನಗರ, ಬಳ್ಳಾರಿ - ೫೮೩ ೧೦೩

# ಅವ್ವ ಮತ್ತು ಕುಂಕುಮ



**ಮ**ಣ್ಣ ಗೋಡೆಯ ಕಿಟಕಿಯ
ಸರಳುಗಳ ಹರಕು ಮುರುಕು
ಬೆಳಕಿನ ಮಾಡಿನಲ್ಲಿ
ಕನ್ನಡಿಯ ತುಣುಕು,
ಜೇನ ಮೇಣದ ಡಬ್ಬಿ,
ಕುಂಕುಮದ ಬಟ್ಟಲು,
ಇವು ಅವ್ವನ ಸಿಂಗಾರ
ಸಾಮ್ರಾಜ್ಯದ ಸರಕುಗಳು.

ಜಳಕ ಮಾಡಿ ಒಗೆದು ಒಣಗಿಸಿದ
ಹರಕು ಸೀರೆಯ ಸುತ್ತಿಕೊಂಡು
ಮನೆದೇವರ ನೆನೆಯುತ್ತ
ಹಣೆಗೆ ಮೇಣವ ಮೆತ್ತಿಕೊಂಡು
ಇಷ್ಟಗಲ ಕುಂಕುಮವನ್ನು
ಹಚ್ಚಿಕೊಳ್ಳುತ್ತಾಳೆ ಅವ್ವ.

ಕನ್ನಡಿ ಫಳ ಫಳ ನಗುತ್ತದೆ
ಕುಂಕುಮದ ಕೆಂಪ ತುಂಬಿಕೊಂಡು.
ಅವ್ವನ ಮುಖ ಹಿಗ್ಗಿ
ಹೀರೀಕಾಯಿಯಾಗುತ್ತದೆ.

ತಟ್ಟೆಯಲ್ಲಿ ತುರುಕಿ ಕೂಡಿಟ್ಟ,
ಬಾಚುವಾಗುದುರಿದ ತಲೆಗೂದಲ
ಕೊಟ್ಟು ಕೊಂಡ ಬಾಚಣಿಕೆ
ಪಕ ಪಕ ನಗುತ್ತದೆ
ಅಷ್ಟಿಷ್ಟು ಹಲ್ಲುಗಳ ಕಳಕೊಂಡ
ಮುದುಕಿಯಂತೆ. ...

ಮುಂಗೋಳಿಗೂ ಮುನ್ನವೇ
ಎದ್ದು ಮಾಡಿದರೂ
ಮುಗಿಯದ ಕೆಲಸ. ...

ಉಣ್ಣಲೂ ಆಗದೇ ಕೈಲೊಂದು
ರೊಟ್ಟಿಯನ್ನು ಹಿಡಿದೇ
ಓಡುತ್ತಾಳೆ ಕೂಲಿ ಕೆಲಸಕ್ಕೆ
ಹೊತ್ತಾಯಿತೆಂದು. ...

ಬಿಡುವಿಲ್ಲದ ಈ ಓಡಾಟಕ್ಕೆ,
ಬಡತನದ ಕಾದಾಟಕ್ಕೆ,
ಎಂದೂ ಅತ್ತವಳಲ್ಲ, ಬೇಸತ್ತವಳಲ್ಲ,
ದೈವವನು ಬೈದವಳೂ ಅಲ್ಲ.

''ನಿನ್ನ ಕುಂಕುಮ ಎಷ್ಟ ಚೆಂದ''
ಎಂದು ಓರಗಿತ್ತಿಯರು ಹೇಳಿದಾಗ
ಅಪ್ಪ ಉಡುವ ಮಸರಾಯಿ
ಧೋತರದ ಬಿಳಿಚಾಯಿಯಲ್ಲಿ
ತನ್ನದೇ ಬೆವರಿನ ಬಣ್ಣ
ಎಂಬ ಹೆಮ್ಮೆಗೆ ನಾಚಿ
ನೀರಾಗುತ್ತಾಳೆ..
ಮರುಗಳಿಗೆಯೇ
ಆತಂಕದ ಮಂಕು. ...

ಒಂದೂ ಆಡಿದವಳಲ್ಲ,
ಏನೂ ಕೇಳಿದವಳಲ್ಲ,
ಅಪ್ಪ ಅವರಿವರ ಹಿಂದೆ ಹೋಗಿ
ಏನೆಲ್ಲ ರಾಡಿ ಮಾಡಿಕೊಂಡು ಬಂದರೂ
ಗೊಣಗುತ್ತ ಸಬಕಾರ ಹಚ್ಚಿ
ತೊಳೆಯುತ್ತಾಳೆ...!!
''ನನ್ನ ಕುಂಕುಮ ಉಳಸರಿ''
ಎಂದು ಅವರಿವರ ಕಾಲ ಹಿಡಿಯುತ್ತಾಳೆ.
ಬಿಕ್ಕಳಿಸುತ್ತ ರೊಟ್ಟಿ ಬಡಿಯುತ್ತಾಳೆ...!!

ಅಪ್ಪ ಕಾಯಿಲೆ ಬಂದು ಮಲಗಿದಾಗ
ಅವ್ವನ ಕುಂಕುಮದ ಆರೈಕೆ
ಇನ್ನೂ ಜೋರಾಗುತ್ತದೆ.
ಹಣೆಯ ನಿರಿಗೆಯಲಿ ಉದುರಿ
ಮಂಕಾಗಿದ್ದರೆ ಒಳಗೋಡಿಹೋಗಿ
ಹಚ್ಚಿಕೊಳ್ಳುತ್ತಾಳೆ ಮತ್ತೆ

ಯಾಕೋ ಇತ್ತೀಚೆಗೆ ಕನ್ನಡಿ
ನಗುತ್ತಿಲ್ಲ...!
ಅಪ್ಪನ ಕಾಯಿಲೆ ಉಲ್ಬಣಿಸಿದೆ.
ಅಪ್ಪ ಹೊರಟು ಹೋಗುವ ದಿನ
ಅವ್ವನ ಹಣೆಯ ಕುಂಕುಮ
ಇನ್ನೂ ಢಾಳವಾಗಿ ಕೋರೈಸುತ್ತದೆ.

ಅಪ್ಪನನ್ನೂ ಕುಂಕುಮವನ್ನೂ
ಮಗುವಿನಂತೆ ಸಾಕಿದ್ದ
ಅವ್ವನ ಹಣೆ, ಈಗ
ಖಾಲಿಯಿದೆ...(ಕೊರಳೂ...).

ನಿರಂತರ ಓಡಾಡುತ್ತಿದ್ದ
ಅವ್ವ ಸುಮ್ಮನೇ ಕುಳಿತಿರುತ್ತಾಳೆ
ಕಲ್ಲಿನಂತೆ ಕಂಬಕ್ಕೊರಗಿ.

ಕಿಟಕಿಯಲ್ಲಿನ ಮೇಣದ ಡಬ್ಬಿ,
ಕುಂಕುಮದ ಬಟ್ಟಲು,
ಕನ್ನಡಿಯ ತುಣುಕು,
ಬಾಚಣಿಕೆ ಧೂಳು ಹಿಡಿದಿವೆ.

* * *

**ಮಾರುತಿ ದಾಸಣ್ಣವರ**
ಜವಾಹರ ನವೋದಯ ವಿದ್ಯಾಲಯ, ತೇವಾ, ಮಂಜನ್‌ಪುರ ಜಿಲ್ಲೆ
ಕೌಶಾಂಬಿ, ಉತ್ತರ ಪ್ರದೇಶ, ಪಿನ್ - ೨೧೨ ೨೦೭



# ಎಲ್ಲವನ್ನೂ ತಿಳಿದವರು

ಒಮ್ಮೆ ಚೀನಾದ ಪ್ರಸಿದ್ಧ ದಾರ್ಶನಿಕ ಕನ್‌ಫ್ಯೂಷಿಯಸ್ ದೇಶದ ಪೂರ್ವ ಭಾಗದಲ್ಲಿ ಸಂಚರಿಸುತ್ತಿದ್ದಾಗ ಇಬ್ಬರು ಮಕ್ಕಳು ಬಿರುಸಾದ ವಾಗ್ವಾದದಲ್ಲಿ ತೊಡಗಿರುವುದನ್ನು ಕಂಡು ಅದೇನು ವಿಷಯವೆಂದು ಕೇಳಿದ. ಒಬ್ಬ ಹುಡುಗ ಹೇಳಿದ, ''ನನ್ನ ದೃಷ್ಟಿಯಲ್ಲಿ ಸೂರ್ಯ ಬೆಳಗಾಗುವಾಗ ನಮಗೆ ಹತ್ತಿರವಿರುತ್ತಾನೆ, ಮಧ್ಯಾಹ್ನದ ವೇಳೆಗೆ ಆತ ನಮ್ಮಿಂದ ದೂರ ಸರಿದುಬಿಡುತ್ತಾನೆ'' ಮತ್ತೊಬ್ಬ ಹುಡುಗ ಹೇಳಿದ, ''ಉದಯಿಸುವ ಸಮಯದಲ್ಲಿ ಸೂರ್ಯ ನಮ್ಮಿಂದ ದೂರವಿದ್ದು, ಮಧ್ಯಾಹ್ನದ ಹೊತ್ತಿಗೆ ಆತ ನಮಗೆ ಹತ್ತಿರವಾಗುತ್ತಾನೆ.'' ಮೊದಲ ಹುಡುಗ ಹೇಳಿದ, ''ಸೂರ್ಯ ಕಾಣಿಸಿಕೊಳ್ಳುವಾಗ ಅದರ ಗಾತ್ರ ದೊಡ್ಡ ಗಾಡಿಯ ಗಾಲಿಯಷ್ಟು ದೊಡ್ಡದಿರುತ್ತದೆ, ಮಧ್ಯಾಹ್ನದ ಹೊತ್ತಿಗೆ ಅದರ ಗಾತ್ರ ಒಂದು ತಟ್ಟೆ ಅಥವಾ ಬಟ್ಟಲಿನ ಗಾತ್ರದಷ್ಟಾಗುತ್ತದೆ. ಹತ್ತಿರದಲ್ಲಿರುವ ವಸ್ತುಗಳು ದೊಡ್ಡದಾಗಿಯೂ ಹಾಗೂ ದೂರದ ವಸ್ತುಗಳು ಸಣ್ಣದಾಗಿಯೂ ಕಾಣುವುದು ಸಹಜವಲ್ಲವೆ ?'' ಎಂದು ಕೇಳಿದ. ಎರಡನೆಯ ಹುಡುಗ ಹೇಳಿದ, ''ಸೂರ್ಯ ಹೊರ ಬರುವಾಗ ತುಂಬಾ ತಣ್ಣಗಿರುತ್ತಾನೆ, ಆದರೆ ಮಧ್ಯಾಹ್ನದ ಹೊತ್ತಿಗೆ ನಮ್ಮ ಕೈಯನ್ನು ಕುದಿಯುವ ನೀರಿನೊಳಗೆ ಇಟ್ಟರೆ ಸುಡುವ ರೀತಿಯಲ್ಲಿ ಬಿಸಿಯಾಗುತ್ತಾನೆ. ಶಾಖ ಹೊಮ್ಮಿಸುವ ಕಾಯ ನಮಗೆ ಹತ್ತಿರವಿರುವಾಗ ಬಿಸಿಯಾಗಿಯೂ ಹಾಗೂ ದೂರವಿರುವಾಗ ತಣ್ಣನೆ ಅನುಭವ ನೀಡುವುದು ಸತ್ಯವಲ್ಲವೆ ?'' ಕನ್‌ಫ್ಯೂಷಿಯಸ್‌ಗೆ ಈ ಸಮಸ್ಯೆಯನ್ನು ಬಗೆಹರಿಸುವುದು ಹೇಗೆಂದು ತೋಚಲೇ ಇಲ್ಲ. ಆ ಇಬ್ಬರೂ ಮಕ್ಕಳು ಅವನನ್ನು ನೋಡಿ ನಗುತ್ತಾ ಕೇಳಿದರು, ''ಯಾರು ಹೇಳಿದವರು ನಿನ್ನನ್ನು ಜ್ಞಾನಿಯೆಂದು ?''

ಇದೊಂದು ಸಣ್ಣ ಘಟನೆಯಂತೆ ಕಾಣಬಹುದಾದರೂ, ಇದು ತೋರುವ ಹಾದಿ ಬಹಳ ದೊಡ್ಡದು. ಜಗತ್ತಿನ ವಿವಿಧ ನಂಬಿಕೆಗಳ, ಮತಗಳ ಮತಾಚಾರ್ಯರು ಹಾಗೂ ಪ್ರವಾದಿಗಳು ತಮ್ಮ ಬದುಕಿನ ಕಾಲಘಟ್ಟದಲ್ಲಿ ತಾವು ನಂಬಿದ್ದನ್ನು ಅಥವಾ ಅನಿಸಿದ್ದನ್ನು ಜನರಿಗೆ ಸನ್ಮಾರ್ಗದಲ್ಲಿ ನಡೆಯಲೆಂಬ ಉದ್ದೇಶದಿಂದ ಅಂದಿನ ತಮ್ಮ ತಿಳುವಳಿಕೆಯ ಮಿತಿಯಲ್ಲಿ ಬೋಧನೆ ಮಾಡಿದರು. ಹಾಗೆಂದ ಮಾತ್ರಕ್ಕೆ ಎಲ್ಲವನ್ನೂ ಅವರು ತಿಳಿದುಕೊಂಡಿದ್ದರೆಂದು ಭಾವಿಸುವುದು ಎಷ್ಟು ಸರಿ ? ಬಹುಶಃ ಯೇಸು ಕ್ರಿಸ್ತ, ಪ್ರವಾದಿ ಪೈಗಂಬರ್ ಅಥವಾ ಶಂಕರಾಚಾರ್ಯರಂತಹವರು ಇಂದು ಬದುಕಿದ್ದಿದ್ದರೆ ಅವರು ಬೋಧಿಸುತ್ತಿದ್ದ ತತ್ವಗಳು ಬೇರೆಯ ತೆರನದ್ದೇ ಆಗಿರುತ್ತಿದ್ದವು. ನಾವು ಜ್ಞಾನಿಗಳೆಂದುಕೊಂಡವರು ನಮ್ಮೆಲ್ಲರಂತೆ ಮನುಷ್ಯ ಮಾತ್ರರೇ ಆಗಿದ್ದು ತಮ್ಮ ಬದುಕಿನ ರೀತಿ ಹಾಗೂ ಜೀವನ ಮೌಲ್ಯಗಳಿಂದ ಮಹಾತ್ಮರೆನಿಸಿಕೊಂಡರು. ಅವರುಗಳು ವೈರಿಗಳಂತೆ ಕಚ್ಚಾಡುತ್ತಿದ್ದ ಜನರಿಗೆ ಮನುಷ್ಯರಂತೆ ಬದುಕಲು ಹೇಳಿ ಹಲವು ನೀತಿ ನಿಯಮಗಳನ್ನು ರೂಪಿಸಿದರು. ಆದರೆ ಇಂದು ಪೊಳ್ಳು ನಂಬಿಕೆಗಳಿಗೆ ಜೋತುಬಿದ್ದು ಮತ ಗ್ರಂಥಗಳಲ್ಲಿ ಹೇಳಿದುದೇ ಅಂತಿಮವೆಂದು ಭಾವಿಸಿ ಮಾನವೀಯತೆಯ ಮೌಲ್ಯಗಳನ್ನೆಲ್ಲಾ ಗಾಳಿಗೆ ತೂರಲಾಗುತ್ತಿದೆ. ಶ್ರೇಷ್ಠತೆಯ ಅಹಂ ಬಹುತೇಕ ಎಲ್ಲಾ ಧರ್ಮೀಯರನ್ನೂ ಕಾಡುತ್ತಿರುವ ಸಾಮಾನ್ಯ ಪಿಡುಗಾಗಿ ಪರಿಣಮಿಸಿದೆ. ರಕ್ತಪಾತಗಳಿಗೆ ನಾಂದಿ ಹಾಡುತ್ತಾ ಧರ್ಮವೆಂಬ ಹೆಸರಿಗೇ ಕಳಂಕ ಹಚ್ಚಲಾಗುತ್ತಿದೆ. ಧರ್ಮಗಳ ಹೆಸರನ್ನು ಹೇಳಿಕೊಂಡು ಧಾರ್ಮಿಕ ಮುಖಂಡರು, ರಾಜಕೀಯ ನಾಯಕರು, ಅಧಿಕಾರಿಗಳು ತಾವು ಎಲ್ಲವನ್ನೂ ತಿಳಿದ ಸರ್ವಜ್ಞರಂತೆ ತಮ್ಮನ್ನು ತಾವೇ ಬಿಂಬಿಸಿಕೊಂಡು ತಮ್ಮ ಸ್ವಾರ್ಥತೆಯ ಬೇಳೆ ಬೇಯಿಸಿಕೊಳ್ಳುತ್ತಿದ್ದಾರೆ. ಇಂತಹ ಸೋಗಲಾಡಿಗಳು ನೈಜವಾಗಿ ಆಯಾ ಧರ್ಮಗಳಲ್ಲಿ ನಂಬಿಕೆ ಉಳ್ಳವರೇ ಆಗಿರುವುದಿಲ್ಲ, ಅವರಿಗೆ ಯಾವುದೇ ನೈತಿಕ ಭಯವೂ ಇರುವುದಿಲ್ಲ. ಬುದ್ಧಿಜೀವಿಗಳೆನಿಸಿಕೊಂಡ ಬಹಳಷ್ಟು ಮಂದಿ ಇಂತಹವರಿಗೆ ಭೋಪರಾಕ್ ಹೇಳುತ್ತಾ ಸಮಯಸಾಧಕರಾಗುತ್ತಿದ್ದಾರೆ. ಜಗತ್ತಿನ ವಿದ್ಯಮಾನಗಳ ಬಗೆಗಿನ ಅರಿವು ಪರಮ ಸತ್ಯ ಎಂಬುದಕ್ಕಿಂತ, ಅದು ಸಾಪೇಕ್ಷವಾದುದು. ನಮ್ಮ ಅರಿವಿನ ಹರವು ವಿಸ್ತಾರವಾದಂತೆಲ್ಲ ನಮ್ಮ ಅರಿವೂ ಕೂಡ ಬದಲಾವಣೆಗೊಳಪಡುತ್ತದೆ. ಇತ್ತೀಚೆಗೆ ದೇವಕಣಗಳ ಬಗೆಗಿನ ಸಂಶೋಧನೆಯ ಫಲಿತಾಂಶ ಪ್ರಕಟಗೊಂಡಾಗ ತಮ್ಮ ಧರ್ಮಗ್ರಂಥಗಳಲ್ಲಿ ಈ ಬಗ್ಗೆ ಹಿಂದೆಯೇ ಹೇಳಲಾಗಿದೆಯೆಂಬ ಪುಕಾರು ಎಬ್ಬಿಸಿ ತಮ್ಮತಮ್ಮ ಧರ್ಮಗ್ರಂಥಗಳೇ ವಿಜ್ಞಾನದ ಮೇರು ಕೃತಿಗಳೆಂಬ ಹುಸಿ ನಂಬಿಕೆಗಳನ್ನು ಹರಡಲೆತ್ನಿಸಿದ ಬೇರೆ ಬೇರೆ ಧರ್ಮಗಳ ಮತಾವಲಂಬಿ ಜನರು ಡಾರ್ವಿನ್ನನ ವಿಕಾಸವಾದ, ಗ್ರೆಗೊರಿ ಮೆಂಡಲ್‌ನ ಅನುವಂಶೀಯ ವಾದಗಳಿಗೆ ಧಾರ್ಮಿಕ ಮನ್ನಣೆ ನೀಡಬಯಸುವುದಿಲ್ಲ. ಇಂತಹ ಸಂದರ್ಭದಲ್ಲಿ ಆ ಕಾಲದ ಪ್ರಖ್ಯಾತ ದಾರ್ಶನಿಕ ಕನ್‌ಫ್ಯೂಷಿಯಸ್‌ನನ್ನು ಪ್ರಶ್ನಿಸಿದ ಚೀನಾದ ಆ ಮಕ್ಕಳ ಧೈರ್ಯ ಮತ್ತು ಸ್ಥೈರ್ಯವನ್ನು ಬೆಳೆಸಿಕೊಳ್ಳಬೇಕಾಗಿರುವುದು ಜಗತ್ತಿನ ಪ್ರಜ್ಞಾವಂತರೆಲ್ಲರ ಕರ್ತವ್ಯವಾಗಿದೆ.

**ಸಿದ್ದರಾಜು, ಕೊತ್ತತ್ತಿ**
ನಂ. ೧೩೨೪/೨೫೫ ಎ, ೨ನೇ ಕ್ರಾಸ್, ನೆಹರು ನಗರ, ಮಂಡ್ಯ ಜಿಲ್ಲೆ

## ಅಭಿನಂದನೆಗಳು



ನವಕರ್ನಾಟಕ ಪ್ರಕಟಿಸಿರುವ 'ಜ್ಞಾನೇಂದ್ರಿಯಗಳು' ಕೃತಿಯ ಲೇಖಕ ಡಾ॥ ನಾ. ಸೋಮೇಶ್ವರ ಅವರಿಗೆ ೨೦೧೨ನೇ ಸಾಲಿನ 'ಕರ್ನಾಟಕ ವಿಜ್ಞಾನ–ತಂತ್ರಜ್ಞಾನ ಅಕಾಡೆಮಿ'ಯವರು ನೀಡುವ ಶ್ರೇಷ್ಠ ಲೇಖಕ ಪ್ರಶಸ್ತಿ ನೀಡಿ ಗೌರವಿಸಲಾಗಿದೆ. ಪ್ರಶಸ್ತಿ ಪುರಸ್ಕೃತರನ್ನು 'ಹೊಸತು' ಮತ್ತು 'ನವಕರ್ನಾಟಕ ಪ್ರಕಾಶನ' ಅಭಿನಂದಿಸುತ್ತವೆ.



# ಎರಕಹೊಯ್ಯುವ ಶಿಲ್ಪಿ ವಿಶ್ವೇಶ್ವರಯ್ಯ ಟಿ. ಎನ್.



ಮಣ್ಣಿನ ಶಿಲ್ಪ, ಸ್ವಾಮಿ ವಿವೇಕಾನಂದ

ಸಮಕಾಲೀನ ಶಿಲ್ಪಕಲೆಯ ದಾರಿದ್ರ್ಯವನ್ನು ನೀಗುವಲ್ಲಿ ತೊಡಗಿರುವ ಕೆಲವೇ ಪ್ರತಿಭೆಗಳಲ್ಲಿ ಒಬ್ಬರು ವಿಶ್ವೇಶ್ವರಯ್ಯ ಟಿ. ನಾಯಿಂದ್ರಕರ್. ವಿವಿಧ ಮಾಧ್ಯಮಗಳಲ್ಲಿ ಅಸಂಗತ, ವಿಕೃತ ಸೌಂದರ್ಯಗಳಿಂದ ಕೂಡಿದ ಸುಂದರ ಶಿಲ್ಪಗಳು ಇವರಿಂದ ಸೃಷ್ಟಿಗೊಂಡಿವೆ.

ಅಕಡೆಮಿಕ್ ಶೈಲಿಯ ಶಿಲ್ಪ ರಚನೆಯಲ್ಲೂ ಸಿದ್ಧಹಸ್ತರಾಗಿರುವ ಇವರಿಂದ ಬೆಳಗಾವಿಯ ನೂತನ ಸುವರ್ಣ ಸೌಧಕ್ಕಾಗಿ ಕಂಚಿನ ಅಶೋಕಸ್ತಂಭ ನಿರ್ಮಾಣವಾಗಿದೆ. ಅಲ್ಲದೆ ಬುದ್ಧ, ಅಶ್ವಾರೂಢ ಬಸವೇಶ್ವರ ಬೃಹತ್ ಶಿಲ್ಪ, ವಿವೇಕಾನಂದ, ಅಂಬೇಡ್ಕರರ ಶಿಲ್ಪಗಳೂ ಸೃಷ್ಟಿಯಾಗಿವೆ.

ಸದ್ಯ ಗುಲಬರ್ಗಾದಲ್ಲಿ ''ವಿ.ಟಿ.ಎನ್. ಕ್ರಿಯೇಟಿವ್ ಆರ್ಟ್ ಸ್ಟುಡಿಯೋ'' ಮಾಡಿಕೊಂಡು ಶಿಲ್ಪಗಳನ್ನು ಎರಕಹೊಯ್ಯುತ್ತಿರುವರು.

**ಡಾ॥ ಶಿವಾನಂದ ಎಚ್. ಬಂಟನೂರ, ದೃಶ್ಯಕಲಾ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ – 583276, ಹೊಸಪೇಟೆ ತಾಲ್ಲೂಕು. ಬಳ್ಳಾರಿ ಜಿಲ್ಲೆ**



ಮೃತ್ತಿಕಾ ಮಾಧ್ಯಮ, ಸೃಜನಾತ್ಮಕ ಶಿಲ್ಪ



ಸ್ಟೇನ್‌ಲೆಸ್ ಸ್ಟೀಲ್, ಸೃಜನಾತ್ಮಕ ಶಿಲ್ಪ



ಸ್ಟೇನ್‌ಲೆಸ್ ಸ್ಟೀಲ್, ಸೃಜನಾತ್ಮಕ ಶಿಲ್ಪ



ಮೃತ್ತಿಕಾ ಮಾಧ್ಯಮ, ಸೃಜನಾತ್ಮಕ ಶಿಲ್ಪ

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. Siddanagouda Patil

**HOSATHU** Kannada Monthly / APRIL 2013 / Rs. 12
RNI Regd. KARKAN / 1999 / 614. Karnataka Regd. KRNA/BGE/7/2012-14
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)